# ಸುಬೋಧ




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



*www.thraithashakam.org*



# ಸುಬೋಧ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (74) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 180/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ! ಭಗವಂತನಾ!!
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಟಿ–ಸೃಷ್ಟಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ವಿಷಯ ಸೂಚಿಕೆ

# ವಿಷಯ ಸೂಚಿಕೆ

# ಸೃಷ್ಟಿ ರಹಸ್ಯ



ಜಗತ್ತು ಇಲ್ಲದ ಮೊದಲು ಪರಮಾತ್ಮ ಸ್ತ್ರೀ ಅಲ್ಲ ಪುರುಷನು ಅಲ್ಲ. ಏನೂ ಅಲ್ಲದ ಪರಮಾತ್ಮ ಜಗತ್ತನ್ನು ಸೃಷ್ಟಿಸಬೇಕೆಂದುಕೊಂಡು, ಸ್ತ್ರೀ ತತ್ತ್ವಹೊಂದಿರುವ ಪ್ರಕೃತಿಯನ್ನು ತಯಾರು ಮಾಡಿದ್ದಾನೆ. ಅದಕ್ಕಿರಬೇಕಾದ ಲಕ್ಷಣಗಳನ್ನು, ಇರಬೇಕಾದ ಪದ್ಧತಿಗಳನ್ನು ಎಲ್ಲವನ್ನು ನಿರ್ಣಯಿಸಿದ್ದಾನೆ. ಪ್ರಕೃತಿ ಸ್ತ್ರೀ ಸ್ವರೂಪವಾದುದು ಆದ್ದರಿಂದ ಅದಕ್ಕಿಂತ ಪೂರ್ತಿ ವಿಲಕ್ಷಣವಾಗಿ ನಿಂತಿದ್ದಾನೆ, ಆ ಲಕ್ಷಣವೇ ಪರುಷನು. ತನಗೆ ಪ್ರಕೃತಿ, ಪ್ರಕೃತಿಗೆ ತಾನು ಪೂರ್ತಿ ವಿರುದ್ಧದಿಕ್ಕುಗಳಲ್ಲಿ ಇರುವಂತೆ ತಿಳಿದ ಪರಮಾತ್ಮ, ಇಬ್ಬರು ಸಮಾನ ಸ್ಪರ್ಧಿಗಳಾಗಿ ಇದ್ದಾಗಲೇ ತಾನು ಆಡುವ ಆಟ ರಸವತ್ತರವಾಗಿ ಇರುತ್ತದೆಂದು, ತನಗೆ ಸಮಾನವಾಗಿ ಪ್ರಕೃತಿಗೆ ಅಧಿಕಾರ ಕೊಟ್ಟಿದ್ದಾನೆ. ಪ್ರಕೃತಿ ಪರಮಾತ್ಮನಿಗೆ ವಿರುದ್ಧವೇ ಆದರೆ ಶತ್ರು ಅಲ್ಲ. ಪರಮಾತ್ಮ ಪ್ರಕೃತಿ ಕೈಯಲ್ಲಿ ವಿರುದ್ಧತೆಯನ್ನು ಎದುರಿಸುವುದು ಸಹಜವೇ ಆದರೂ ಒಬ್ಬರಿಗೊಬ್ಬರು ಶತ್ರುಗಳು ಅಲ್ಲ. ಒಂದುಸಲ ಪ್ರಕೃತಿಯನ್ನು ಹುಟ್ಟಿಸಿದ ಪರಮಾತ್ಮ ಮತ್ತೆ ಒಂದುಕಾಲದಲ್ಲಿ ತನ್ನಲ್ಲಿಯೇ ಲೀನ ಮಾಡಿಕೊಂಡು, ಪ್ರಕೃತಿಯನ್ನು ಇಲ್ಲದಂತೆ ಮಾಡುವನು. ಪ್ರಕೃತಿಯನ್ನು ಹುಟ್ಟಿಸಿದವನು, ಪೋಷಿಸುವವನು, ಮತ್ತೆ ಇಲ್ಲದಂತೆ ಮಾಡುವವನು ಪರಮಾತ್ಮ. ಹುಟ್ಟಿಸಿದ ತಂದೆಯಾಗಿ, ಭರಿಸುವ ಪತಿಯಾಗಿ, ನಶಿಸುವಂತೆ ಮಾಡುವ ಕಾಲನಾಗಿ ಪ್ರಕೃತಿಗೆ ಎಲ್ಲಾ ತಾನಾಗಿದ್ದು, ಪ್ರಕೃತಿಯಲ್ಲಿನ ಶಕ್ತಿಯಾಗಿ ಸಹ ತಾನಾಗಿದ್ದಾನೆ. ಎಷ್ಟೋ ವಿಶಾಲವಾಗಿರುವವನು ಸ್ವಲ್ಪ ವಿಶಾಲವಾದ ಪ್ರಕೃತಿಯುನ್ನು ತಯಾರುಮಾಡಿ, ಜಗತಿ ಎನ್ನುವ ಆಟವನ್ನು ಆಡುತ್ತಿದ್ದಾನೆ. ಆ ಆಟದಲ್ಲಿ ಏನು ಅಲ್ಲದ ಪರಮಾತ್ಮ ಪುರುಷನ ವೇಷಧಾರಿಯಾಗಿದ್ದಾನೆ. ಜಗತ್ತು ನಾಟಕದ ಪ್ರಕಾರ ಪರಮಾತ್ಮ ಪುರುಷನು. ನಾಟಕಕ್ಕೆ ಅತೀತವಾಗಿ ನೋಡಿದರೆ ಸ್ತ್ರೀ ಪುರುಷ ಏನು ಅಲ್ಲದಿರುವವನು. ಪ್ರಕೃತಿಯನ್ನು ಪಂಚಭೂತಗಳಾಗಿ ಮಾಡಿ ಪ್ರಪಂಚ ಅಂದಿದ್ದೇವೆ. ಪ್ರಪಂಚವನ್ನು ಸೃಷ್ಟಿಸಿದ ಪರಮಾತ್ಮ ಸಾವು ಹುಟ್ಟುಗಳಿರುವ ಜಗತ್ತನ್ನು ಸೃಷ್ಟಿಸಲ್ಪಟ್ಟಿದ್ದಾನೆ. ಹುಟ್ಟು ಸಾವುಗಳಿರುವ ಜೀವರಾಶಿಗಳನ್ನು ಸೃಷ್ಟಿಸಿ ಪ್ರಪಂಚದಲ್ಲಿ ಜಗತ್ತನ್ನು ನಿರ್ಮಿಸಿದ್ದಾನೆ. **'ಜ'** ಅಂದರೆ ಹುಟ್ಟುವುದು **'ಗತಿ'**

**ಅಂದರೆ** ಸಾಯುವುದೆಂದು, ಜಗತ್ತು ಎಂದರೆ ಹುಟ್ಟು ಸಾವುಗಳಿರುವುದೆಂದು ತಿಳಿಯುವಂತೆ ಜೀವಸಮುದಾಯಕ್ಕೆ "ಜಗತಿ" ಎಂದು ಹೆಸರು ಇಟ್ಟಿದ್ದಾರೆ. ಪ್ರಕೃತಿಯೆಂಬ ಪ್ರಪಂಚವನ್ನು ತಯಾರು ಮಾಡಿದ ಪರಮಾತ್ಮ ಅದರಲ್ಲಿ ಜಗತ್ತು ಎನ್ನುವ ಜೀವರಾಶಿಗಳನ್ನು ತಯಾರು ಮಾಡಿದ್ದಾನೆ. ಪ್ರಕೃತಿ ಪುರುಷರು ಸಮಾನವಾದವರಾಗಿದ್ದು, ಅಂದರೆ ಪ್ರಪಂಚ ಪರಮಾತ್ಮ ಸಮಾನವಾದವರಾಗಿದ್ದು ನಂತರ ಪ್ರತ್ಯೇಕವಾಗಿ ಹುಟ್ಟಿ ಬಂದಿರುವುದು ಜಗತಿ. ಈಗಲೂ ಪರಮಾತ್ಮ, ಪ್ರಪಂಚವನ್ನು ಜಗತ್ತನ್ನು ಎರಡನ್ನು ಸೃಷ್ಠಿಸಿದ್ದಾನೆ. ತನ್ನೊಂದಿಗೆ ಸೇರಿಸಿಕೊಂಡರೆ ಮೂರಾಗುತ್ತವೆ. ಮೊದಲು ಏನು ಅಲ್ಲದ ಪರಮಾತ್ಮ ಪ್ರಕೃತಿಯನ್ನು ತಯಾರು ಮಾಡಿ ತಾನು ಪುರುಷನಾಗಿ ಪ್ರಕೃತಿಯನ್ನು ಪತ್ನಿಯಾಗಿ ಮಾಡಿಕೊಂಡು ತಾನು ಪತಿಯಾಗಿದ್ದು ಜಗತ್ತು ಅನ್ನುವ ಪ್ರತ್ಯೇಕವಾದ ಸಂತಾನವನ್ನು ತಯಾರು ಮಾಡಿದ್ದಾನೆ. ಈ ಸಂಬಂಧಗಳು ಇಲ್ಲದಂತೆ ನೋಡಿದರೆ, ಏನು ಅಲ್ಲದ ಪರಮಾತ್ಮ ತನ್ನಿಂದ ಮೂರು ಭಾಗಗಳನ್ನು ಸೃಷ್ಠಿಸಿದ್ದಾನೆ, ಅವುಗಳೇ ಪ್ರಕೃತಿ, ಪುರುಷ, ಜಗತ್ತು, ಪ್ರಕೃತಿ ಸ್ತ್ರೀಯೆಂದು, ಪರಮಾತ್ಮ ಪುರುಷನೆಂದು, ಜಗತ್ತು ನಪುಂಸಕನೆಂದು ತಿಳಿಯಬೇಕು. ಮಧ್ಯದಲ್ಲಿರುವ ನಪುಂಸಕನನ್ನು ಈಕಡೆ ಪ್ರಕೃತಿ ತನ್ನ ಕಡೆ ಸೆಳೆದುಕೊಳ್ಳುವುದು, ಆ ಕಡೆ ಪರಮಾತ್ಮ ತನ್ನ ಕಡೆ ಸೆಳೆದುಕೊಳ್ಳುವುದು ಮುಖ್ಯವಾದ ಆಟ. ಆಟಕ್ಕೆಂದು ಒಂದು ಪದ್ಧತಿ ಇರುತ್ತದೆ. ಆಟ ಪದ್ಧತಿಗಳನ್ನು ನಿರ್ಣಯಿಸಿ ಆಟವನ್ನು ಇಟ್ಟಿದ ಪರಮಾತ್ಮ ತಾನು ಎಲ್ಲವುದಕ್ಕೂ ಸೃಷ್ಠಿಕರ್ತ, ದೊಡ್ಡವನು ಆದರೂ ತಾನು ನಿರ್ಣಯಿಸಿದ ಪದ್ಧತಿಗಳ ಪ್ರಕಾರ ಆಟ ಆಡುತ್ತಿದ್ದಾನೆ. ಈ ಆಟಕ್ಕೆ ಉಳಿದ ಆಟಗಳಂತೆ ಸ್ವಲ್ಪ ಕಾಲನಿರ್ಣಯವಿದೆ. ಪುಟ್‌ಬಾಲ್ ಆಟಕ್ಕೆ ಒಂದುವರೆ ಗಂಟೆ, ಕ್ರಿಕೆಟ್ ಆಟಕ್ಕೆ ಐವತ್ತು ಓವರ್‌ಗಳು ಅನ್ನುವಂತೆ, ಜಗತ್ತು ಅನ್ನುವ ಆಟಕ್ಕೆ ಸಾವಿರಯುಗಗಳು ಅಥವಾ 108 ಕೋಟಿ ವರ್ಷಗಳ ಪರಿಮಿತಿ ಇದೆ. ನಂತರ ಸ್ವಲ್ಪ ವಿರಾಮ ಆ ನಂತರ ಆಟ ಸಾಗುವುದು ನಡೆಯುತ್ತಿದೆ. ಆಟದ ಸಮಯ 108 ಕೋಟಿಗಳ ವರ್ಷಗಳು. ವಿರಾಮ ಸಹ ಅಷ್ಟೇ ಸಮಯ.

ಏನು ಅಲ್ಲದಿರುವವನು, ಇಂಥದೆಂದು ಯಾರಿಂದಲೂ ಹೇಳಲ್ಪಡದಿರುವವನು, ಮೊದಲು ಪ್ರಪಂಚವನ್ನು ನಂತರ ಜಗತ್ತನ್ನು ತಯಾರು ಮಾಡಿದ್ದಾನಲ್ಲವೆ! ಪ್ರಕೃತಿಯನ್ನು ತಯಾರುಮಾಡಿ ತಾನು ಪುರುಷನೆಂಬ ಗುರುತು ತಂದುಕೊಂಡಿದ್ದಾನೆ. ತಾನು ಪುರುಷನಾಗಿ, ತನ್ನ ಬೀಜವನ್ನು ಹೊರೆಸಿ ಗರ್ಭವನ್ನು ಧರಿಸುವ ಪ್ರಕೃತಿಯನ್ನು ಐದು ಭಾಗಗಳು ಮಾಡಿದ್ದಾನೆ. ಅಂತಹ ಪ್ರಕೃತಿಯನ್ನೇ ಪಂಚಭೂತಗಳೆಂದು, ಪ್ರಪಂಚವೆಂದು ಅನ್ನುತ್ತಿದ್ದೇವೆ. ತನ್ನಿಂದಲೇ ತಯಾರಾಗಿ ರುವ ಜಗತ್ತನ್ನು ಮೂರು ಭಾಗಗಳಾಗಿ ವಿಭಜಿಸಿದ್ದಾನೆ. ಜೀವರೂಪವಾದ ಜಗತ್ತನ್ನು ಜೀವಾತ್ಮಯೆಂದು, ಆತ್ಮ ಎಂದು, ಪರಮಾತ್ಮ ಎಂದು ಮೂರು ವಿಧಗಳಾಗಿ ಹೇಳಬಹುದು. ಜೀವಾತ್ಮವೆಂದು, ಆತ್ಮಯೆಂದು, ಪರಮಾತ್ಮಯೆಂದು ಮೂರು ವಿಧಗಳಾಗಿ ಹೇಳಬಹುದು. ಜೀವಾತ್ಮವನ್ನು, ಆತ್ಮವನ್ನು ತಯಾರುಮಾಡಿ ತಾನು ಪರಮಾತ್ಮನೆಂಬ ಗುರುತು ತಂದುಕೊಂಡಿದ್ದಾನೆ. ಪ್ರಕೃತಿ ಪಕ್ಕದಲ್ಲಿ ಪುರುಷನಾಗಿ, ಆತ್ಮಗಳ ಪಕ್ಕದಲ್ಲಿ ಪರಮಾತ್ಮನಾಗಿ ಹೇಳಲ್ಪಡುತ್ತಿದ್ದಾನೆ, ಪ್ರಕೃತಿ ಇರುವಾಗ ಆತ್ಮಗಳು ಇರುವಾಗ ಮಾತ್ರವೆ ಪುರುಷನು, ಆಗಲೇ ಪರಮಾತ್ಮ ಎಂದು ಕರೆಯುವುದಕ್ಕೆ ಆಧಾರವಿದೆ. ಅವು ಇಲ್ಲದಿದ್ದರೆ ಆತನನ್ನು ಏನೆಂದು ಹೇಳುವುದಕ್ಕೂ ಸಾಧ್ಯವಿಲ್ಲ. ಏನು ಅಲ್ಲದಿರುವವನು ಪ್ರಪಂಚದಿಂದ ಪುರುಷನೆಂದು, ಆತ್ಮಗಳಿಂದ ಪರಮಾತ್ಮ ಎಂದು ಕರೆಯಲ್ಪಡುತ್ತಿದ್ದಾನೆಂದು ಅರ್ಥವಾಗಿದೆಯೆಂದುಕೊಳ್ಳುತ್ತೇವೆ. ಪ್ರಕೃತಿ ಪುರುಷರಿಗೆ ಹುಟ್ಟಿರುವುದು ಜೀವಸಮುದಾಯವಾದ ಜಗತ್ತು. ಜಗತ್ತಿನಲ್ಲಿ ಸಹ ತಂದೆತಾಯಿಗಳಾದ ಪ್ರಕೃತಿ ಪುರುಷರ ಲಕ್ಷಣಗಳಿರುವಂತೆ ಪರಮಾತ್ಮನಿಂದ ಅಳವಡಿಸಲಾಗಿದೆ.

ಪ್ರಕೃತಿಯಲ್ಲಿ ಪುರುಷನಿಗಿಂತ ವಿರುದ್ಧ ಲಕ್ಷಣಗಳಿರುವಂತೆ ಜೋಡಣೆ ಇದೆ. ಜಗತ್ತಿನಲ್ಲಿ ಮಾತ್ರ ಪ್ರಕೃತಿ ಪುರುಷರ ಎರಡರ ಲಕ್ಷಣಗಳು ಮಿಳಿತವಾಗಿವೆ. ಜೀವರೂಪವಾದ ಜಗತ್ತಿನಲ್ಲಿ ಒಂದು ಪರಮಾತ್ಮ ಸಂಬಂಧಿತ ಜೀವಾತ್ಮ ಆತ್ಮಗಳು, ಮತ್ತು ಎರಡು ಪ್ರಕೃತಿ ಸಂಬಂಧಿತ ಶರೀರಗಳು ಗುಣಗಳು ಇವೆ. ಅಷ್ಟೇ

ಅಲ್ಲದೆ ದೇವರಿದ್ದಾನೆಂಬ ನಂಬಿಕೆ ಆತ್ಮ ಪರವಾಗಿ, ಇಲ್ಲವೆಂಬ ದೇವರಿಗೆ ವಿರುದ್ಧತೆಯ ಪ್ರಕೃತಿ ಪರವಾಗಿ ಎರಡು ಇವೆ. ಜಗತ್ತಾಗಿರುವ ಮಾನವರಲ್ಲಿ ಪ್ರಕೃತಿ ಪುರುಷರ ಲಕ್ಷಣಗಳಿದ್ದು ಪ್ರಕೃತಿ ಪುರುಷ ಹೀಗೆ ಇದ್ದಾರೆಂದು ತಿಳಿಸುವ ಸಲುವಾಗಿ ಪ್ರಕೃತಿಗೆ ಪ್ರತಿರೂಪವಾಗಿ ಸ್ತ್ರೀ ಶರೀರಗಳು, ಪರಮಾತ್ಮನಿಗೆ ಪ್ರತಿರೂಪವಾಗಿ ಪುರುಷನ ಶರೀರಗಳು ತಯಾರಾಗಿವೆ, ಪ್ರಕೃತಿ ಪರಮಾತ್ಮರೆ ಅಲ್ಲದೆ ಜಗತ್ತು ಸಹ ಇದೆಯೆಂದು ತಿಳಿಯುವಂತೆ ಜಗತ್ತಿಗೆ ಪ್ರತಿರೂಪವಾಗಿ ನಪುಂಸಕರು ಸಹ ತಯಾರಾಗಿದ್ದಾರೆ. ಸ್ತ್ರೀಯರು, ಪುರುಷರು, ನಪುಸಂಕರು ಮೂವರು ಪ್ರಕೃತಿ, ಪರಮಾತ್ಮ, ಜಗತ್ತಿಗೆ ಪ್ರತಿರೂಪಗಳಾಗಿದ್ದಾರೆ. ಪ್ರಕೃತಿ= ಸ್ತ್ರೀ, ಜಗತ್ತು=ನಪುಂಸಕನು, ಪರಮಾತ್ಮ=ಪುರುಷನು (ಗಂಡು). ಹುಟ್ಟಿದ ಪ್ರಕೃತಿಗೆ ಹೆಂಗಸರನ್ನು, ಜಗತ್ತಿಗೆ ಶಿಖಂಡಿಯನ್ನು, ಪರಮಾತ್ಮನಾಗಿ ಇರುವವನಿಗೆ ಗಂಡಸರನ್ನು ಗುರುತಿಗಾಗಿ ಇಟ್ಟು ತನ್ನ ಸೃಷ್ಠಿ ಹೀಗೇ ಇದೆಯೆಂದು ಎಲ್ಲರಿಗೂ ತಿಳಿಯುವಂತೆ ಮಾಡಿದ್ದಾನೆ. ಅಷ್ಟೇ ಅಲ್ಲದೆ ಪರಮಾತ್ಮ ಪ್ರಕೃತಿ ಎರಡರಿಂದಲೇ ಜಗತ್ತು ಹುಟ್ಟಿದೆ ಎಂದು ತಿಳಿಯುವಂತೆ ಹೆಣ್ಣು ಗಂಡಿಗೆ ಸಂತಾನ ಹುಟ್ಟುವಂತೆ ಮಾಡಿದ್ದಾನೆ. ಎಲ್ಲರಿಗೂ ಕಾಣಿಸುವ ತಂದೆ, ತಾಯಿ, ಸಂತಾನದ ಅರ್ಥ ಆದಿಯಲ್ಲಿ ಸೃಷ್ಠಿ ವಿಧಾನವೆಂದು ತಿಳಿಯಬೇಕು. ಎಲ್ಲದರಲ್ಲಿ ಬುದ್ಧಿಯನ್ನು ಉಪಯೋಗಿಸುವ ಮನುಷ್ಯನು ಸ್ತ್ರೀಗೆ ಭಿನ್ನವಾಗಿರುವ ಪುರುಷನ ಕುರಿತಾಗಲಿ, ಅವರಿಗೆ ಉಂಟಾಗುವ ಸಂತಾನದ ಕುರಿತಾಗಲಿ ಏಕೆ ಹೀಗಿದೆ ಎಂದು ಸ್ವಲ್ಪವೂ ಯೋಚಿಸುತ್ತಿಲ್ಲ. ಆಧ್ಯಾತ್ಮಿಕ ವಿದ್ಯೆಯಲ್ಲಿ ಅಕ್ಷರಾಭ್ಯಾಸವಾದ ಸೃಷ್ಟಿ ರಹಸ್ಯವನ್ನು ತಿಳಿಯದೇ ಹೋದರೆ ಆಧ್ಯಾತ್ಮಿಕವೇ ತಿಳಿಯದಂತಾಗುತ್ತದೆ.

ಇದು ಒಂದು ಆಟವೆಂದು, ದೇವರಿಗೂ ಪ್ರಕೃತಿಗೂ ಮಧ್ಯದಲ್ಲಿ ನಡೆಯುವ ಶತ್ರುತ್ವರಹಿತ ಹೋರಾಟವೆಂದು ತಿಳಿಯಬೇಕು. ಪ್ರಕೃತಿ ಪರಮಾತ್ಮರ ಆಟದಲ್ಲಿ ಜೀವಿಯನ್ನು ಯಾರಕಡೆ ಅವರು ಸೆಳೆದುಕೊಳ್ಳುವುದಕ್ಕೆ ನೋಡುತ್ತಿದ್ದಾರೆ. ಪರಮಾತ್ಮ ತನ್ನ ಜ್ಞಾನವನ್ನು ಬೋಧಿಸಿ ತನ್ನಕಡೆ ಬರುವಂತೆ ಮಾಡಿಕೊಳ್ಳುವುದು ತನ್ನ ಆಟದ ಕರ್ತವ್ಯವಾಗಿದ್ದು, ಪ್ರಕೃತಿ ತನ್ನ ಆಯುಧಗಳಾದ ಗುಣಗಳಿಂದ

ಮನುಷ್ಯನಿಗೆ ಸಮಯ ಸಹನೆ ಇಲ್ಲದಂತೆ ಮಾಡಿ, ದೇವರನ್ನು ಕುರಿತು ಯೋಚಿಸುವ ಅವಕಾಶವೇ ಮಾನವರಿಗೆ ಇಲ್ಲದಂತೆ ಮಾಡುತ್ತಿದೆ. ಎಲ್ಲರನ್ನು ಅವರವರ ಕೆಲಸಗಳಲ್ಲಿ ಇರಿಸಿ, ಗಮನವನ್ನು ಆ ಕೆಲಸಗಳ ಮೇಲೆ ಮರಳಿಸಿ, ಆಸೆಯಿಂದ ಅದಕ್ಕೆ ಅನುಬಂಧ ಗುಣಗಳಿಂದ ಮನುಷ್ಯನನ್ನು ದೇವರಕಡೆ ಹೋಗದಂತೆ ಮಾಡುತ್ತದೆ. ಸೃಷ್ಠಿಯಲ್ಲಿ ಪರಮಾತ್ಮನಿಗೂ ಪ್ರಕೃತಿಗೂ ಮಧ್ಯ ನಡೆಯುವ ಅತಿದೊಡ್ಡ ಈ ಆಟಕ್ಕೆ ಹೆಸರು ಇಲ್ಲ. ಪ್ರಕೃತಿ ಮಾಯರೂಪದಲ್ಲಿ ತನ್ನನ್ನು ಯಾರು ಗುರುತಿಸಲಾರದಂತೆ ಆಡುತ್ತಾ ಎಲ್ಲರನ್ನು ತನ್ನಕಡೆ ಸೆಳೆದುಕೊಳ್ಳುತ್ತಿದೆ. ಜಗತ್ತಿನಲ್ಲಿ ಯಾರಾದರೂ ದೇವರ ಧ್ಯಾಸಹೊಂದಿದರೂ, ದೇವರನ್ನು ಕುರಿತು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸಿದರೂ, ಅವನ ಮೇಲೆ ಮಾಯೆ (ಪ್ರಕೃತಿ) ಪ್ರತ್ಯೇಕವಾಗಿ ದೃಷ್ಠಿಹರಿಸಿ, ಅವನನ್ನು ಸಹ ತನ್ನ ಬುಟ್ಟಿಯಲ್ಲಿ ಹಾಕಿಕೊಳ್ಳುತ್ತಿದೆ. ದೇವರು, ಮಾಯೆಯೊಂದರ ಹೋರಾಟದಲ್ಲಿ ಪ್ರಸ್ತುತ ಕಾಲದಲ್ಲಿ ಮಾಯೆಗೇ ಹೆಚ್ಚಿನ ಬಲವಿರುವಂತೆ ಅದರ ಕಡೆಯೇ ಶೇ.99 ರಷ್ಟು ಮನುಷ್ಯರಿರು ವಂತೆ ತಿಳಿಯುತ್ತದೆ. ಇಂತಹ ಸಂದರ್ಭಗಳಲ್ಲಿ ದೇವರ ಸೋಲು ತಪ್ಪುವುದಿಲ್ಲವೇನೋ ಅನಿಸುವ ಸಮಯದಲ್ಲಿ, ಪರಮಾತ್ಮನು ಸಹ ತಾನು ಚೆನ್ನಾಗಿ ಆಡಿ ಗೆಲ್ಲುವುದಕ್ಕೆ ಪ್ರಯತ್ನಿಸಬೇಕಲ್ಲವೆ! ಆದ್ದರಿಂದ ಆತನ ಪ್ರಯತ್ನದಲ್ಲಿ ಭಾಗವಾಗಿ ಮನುಷ್ಯನಾಗಿ ಮನುಷ್ಯರ ಮಧ್ಯದೊಳಗೆ ಬಂದು, ತನ್ನನ್ನು ಕುರಿತು ತಾನೇ ಹೇಳಿಕೊಂಡು, ತನ್ನಕಡೆ ಮರಳಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾನೆ. ಆಟ ಅಂದರೆ ಸೋಲು ಗೆಲುವುಗಳ ಮಧ್ಯ ಸಾಗುವ ಹೋರಾಟ ಅಲ್ಲವೆ! ಮೊದಲೇ ಹೇಳಿದ್ದೇವೆ ಇದು ಶತ್ರುತ್ವರಹಿತ ಯುದ್ಧವೆಂದು. ಈ ಹೋರಾಟದಲ್ಲಿ ಯಾರ ವ್ಯೂಹ ಅವರದು. ಮನುಷ್ಯನಲ್ಲಿಯೇ ಮಾಯೆ ಮತ್ತು ದೇವರು ಇಬ್ಬರು ಇದ್ದರೂ ಅವರ ವಿಷಯ ಮನುಷ್ಯನಿಗೆ ತಿಳಿಯದಂತಿದೆ. ಆದ್ದರಿಂದ ಮನುಷ್ಯ ದೇವರನ್ನಾಗಲಿ, ಮಾಯೆಯನ್ನಾಗಲಿ ಗುರುತಿಸದಂತಿದ್ದಾನೆ. ತಾನು ಯಾವಕಡೆ ಇದ್ದೇನೆಂದು ಸಹ ತಿಳಿದಿಲ್ಲ. ತಮಗೆ ತಿಳಿಯದಿದ್ದರೂ ಮಾಯೆ ಕೈಯಲ್ಲಿ ಸಿಲುಕಿದ ಮನುಷ್ಯರನ್ನು ಅದರಿಂದ ಬಿಡಿಸಬೇಕೆಂದು ದೇವರು ಸಹ

ಪ್ರಯತ್ನಿಸುತ್ತಿರುತ್ತಾನೆ. ಆ ಪ್ರಯತ್ನದಲ್ಲಿಯೇ ಪರಮಾತ್ಮ ಭಗವಂತನಾಗಿ ಭೂಮಿ ಮೇಲೆ ಹುಟ್ಟಬೇಕಾಗಿ ಬರುತ್ತದೆ. ಆದರೆ ಆಟದ ನಿಯಮಗಳ ಪ್ರಕಾರ ತಾನು ಪರಮಾತ್ಮ ಎಂದು ಮನುಷ್ಯರಿಗೆ ತಿಳಿಯಬಾರದು. ತಿಳಿಯದಂತೆಯೇ ತಾನು ಮನುಷ್ಯನಂತೆಯೇ ಪರಮಾತ್ಮನನ್ನು ಕುರಿತು ಹೇಳಬೇಕಾಗಿ ಬರುತ್ತದೆ. ತನ್ನ ವಿಷಯವನ್ನು ತಾನೇ ಹೇಳುತ್ತಿದ್ದರೂ, ತನ್ನ ಧರ್ಮಗಳನ್ನು ತಾನೇ ಪುನರುದ್ಧರಿಸುತ್ತಿದ್ದರೂ, ಮಾಯೆಯೂ ತಾನು ಸಹ ತನ್ನ ವ್ಯೂಹದ ಪ್ರಕಾರ ಬಂದು, ಭಗವಂತನನ್ನು ಮನುಷ್ಯರಲ್ಲಿ ಅಧಮನನ್ನಾಗಿ ಮತ್ತು ಅಜ್ಞಾನಿಯನ್ನಾಗಿ ತೋರಿಸುತ್ತದೆ. ಆತನ ಮಾತುಗಳು ಅಧರ್ಮಗಳೆಂದು, ತಮ್ಮವೇ ನಿಜವಾದ ಧರ್ಮಗಳೆಂದು, ಬೋಧಿಸುವಂತೆ ಗುರುಗಳನ್ನೇ ತಯಾರು ಮಾಡಿಬಿಟ್ಟಿದೆ. ಮಾಯೆಯೇ ಸ್ವತಃವಾಗಿ ಗುರು ಅಥವಾ ಸ್ವಾಮಿಯ ರೂಪದಲ್ಲಿ ಭಗವಂತನಿಗೆ ಪೈಪೋಟಿಯಾಗಿ ಬರುತ್ತದೆ. ತನ್ನ ಸಿಹಿಯಾದ ಮಾತುಗಳನ್ನು ದೈವಜ್ಞಾನವಾಗಿ ವರ್ಣಿಸಿ, ದೇವರಜ್ಞಾನವನ್ನು ನಂಬದಂತೆ, ತಾನು ಹೇಳುವ ಜ್ಞಾನವನ್ನೇ ನಂಬುವಂತೆ ಮಾಡುತ್ತದೆ. ಯಾವುದು ದೇವರ ಧರ್ಮಗಳೋ ತಿಳಿಯದಂತೆ ತಾನು ಸಹ ಪರಮಾತ್ಮ, ಮೋಕ್ಷ, ಜ್ಞಾನ, ಸಾಧನೆ ಎನ್ನುವ ಪದಗಳನ್ನು ಉಪಯೋಗಿಸಿ ಹೇಳುತ್ತಲೇ ತನ್ನ ಧರ್ಮಗಳನ್ನು ಮಾನವರಿಗೆ ತಲುಪಿಸುತ್ತದೆ. ಮಾಯೆಯೊಂದರ ಧರ್ಮಗಳ ಮುಂದೆ ದೇವರ ಧರ್ಮಗಳನ್ನು ಗುರುತು ಇಲ್ಲದಂತೆ ಮಾಡುತ್ತಿದೆ. ದೇವರಕಡೆ ಹೋಗಬೇಕೆಂದುಕೊಂಡವನಿಗೆ ಯಾವುವು ಧರ್ಮಗಳೊ, ಯಾವುವು ಅಧರ್ಮಗಳೊ ತಿಳಿಯದಂತೆ ಮಾಡಿ, ಯಾರು ಏನು ಹೇಳಿದರು ನಂಬುವಂತೆ ಮಾಡುತ್ತದೆ. ಮಾಯೆ ಮತ್ತು ದೇವರು ಯಾರು ಅವತರಿಸಿದರೂ ಅವರ ಇರುವಿಕೆಯನ್ನು ಹೇಳಿಕೊಳ್ಳಬಾರದೆಂಬುದು ಆಟದ ನಿಯಮ. ಪರಮಾತ್ಮ ಭೂಮಿಮೇಲೆ ಭಗವಂತನಾಗಿ ಅವತರಿಸಿ ತಾನು ಪರಮಾತ್ಮನೆಂದು ಹೇಳಿಕೊಳ್ಳ ಲಾರದ ನಿಯಮದ ಪ್ರಕಾರ, ಪ್ರಕೃತಿ ಸಹ ಭೂಮಿಮೇಲೆ ಜನಿಸಿ ತಾನು ಮಾಯೆ ಎಂದು ಹೇಳಿಕೊಳ್ಳುವುದಿಲ್ಲ. ಮಾಯೆ ಮನುಷ್ಯನಾಗಿ ಅವತರಿಸಿ ನಾನು ಭಗವಂತನೆಂದು ಹೇಳಿಕೊಳ್ಳಬಹುದು. ಆ

ಸೂತ್ರದ ಪ್ರಕಾರ ಮಾನವರಿಗೆ ತಾನೇ ಭಗವಂತನೆಂದು ತಿಳಿಸುತ್ತಾ, ಎಷ್ಟೋ ಮಹಿಮೆಗಳು ತೋರಿಸುತ್ತಾ, ಭೂಮಿಮೇಲೆ ಎಷ್ಟೋ ಸ್ವಾಮಿಗಳಾಗಿ ಮಾಯೆ ಅವತರಿಸುತ್ತಿದೆ. ಪರಮಾತ್ಮ ಭೂಮಿಮೇಲೆ ಒಂದುಕಡೆ ಭಗವಂತನಾಗಿ ಅವತರಿಸಿದರೆ, ಪ್ರಕೃತಿ ಭೂಮಿಮೇಲೆ ಎಷ್ಟೋ ಜನರನ್ನು ಭಗವಂತನೆಂಬ ಹೆಸರಿನಿಂದ ತಯಾರುಮಾಡುತ್ತಿದೆ. ತನ್ನ ಧರ್ಮಗಳನ್ನು ತಿಳಿಸುವುದಕ್ಕೆ ಪರಮಾತ್ಮ ಒಂದುಕಡೆ ಹುಟ್ಟಿ ತಾನು ಭಗವಂತನೆಂದು ಗುರುತು ಇಲ್ಲದಂತೆ ಇದ್ದರೆ, ಮಾಯೆ ಮಾತ್ರ ಆತನ ಜನ್ಮಕ್ಕೆ ಮೊದಲಿನಿಂದಲೂ, ಎಷ್ಟೋ ಜನರನ್ನು ಭಗವಂತನೆಂದು ಹೆಸರು ಹೊಂದಿದವರನ್ನು ತಯಾರುಮಾಡಿ, ಅವರ ಮಾತನ್ನೇ ಕೇಳುವಂತೆ, ನಿಜವಾದ ಭಗವಂತನು ಹೇಳಿದ ಮಾತುಗಳನ್ನು ಕೇಳದಂತೆ ಮಾಡುತ್ತಿದೆ. ಯಾರ ಪ್ರಯತ್ನ ಅವರದೆನ್ನುವಂತೆ ಮಾಯೆ ಕೆಲಸ ಮಾಯೆ, ದೇವರ ಕೆಲಸ ದೇವರು ಮಾಡಿಕೊಳ್ಳುತ್ತಾ ಹೋಗುತ್ತಿದ್ದಾರೆ. ಮಾಯೆ ಯಾವಾಗಲೂ ಗುಣಗಳ ರೂಪದಲ್ಲಿ ಮನುಷ್ಯ ಶರೀರದಲ್ಲಿ ಇರುವಾಗ, ದೇವರು ಸಹ ಆತ್ಮ ರೂಪವಾಗಿ ಇದ್ದಾನೆ. ಮಾಯೆ, ಪರಮಾತ್ಮಗಳು ಭೂಮಿಮೇಲೆ ಮನುಷ್ಯರ ರೂಪದಲ್ಲಿ ಬರುತ್ತಾರೆಂದುಕೊಂಡಿದ್ದೇವಲ್ಲವೆ! ಹಾಗೆ ಬರುವವರು ಯಾವ ಶರೀರಗಳು ಧರಿಸಿ ಬರುತ್ತಾರೆಂದು ತಿಳಿಯಬೇಕಾಗಿದೆ. ಮಾಯೆ ಭೂಮಿಮೇಲೆ ಪುರುಷ ಶರೀರ ಧರಿಸಿ ಭಗವಂತನಾಗಿ, ಹಾಗೆ ಸ್ತ್ರೀ ಶರೀರ ಧರಿಸಿ ಭಗವತಿಯಾಗಿ ಬರುತ್ತಿದೆ. ಪರಮಾತ್ಮ ಮಾತ್ರ ಪುರುಷ ಶರೀರ ಧರಿಸಿ ಬರುತ್ತಿದ್ದಾನೆ. ಪರಮಾತ್ಮ ವಾಸ್ತವವಾಗಿ ಪುರುಷನೇ, ಆದ್ದರಿಂದ ಪುರುಷ ಶರೀರ ಮಾತ್ರ ಧರಿಸುತ್ತಿದ್ದಾನೆ. ಪ್ರಕೃತಿ ಸ್ತ್ರೀ ಆದ್ದರಿಂದ ಸ್ತ್ರೀ ಶರೀರ ಧರಿಸುತ್ತಿದೆ ಹಾಗೆಯೇ ತಾನು ಸಹ ಪುರುಷನೇ ಎಂದು ಯಾಮರಿಸುವುದಕ್ಕೆ ಪುರುಷ ಶರೀರ ಸಹ ಧರಿಸುತ್ತದೆ. ಭಗವತಿ ಮತ್ತು ಭಗವಂತನಲ್ಲಿ ಯಾರು ನಿಜವಾದ ಭಗವಂತನೋ ಅರ್ಥವಾಗದಂತೆ ಹೋಗುತ್ತದೆ. ಒಟ್ಟಿನಲ್ಲಿ ಭಗವಂತನು ಪುರುಷನಾಗಿಯೇ ಜನ್ಮಿಸುತ್ತಾನೆಂದು ತಿಳಿಯಬೇಕು.

# ಶ್ರೀ ಕೃಷ್ಣಾಷ್ಟಮಿ

ವಿಶ್ವವೆಲ್ಲಾ ತುಂಬಿ ಯಾರ ಊಹೆಗೂ ಸಿಗದ ಪರಮಾತ್ಮ, ಒಂದು ಶರೀರವನ್ನು ಧರಿಸಿ ಬಂದಾಗ, ಆ ಶರೀರವನ್ನು ಭಗವಂತ ಎನ್ನುತ್ತೇವೆ. ಅಂತಹ ಜನ್ಮವೇ ಶ್ರೀಕೃಷ್ಣನ ಜನ್ಮವಾಗಿ ತಿಳಿಯಬೇಕು. ಶ್ರೀಕೃಷ್ಣನು ಸಾಧಾರಣವಾದ ಮನುಷ್ಯ ಅಲ್ಲ. ಆತನು ಎಲ್ಲರಂತೆ ಶರೀರ ಧರಿಸಿ, ಎಲ್ಲರಂತೆ ಸಾಮಾನ್ಯನಾಗಿ ನಟಿಸಿ, ಮಾನವರಿಗೆ ತನ್ನ ಜೀವನವೇ ದೊಡ್ಡ ಪ್ರಬೋಧವಾಗಿ ಮಾಡಿ, ಸಾಮಾನ್ಯನಂತೆ ಹೊರಟುಹೋದ ಪರಮಾತ್ಮ. ಶ್ರೀಕೃಷ್ಣನು ಯಾರಾಗಿರುವುದು ಸ್ವತಃವಾಗಿ ತಿಳಿದುಕೊಂಡವನು ಒಬ್ಬನೇ ಒಬ್ಬ ಭೀಷ್ಮನು. ಆತನ್ಯಾರಾಗಿರುವುದು ಕೃಷ್ಣನು ಸ್ವತಃವಾಗಿ ಹೇಳಿದರೇ ತಿಳಿದುಕೊಂಡಿರುವುದು ಒಬ್ಬನೇ ಒಬ್ಬ ಅರ್ಜುನನು.

ಆತ್ಮವೊಂದರ ಧರ್ಮಗಳನ್ನು ತಿಳಿಸುವುದಕ್ಕೋಸ್ಕರ, ಅಧರ್ಮಗಳು ಹೆಚ್ಚಾದಾಗಲೆಲ್ಲ ಬರುತ್ತೇನೆಂದು ಹೇಳಿಹೋದ ಆ ಕೃಷ್ಣರೂಪನು, ಯಾವಾಗ ಬಂದರು ತನ್ನ ಜೀವನವೆಲ್ಲಾ ಮಾನವರ ಮಾರ್ಗದರ್ಶಕತೆಗೋಸ್ಕರ ಕ್ರಮಬದ್ಧ ಮಾಡಿಕೊಂಡು, ತನ್ನ ಧರ್ಮಗಳನ್ನು ತಿಳಿಸಿ ಹೋಗುತ್ತಾನೆಂದು ತಿಳಿಯಬೇಕು. ಆ ವಿಧವಾಗಿ ಬಂದಿರುವ ಶ್ರೀಕೃಷ್ಣನ ಜನ್ಮದಲ್ಲಿ ತನ್ನ ಪಾದಗಳಿಂದ ನಿಂತು ಆ ಪಾದಗಳಿಗೆ, ತಾನು ಧರಿಸಿದ ಶಂಖುಚಕ್ರಗಳಿಗೆ, ಹಾಗೆ ಶಿರಸ್ಸಿನಲ್ಲಿ ಧರಿಸಿದ ನವಿಲು ಗರಿಗು, ತುಟಿಗಳಿಂದ ಊದುತ್ತಿರುವ ಮುರಳಿಗೆ ಮತ್ತು ಆತನ ಶರೀರಛಾಯೆಗೆ ಎಷ್ಟೋ ಸಾರಾಂಶವಾದ ಅರ್ಥಗಳಿವೆ ಎಂದು ಮೊದಲೇ ತಿಳಿದುಕೊಂಡಿದ್ದೇವೆ. ಈಗ ಆತನು ಹುಟ್ಟಿದ ದಿನವಾದ ಶ್ರೀಕೃಷ್ಣಾಷ್ಟಮಿಯನ್ನು ಕುರಿತು ತಿಳಿದುಕೊಳ್ಳೋಣ.

ಅಮಾವಾಸ್ಯೆಯಿಂದ ಪೌರ್ಣಮಿಗೆ 15 ದಿನಗಳು, ಹಾಗೆ ಪೌರ್ಣ ಮಿಯಿಂದ ಅಮಾವಾಸ್ಯೆಗೆ 15 ದಿನಗಳಿರುವುದು ಎಲ್ಲರಿಗೂ ತಿಳಿದ ವಿಷಯವೆ. ಶ್ರೀಕೃಷ್ಣನು ಪೌರ್ಣಮಿಯಿಂದ ಅಮಾವಾಸ್ಯೆಗಿರುವ 15 ದಿನಗಳಲ್ಲಿ ಮಧ್ಯದಲ್ಲಿರುವ ಅಷ್ಟಮಿ ದಿನದಂದು ಜನ್ಮಿಸಿದ್ದಾನೆ. 15 ದಿನಗಳಲ್ಲಿ ಪಾಡ್ಯಮಿಯಿಂದ ಸಪ್ತಮಿವರೆಗೂ 7 ದಿನಗಳು, ಮಧ್ಯದಲ್ಲಿ ಅಷ್ಟಮಿ, ನಂತರ ನವಮಿಯಿಂದ

ಅಮಾವಾಸ್ಯವರೆಗು 7 ದಿನಗಳು ಇವೆ. 7+1+7 = 15 ಹದಿನೈದು ಎರಡು ಸಮಾನ ಭಾಗಗಳು ಮಾಡಬೇಕೆಂದರೆ 7 ಮತ್ತು 7 ದಿನಗಳಾಗಿ ವಿಭಜಿಸಿದಾಗ ಒಂದು ಶೇಷವು ಉಳಿಯುತ್ತದೆ. ಆ ಒಂದು ದಿನ ಅಷ್ಟಮಿಯಾಗಿ ಗುರ್ತಿಸಿ ಅಷ್ಟಮಿಗೆ ಮೊದಲು 7 ದಿನಗಳಾಗಿ, ಹಿಂದೆ 7 ದಿನಗಳಾಗಿ ಗುರ್ತಿಸಿಕೊಳ್ಳಬೇಕು. ಶ್ರೀಕೃಷ್ಣನು ಮಧ್ಯ ದಿನವಾದ ಅಷ್ಟಮಿಯಂದೇ ಹುಟ್ಟುವುದಕ್ಕೆ ವಿಶೇಷವಾದ ಅರ್ಥ ಇದೆ ಅದೇನೆಂದರೆ!

ಭಗವಂತನಾದ ಶ್ರೀಕೃಷ್ಣನು ಜ್ಞಾನಕ್ಕೂ, ಅಜ್ಞಾನಕ್ಕೂ ಸಂಧಿಯಂತ ಹವನು. ಅಜ್ಞಾನದಿಂದ ಜ್ಞಾನಕ್ಕೆ, ಜ್ಞಾನದಿಂದ ಅಜ್ಞಾನಕ್ಕೆ ಹೋಗುವುದಕ್ಕೆ ಆತನು ಕೇಂದ್ರದಂಥವನು. ಎಷ್ಟೋಜನ ಜ್ಞಾನಿಗಳು ಸಹಿತ ಆತನು ತನ್ನ ಜೀವನದಲ್ಲಿ ನಡೆದುಕೊಂಡ ಪದ್ಧತಿಗಳು ಆಚರಣೆಗಳು ನೋಡಿ, ಹೇಳಿದ ಗೀತೆ ಎಲ್ಲಾ ಚೆನ್ನಾಗಿಯೇ ಇದೆಯಾಗಲಿ ಆತನ ಆಚರಣೆ ನಮಗೆ ಇಷ್ಟವಾಗಲಿಲ್ಲ. ನಡವಳಿಕೆ ಮುಖ್ಯ ತಾನೆ! ಒಳಗಿನ ಗುಣಗಳಿಂದಲೇ ತಾನೆ ಯಾರಾದರೂ ಆಚರಿಸುವುದು, ಆತನು ಎಷ್ಟು ಹೇಳಿದರೂ ಶ್ರೀಕೃಷ್ಣನು ಮಾಡಿದ ಕೆಲಸಗಳನ್ನನುಸರಿಸಿ ನೋಡಿದರೆ, ಬೋಧನೆಗಳು ಹೇಳಿದಷ್ಟು ಉತ್ತಮನು ಅಲ್ಲವೆಂದು ತಿಳಿಯುತ್ತದೆಂದು ಎನ್ನುತ್ತಿದ್ದಾರೆಂದರೆ ಅವರಿಗಿರುವ ಜ್ಞಾನ ನಿಷ್ಪ್ರಯೋಜನೆಯೆಂಬ ಮಾತು. ಶ್ರೀಕೃಷ್ಣನು ಏನು ಹೇಳಿದ್ದಾನೋ ಅವರು ಅರ್ಥ ಮಾಡಿಕೊಳ್ಳಲಿಲ್ಲ ಎಂಬ ಮಾತು. ಅಂತಹದರಲ್ಲಿ ಶ್ರೀಕೃಷ್ಣನು ಹೇಳಿದ ಅಸಲಾದ ಜ್ಞಾನ ಬೇರೆ ವಿಧವಾಗಿ ಅರ್ಥವಾಗಿ ನಡವಳಿಕೆಗೆ ಭಿನ್ನವಾಗಿ ತೋಚಿದಾಗ ಅವರು ಶ್ರೀಕೃಷ್ಣನಿಗೆ ಭಿನ್ನವಾಗಿ ಹೋಗುತ್ತಾರೆ. ಶ್ರೀಕೃಷ್ಣನು ಜ್ಞಾನಕೇಂದ್ರವಾದಾಗ, ಆತನಿಗೆ ಭಿನ್ನವಾಗಿ ಹೋಗುವವರು ಅಜ್ಞಾನಕಡೆ ಹೋಗುತ್ತಿದ್ದಾರೆಂದೇ ತಿಳಿಯಬೇಕು. ಹಾಗೆ ಶ್ರೀಕೃಷ್ಣನನ್ನು ನೋಡಿ ಆತನು ಹೇಳಿರುವುದು, ಮಾಡುವುದು, ಮಾಡಿಸುವುದು ಎಲ್ಲಾ ಒಂದೇ ಎಂದು ತಿಳಿದವರು ಜ್ಞಾನದಕಡೆ ಸಾಗಿಹೋಗುತ್ತಾರೆ. ಆತನನ್ನು ನೋಡಿ ಇರುವಕಡೆಯಿಂದ ಕೆಲವರು ಜ್ಞಾನದ ಕಡೆಗೂ, ಕೆಲವರು ಅಜ್ಞಾನದ ಕಡೆಗೂ ಹೋಗುತ್ತಿದ್ದಾರೆ. ಆದ್ದರಿಂದ

ಶ್ರೀಕೃಷ್ಣನು ಅತ್ತ ಜ್ಞಾನಕ್ಕೂ, ಇತ್ತ ಅಜ್ಞಾನಕ್ಕೂ ಮಧ್ಯ ಇರುವವನೆಂದು ತಿಳಿಯುವಂತೆ ಅಷ್ಟಮಿದಿನವನ್ನೇ ಆಯ್ಕೆ ಮಾಡಿಕೊಂಡು ಹುಟ್ಟಿದ್ದಾನೆ. ಶ್ರೀಕೃಷ್ಣನು ಬಹುಳಪಕ್ಷ ಅಷ್ಟಮಿ ದಿನವೇ ಏಕೆ ಹುಟ್ಟಬೇಕು. ಶುಕ್ಲಪಕ್ಷ ಅಷ್ಟಮಿದಿನ ಏಕೆ ಹುಟ್ಟಲಿಲ್ಲ ಅದಕ್ಕೆ ಕಾರಣವೇನಾದರು ಇರಬಹುದೆಂಬ ಸಂಶಯ ಕೆಲವರಿಗೆ ಬರಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ!

ಜ್ಞಾನ ಬೋಧನೆಗಳಲ್ಲಿ ಚಂದ್ರನನ್ನು ಜ್ಞಾನಚಿಹ್ನೆಯಾಗಿ ಹೇಳಿದ ಸಂದರ್ಭಗಳು ಇವೆ. ಗೀತೆಯಲ್ಲಿ ಯೋಗಿಗಳಿಗೆ ಮರುಜನ್ಮ ಇದ್ದರೆ ಜ್ಞಾನವಿಕಾಸ ಹೊಂದಿ ಹುಟ್ಟುತ್ತಾರೆಂದು ಹೇಳುವುದರಲ್ಲಿ ಚಂದ್ರತೇಜಸ್ಸು ಹೊಂದಿ ಹುಟ್ಟುತ್ತಾರೆಂದು ಜ್ಞಾನವಿಕಾಸವನ್ನು ಚಂದ್ರನ ಬೆಳದಿಂಗಳಿಗೆ ಹೋಲಿಸಿ ಹೇಳಿದ್ದಾರೆ. ಆದ್ದರಿಂದ ಬೆಳಕಾದ ಪೌರ್ಣಮಿಯನ್ನು ಜ್ಞಾನವಾಗಿ, ಕತ್ತಲಾದ ಅಮಾವಾಸ್ಯೆಯನ್ನು ಅಜ್ಞಾನವಾಗಿ ಸುಲಭವಾಗಿ ಹೋಲಿಸಿಕೊಳ್ಳಬಹುದು. ಪರಮಾತ್ಮ ಜ್ಞಾನಯುತನಾಗಿದ್ದು ಅಜ್ಞಾನಯುತವಾದ ಪ್ರಪಂಚದೊಳಗೆ ಬಂದು ಹುಟ್ಟಿದ್ದಾನೆ. ಆದ್ದರಿಂದ ಜ್ಞಾನ ಚಿಹ್ನೆಯಾದ ಪೌರ್ಣಮಿಯಿಂದ ಕತ್ತಲಾಗುತ್ತಾ ಹೋಗಿ ಕೊನೆಗೆ ಅಮಾವಾಸ್ಯೆಯಾಗಿ ಬದಲಾಗುವ ಬಹುಳ ಪಕ್ಷಮಿಯಲ್ಲಿ ಹುಟ್ಟಿದ್ದಾನೆ. ಹಾಗೆ ಹುಟ್ಟಿದ ಆತನು ಅತ್ತ ಜ್ಞಾನಿಯೊ, ಇತ್ತ ಅಜ್ಞಾನಿಯೊ ಯಾರಿಗೂ ಅರ್ಥವಾಗದಂತೆ, ಜ್ಞಾನ ಅಜ್ಞಾನ ಎರಡು ನನ್ನಲ್ಲಿಯೇ ಇವೆಯೆನ್ನುವಂತೆ ಮತ್ತು **ಜ್ಞಾನಕ್ಕೂ ಅಜ್ಞಾನಕ್ಕೂ ನಾನೇ ಮಾರ್ಗವು, ನಾನೇ ದ್ವಾರವು** ಎನ್ನುವಂತೆ ಮಧ್ಯದಲ್ಲಿ ಅಷ್ಟಮಿ ದಿನ ಹುಟ್ಟಿದ್ದಾನೆ. ಪೌರ್ಣಮಿ ಕಳೆದುಹೋದ ನಂತರ ಬರುವ ಅಷ್ಟಮಿ ದಿನ ಹುಟ್ಟಿದ್ದಾನೆ. ಆದ್ದರಿಂದ ಜ್ಞಾನಪ್ರಕಾಶವಂತವಾದ ಪರಮದಿಂದ ಅಜ್ಞಾನ ಅಂಧಕಾರವಾದ ಪ್ರಪಂಚದೊಳಗೆ ಬಂದಿದ್ದಾನೆಂದು ತಿಳಿಯಬೇಕು. ಈ ವಿಧವಾಗಿ ಆತನು ಹುಟ್ಟಿದ ದಿನದಂದು ಸಹ ಎಷ್ಟೋ ವಿಶೇಷವಾದ ಅರ್ಥ ಒಳಗೊಂಡಿದೆ. ಆದ್ದರಿಂದ ಆತನು ಹುಟ್ಟಿದ ದಿನವನ್ನು ಮಹಾಪರ್ವದಿನವಾಗಿ ಭಾವಿಸಿ ಆ ದಿನವನ್ನು ಶ್ರೀಕೃಷ್ಣಾಷ್ಟಮಿ ಎಂದು ಹೆಸರಿಟ್ಟು ಪೂಜಿಸಿಕೊಳ್ಳುತ್ತಿದ್ದೇವೆ.

ಶ್ರೀಕೃಷ್ಣಾಷ್ಟಮಿ ಕೆಲವರು ಮಾಡುತ್ತಿದ್ದಾರೆ. ಆದರೆ ಆ ದಿನ ವಿಶೇಷ ಏನೆಂದು ಮೇಲೆ ನಾವು ಹೇಳಿಕೊಂಡಂತೆ ಯಾರು ವಿಶಧೀಕರಿಸಿಕೊಳ್ಳಲಿಲ್ಲ. ಆದ್ದರಿಂದ ನಿಮಗೆ ತಿಳಿದ ಈ ವಿಧಾನವನ್ನು ಉಳಿದವರಿಗೂ ಸಹ ತಿಳಿಸಿ ಶ್ರೀಕೃಷ್ಣನ ಜನ್ಮವೇ ಉತ್ತಮವಾದುದೆಂದು ಆತನೇ ದೇವದೇವನಾದ ಪರಮಾತ್ಮ ಎಂದು ತಿಳಿಯುವಂತೆ ಮಾಡಬೇಕು. ಕೃಷ್ಣಾಷ್ಟಮಿ ನಂತರ ಹತ್ತು ದಿನಗಳಿಗೆ ಬರುವ ವಿನಾಯಕಚವಿತಿಗಿಂತ ಮೊದಲು ಬರುವ ಅಷ್ಟಮಿ ದೊಡ್ಡದೆಂದು ತಿಳಿಯುವಂತೆ ಮಾಡಬೇಕು. ಸಾಮಾಜಿಕ ಅರ್ಥದಿಂದ ಕೂಡಿಕೊಂಡಿರುವುದು ವಿನಾಯಕಚವತಿ, ಆಧ್ಯಾತ್ಮಿಕ ಅರ್ಥದಿಂದ ಕೂಡಿಕೊಂಡಿರುವುದು ಕೃಷ್ಣಾಷ್ಟಮಿ ಎಂದು ತಿಳಿಯುವಂತೆ ಮಾಡಬೇಕು.

# ಪುರುಷಾರ್ಥಗಳು

ಕೆಲವು ಕೆಲಸಗಳಿಂದ ತಮಗೆ ತಿಳಿಯದೆಯೇ ಪುಣ್ಯಕ್ಕೆ ಇಲ್ಲದೆ ಹೋಯಿತು, ಪುರುಷಾರ್ಥಕ್ಕೆ ಇಲ್ಲದೆ ಹೋಯಿತೆಂದೊ, ಅಥವಾ ಪುಣ್ಯಕ್ಕಾ ಪುರುಷಾರ್ಥಕ್ಕಾ ಈ ಕೆಲಸ ಮಾಡುವುದೆಂದು ಅನ್ನುತ್ತಿರುತ್ತಾರೆ. ಒಂದು ಕೆಲಸದಲ್ಲಿ ಎಂತಹ ಫಲಿತ ಕಾಣಿಸದಿರುವಾಗ ಬಹುಶ ಕೆಲವರು ವಿವರ ತಿಳಿಯದಿದ್ದರು ಈ ಮಾತು ಹೇಳುವುದು ನಡೆಯುತ್ತಲೇ ಇದೆ. ಈ ಕಾಲದಲ್ಲಿ ಅಲ್ಲಲ್ಲಿ ಅಪರೂಪವಾಗಿ ಕೇಳಿಸುತ್ತಿದ್ದರೂ ಪೂರ್ವಕಾಲದಲ್ಲಿ ಹೆಚ್ಚಾಗಿ ಅನ್ನುತ್ತಿದ್ದರು. ಇನ್ನೂ ಪೂರ್ವಕಾಲದಲ್ಲಿ ಪುಣ್ಯ ಎಂದರೆ ಏನು? ಪುರುಷಾರ್ಥ ಎಂದರೆ ಏನು? ಎಂದು ತಿಳಿದು ಅನ್ನುತ್ತಿದ್ದರು. ಅವರ ಮೂಲಕ ಈ ವಾಕ್ಯ ಈಗಲೂ ಅಲ್ಲಲ್ಲಿ ಉಳಿದಿದೆ. ಈಗ ಈ ವಾಕ್ಯವನ್ನು ಕುರಿತು ತಿಳಿದುಕೊಳ್ಳಬೇಕಾದ ಅವಶ್ಯಕತೆ ನಮಗಿದೆ.

ಪಾಪ ಪುಣ್ಯ ಅನ್ನುವವು ಬಹುಶ ಎಲ್ಲರೂ ಕೇಳಿಯೇ ಇರುತ್ತಾರೆ. ನಾವು ಮಾಡುವ ಪ್ರತಿ ಕೆಲಸದಲ್ಲಿಯೂ ಕಣ್ಣಿಗೆ ಕಾಣಿಸುವ ಫಲಿತ, ಕಣ್ಣಿಗೆ

ಕಾಣಿಸದ ಫಲಿತವೆಂದು ಎರಡು ವಿಧಗಳಾಗಿ ಫಲಿತವಿದೆ. ಕಣ್ಣಿಗೆ ಕಾಣಿಸುವುದಾಗಿರುವ ಫಲಿತ ಧನವೊ, ವಸ್ತುವೊ ಯಾವುದೊ ಒಂದು ಅಥವಾ ಎಲ್ಲಾ ಇರಬಹುದು, ಆದರೆ ಕಣ್ಣಿಗೆ ಕಾಣಿಸದ ಫಲಿತವು ಪಾಪ ಅಥವಾ ಪುಣ್ಯ ಯಾವುದೋ ಒಂದು ಮಾತ್ರ ಇರುತ್ತದೆ. ಒಳ್ಳೆಯ ಕೆಲಸ ಮಾಡಿದರೆ ಪುಣ್ಯ, ಕೆಟ್ಟ ಕೆಲಸ ಮಾಡಿದರೆ ಪಾಪ ತಪ್ಪದೆ ಲಭಿಸುತ್ತದೆ. ಆದ್ದರಿಂದ ಒಂದು ಕೆಲಸ ಮಾಡಿದಾಗ ಇತ್ತ ಲಾಭವು ಬಾರದೆ, ಅತ್ತ ಪುಣ್ಯ ಬಾರದೆ ಹೋದಾಗ, ಪುಣ್ಯಕ್ಕೂ ಇಲ್ಲದೇ ಹೋಯಿತು ಪುರುಷಾರ್ಥಕ್ಕೂ ಇಲ್ಲದೇ ಹೋಯಿತೆ ಅನ್ನುತ್ತಿದ್ದರು. ಮಾಡಿದ ಕೆಲಸ ಒಳ್ಳೆಯದಾದಾಗ ಲಾಭವಾಗಲಿ, ನಷ್ಟವಾಗಲಿ ಬಂದರೂ ಕಣ್ಣಿಗೆ ಕಾಣಿಸದ ಫಲಿತ ಮಾತ್ರ ಪುಣ್ಯವೇ ಬರುತ್ತದೆ. ಪುಣ್ಯ ಬರುವುದರಿಂದ ನಮಗೇನು ಒಳ್ಳೆಯದು? ಪಾಪ ಬರುವುದರಿಂದ ನಮಗೇನು ಕೆಟ್ಟದೆಂದು? ಕೆಲವರಿಗೆ ತಿಳಿಯದೆ ಹೋದರೆ ಅದಕ್ಕೆ ನಮ್ಮ ವಿವರ ಏನೆಂದರೆ! ಪುಣ್ಯಬರುವುದರಿಂದ ಅದು ನಮ್ಮ ಕರ್ಮಚಕ್ರದಲ್ಲಿ ರಿಕಾರ್ಡ್ ಆಗಿಹೋಗಿ, ನಂತರ ಬರುವ ಜನ್ಮಗಳಲ್ಲಿ ಯಾವುದೋ ಒಂದು ಜನ್ಮದಲ್ಲಿ ಜಾರಿಗೆ ಬಂದಾಗ ಸುಖಸಂತೋಷಗಳಿಂದ ಅನುಭವಕ್ಕೆ ಬರುತ್ತದೆ. ಹಾಗೆ ಪಾಪವು ಕಷ್ಟದುಃಖ ರೂಪಗಳಿಂದ ಅನುಭವಕ್ಕೆ ಬರುತ್ತದೆ. ಇನ್ನು ಪುರುಷಾರ್ಥಗಳೆಂದರೆ ಯಾವುವು? ಅವುಗಳ ವಿವರ ಏನೆಂದರೆ!

ಧರ್ಮಾರ್ಥ ಕಾಮಮೋಕ್ಷಗಳೆನ್ನುವವು ಪುರುಷಾರ್ಥಗಳೆಂದು ಬಹಳ ಗ್ರಂಥಗಳಲ್ಲಿ ಇದೆ. ಮತ್ತು ಬಹಳ ಮಂದಿ ಸ್ವಾಮಿಗಳು ಹೇಳುತ್ತಿದ್ದಾರೆ. ಇದರ ವಿಷಯ ಹೇಳಿಕೊಳ್ಳುವುದಕ್ಕೆ ಮೊದಲು ಇಂತಹ ವಾಕ್ಯವೇ ಇನ್ನೊಂದು ಇದೆ. ಅದು ತಾಯಿ ತಂದೆ, ಗುರು ದೇವರು ಎನ್ನುವ ವಾಕ್ಯ. ಈ ವಾಕ್ಯವನ್ನು ಮೊದಲು ಹಿರಿಯರು ಯಾವ ಉದ್ದೇಶದಿಂದ, ಯಾವ ವರಸೆಯಲ್ಲಿ ಅಂದಿದ್ದಾರೋ ಆ ವರಸೆ ಈ ವಾಕ್ಯದಲ್ಲಿ ಈಗಲೂ ಇದೆ. ಈ ವಾಕ್ಯ ಕಾಲಕ್ರಮವಾಗಿ ಬದಲಾಗದೆ ಪೂರ್ವ ಆದಿಯಲ್ಲಿ ಹಿರಿಯರು ಹೇಳಿದಂತೆ ನಿಂತಿದೆ. ತಾಯಿ ತಂದೆ, ಗುರು ದೇವರೆಂಬ ವಾಕ್ಯ ಕೆಡದಂತೆ ಅಲ್ಲಲ್ಲಿ ಕೇಳಿಸುತ್ತಾ

ಇದ್ದರೂ ಅದರೊಂದರ ಅರ್ಥ ವಿವರ ಬಹಳಜನರಿಗೆ ತಿಳಿಯದಂತೆ ಹೋಗಿದೆ. ಇದರ ಅರ್ಥಯಾರಿಗೂ ತಿಳಿದಿಲ್ಲ. ಎಲ್ಲರಿಗೂ ತಿಳಿದಿದೆಯಲ್ಲ! ಎಂದು ಕೆಲವರು ಸುಲಭವಾಗಿ ಅರ್ಥ ಹೇಳುವವರು ಇದ್ದಾರೆ. ಅವರು ಹೇಳುವ ವಿವರ ಏನೆಂದರೆ ಮೊದಲು ತಾಯಿಯನ್ನು ನಮಸ್ಕರಿಸಬೇಕು, ನಂತರ ತಂದೆಯನ್ನು ನಮಸ್ಕರಿಸಬೇಕು. ಇವರಿಬ್ಬರು ಆದನಂತರ ಗುರುವನ್ನು ನಮಸ್ಕರಿಸಿ ಆ ನಂತರ ದೇವರನ್ನು ನಮಸ್ಕರಿಸಬೇಕೆಂದು ಪೂರ್ವದಲ್ಲಿ ಹಿರಿಯರು ತಾಯಿ ತಂದೆ, ಗುರು ದೈವವೆಂದಿದ್ದಾರೆಂದು ಅನ್ನುತ್ತಿದ್ದರು.

ಪೂರ್ವದ ವಾಕ್ಯವು ಕೆಡದಿದ್ದರು ಅದರ ಭಾವವು ಪೂರ್ತಿ ಕೆಟ್ಟುಹೋಗಿದೆ ಎಂದು ನಾವನ್ನುತ್ತಿದ್ದೇವೆ ಆದರೆ ನಿಜಭಾವ ಏನೆಂದರು ಈ ವಾಕ್ಯ ಒಂದೇ ಆದರೂ ಎರಡು ಪದಗಳಾಗಿ ಹೇಳುವಂತೆ ದೊಡ್ಡವರಿಟ್ಟಿದ್ದಾರೆ. ಅದು ಈ ವಿಧವಾಗಿ ತಾಯಿ ತಂದೆ, ಗುರು ದೈವ. ಇನ್ನೂ ವಿವರವಾಗಿ **ತಾಯಿ ತಂದೆ, ಗುರು ದೈವ** ಎಂದು ಇತ್ತು. ಇದರ ಪ್ರಕಾರ ಪ್ರತಿಯೊಬ್ಬರಿಗೆ ತಂದೆ ಯಾರೆಂಬ ರಹಸ್ಯ ಅವನ ತಾಯಿಗೆ ಮಾತ್ರವೇ ತಿಳಿಯುತ್ತದೆ, ತಾಯಿ ಮೂಲಕವೇ ತಂದೆ ತಿಳಿಯುತ್ತಾನೆ. ಆದ್ದರಿಂದ ತಾಯಿ ತಂದೆ ಅಂದಿದ್ದಾರೆ. ಈ ವಿಧವಾಗಿಯೇ ದೇವರು ಯಾರೆಂಬ ವಿಷಯ ಗುರುವಿಗೆ ಮಾತ್ರವೇ ತಿಳಿಯುತ್ತದೆ. ಆದ್ದರಿಂದ ಗುರು ದೈವ ಅಂದಿದ್ದಾರೆ. ತಾಯಿಯಿಂದ ತಂದೆ, ಗುರುವಿನಿಂದ ದೈವವು ತಿಳಿಯುತ್ತದೆಂಬ ಉದ್ದೇಶದಿಂದ ಆದಿಯಲ್ಲಿನ ಹಿರಿಯರು ತಾಯಿ ತಂದೆ, ಗುರು ದೈವವೆಂದಿದ್ದಾರೆ. ತಾಯಿ ತಂದೆ, ಗುರು ದೈವವೆಂಬ ಮಾತಿನ ವರಸೆ ಬದಲಾಗದ ಹಾಗೆ ಇಂದಿಗೂ ಇದ್ದರೂ ಅದರ ಭಾವ ಮಾತ್ರ ಪೂರ್ತಿ ಕೆಟ್ಟುಹೋಗಿ ತಾಯಿಯನ್ನು ಮೊದಲು, ತಂದೆಯನ್ನು ಹಿಂದೆ ನಂತರ ಗುರುವನ್ನು, ಆ ನಂತರ ದೈವವನ್ನು ಪೂಜಿಸಬೇಕೆಂದು ಹೇಳುವ ಸಾಂಪ್ರದಾಯ ಏರ್ಪಟ್ಟು ಹೋಗಿದೆ. ಯೋಚಿಸದವರೆಲ್ಲ ಅದೇ ನಿಜವೆಂದು ನಂಬಿದ್ದಾರೆ.

ತಾಯಿ ತಂದೆ, ಗುರು ದೈವವೆಂಬ ಮಾತಿನಲ್ಲಿನ ಭಾವ ಕೆಟ್ಟುಹೋದರೂ ವಾಕ್ಯದ ವರಸೆ ಬದಲಾಗಲಿಲ್ಲ. ಆದರೆ ಪುರುಷಾರ್ಥಗಳೆಂಬ ಮಾತುಗಳಲ್ಲಿ ವಾಕ್ಯವೊಂದರ ವರಸೆ ಪೂರ್ತಿ ಬದಲಾಗಿ, ಭಾವವು ಅರಣ್ಯಪಾಲಾಗಿಹೋಗಿದೆ. ಈದಿನ ನಾವಂದುಕೊಳ್ಳುತ್ತಿರುವ ಧರ್ಮಾರ್ಥ ಕಾಮಮೋಕ್ಷಗಳು ಸತ್ಯವಾದ ಪುರುಷಾರ್ಥಗಳ ವಾಕ್ಯಗಳು ಅಲ್ಲ.

ಏಕೆಂದರೆ ಈ ವಾಕ್ಯವೂ ಸಹ ತಾಯಿ ತಂದೆ, ಗುರು ದೇವರನ್ನುವಂತೆ ತಯಾರಾದ ವಾಕ್ಯ. ಧರ್ಮದಿಂದ ಅರ್ಥ (ಧನ), ಕಾಮದಿಂದ ಮೋಕ್ಷ ಅನ್ನುವಂತೆ ಈಗಿನ ಧರ್ಮಾರ್ಥ ಕಾಮಮೋಕ್ಷ ಎನ್ನುವ ಪುರುಷಾರ್ಥವಿದೆ. **ಧರ್ಮದಿಂದ ಮೋಕ್ಷ ಬರುತ್ತದೆ, ಆದರೆ ಧನ ಬರುವುದಿಲ್ಲ. ಹಾಗೆ ಕಾಮ (ಆಸೆ) ದಿಂದ ಧನ ಬರುತ್ತದೆ, ಆದರೆ ಮೋಕ್ಷ ಬರುವುದಿಲ್ಲ**. ವಕ್ರಮಾರ್ಗ ಹಿಡಿಸಿದವರು ಹೇಗೆ ಹಿಡಿಸಿದರೂ, ಇದು ಏನೆಂದು ಯೋಚಿಸದವರಿರುವುದರಿಂದ ಆ ವಕ್ರವಾಕ್ಯ ಪೂರ್ತಿ ಪ್ರಚಾರವಾಗಿ ಕುಳಿತುಕೊಂಡಿದೆ. ಪುರುಷಾರ್ಥವೊಂದರ ಸಕ್ರಮವಾದ ವಾಕ್ಯ **"ಕಾಮಾರ್ಥ ಧರ್ಮಮೋಕ್ಷ"**. ಕಾಮ (ಆಸೆ) ದಿಂದ ಧನ (ಅರ್ಥ), ಧರ್ಮದಿಂದ ಮೋಕ್ಷ ಬರುತ್ತದೆ. ಆದ್ದರಿಂದ ಕಾಮ ಅರ್ಥ, ಧರ್ಮ ಮೋಕ್ಷವೆಂದು ಆದಿಯಲ್ಲಿ ವಿವರ ತಿಳಿದು ಹೇಳುತ್ತಿದ್ದರು.

**ಧರ್ಮದಿಂದ ಧನ, ಕಾಮದಿಂಧ ಮೋಕ್ಷ ಎಂದಿಗೂ ಬರುವುದಿಲ್ಲ.** ಆದ್ದರಿಂದ ಧರ್ಮಾರ್ಥಕಾಮಮೋಕ್ಷಗಳನ್ನು ಪುರುಷಾರ್ಥಗಳೆಂದು ಅನ್ನಬಾರದು. ಆಸೆಯಿಂದ ಧನ, ಧರ್ಮದಿಂದ ಮೋಕ್ಷ ಅನ್ನುವವುಗಳನ್ನು ಪುರುಷಾರ್ಥಗಳೆಂದು ಏಕೆ ಹೆಸರು ಇಟ್ಟಿದ್ದಾರೆಂದರೆ! ಪುರುಷ ಅಂದರೆ ಬ್ರಹ್ಮವಿದ್ಯಾನುಸಾರ ಹೊರಗೆ ಗಂಡಸರಾದರೂ ಹೆಂಗಸರಾದರೂ ಅವರಲ್ಲಿರುವ ಜೀವಾತ್ಮ ಪರಮಾತ್ಮ ಸಂಬಂಧವಾದುದು, ಆದ್ದರಿಂದ ಅದನ್ನು **ಪುರುಷ** ಎನ್ನುವ ಶಬ್ದದಿಂದ ಕರೆದಿದ್ದಾರೆ. ಯಾವ ಜೀವಿಗಾದರು ಅರ್ಥ ಪುರುಷ ಎನ್ನುವ ಶಬ್ದದಲ್ಲಿಯೇ ಒಳಗೊಂಡಿದೆ. ಆದ್ದರಿಂದ ಪ್ರತಿ ಜೀವರಾಶಿಗೆ

ಬದುಕಿರುವಾಗ ಧನವೇಗೆ ಅಗತ್ಯವೊ, ಮರಣಿಸಿದ ನಂತರ ಮೋಕ್ಷ ಹಾಗೆ ಅಗತ್ಯ. ಬದುಕಿರುವಾಗ ಧನವು ರೂಪಾಯಿಯಾದರೆ ಮರಣಿಸಿದ ನಂತರ ಧನವು ಮೋಕ್ಷ. ಎಲ್ಲರೂ ಪ್ರಾಪಂಚಿಕ ಧನದ ಮೇಲೇ ಲಗ್ನವಾಗಿದ್ದಾರೆ. ಆದರೆ ಪರಮಾರ್ಥ ಧನವಾದ ಮೋಕ್ಷದ ಮೇಲೆ ಶ್ರದ್ಧೆ ಇಡುತ್ತಿಲ್ಲ.

ಪ್ರತಿ ಮಾನವನಿಗೂ ಮೋಕ್ಷವೆಂಬುದು ಅಗತ್ಯವೆಂದು, ಅದೇ ಪ್ರತಿ ಪುರುಷನಿಗೆ ನಿಜವಾದ ಧನವೆಂದು ತಿಳಿಸುತ್ತಾ, ಅದು ಹೇಗೆ ಲಭ್ಯವಾಗುತ್ತದೆ ಎಂದು ಅರ್ಥವಾಗುವುದಕ್ಕೆ ಪ್ರಪಂಚಧನ ಸಂಪಾದಿಸುವುದಕ್ಕೆ ಆಸೆ ಹೇಗೆ ಅವಶ್ಯಕವೋ ಹಾಗೆ ಪರಮಾರ್ಥಧನವಾದ ಮೋಕ್ಷವನ್ನು ಸಂಪಾದಿಸುವುದಕ್ಕೆ ಧರ್ಮ ಹಾಗೆ ಅವಶ್ಯಕವೆಂದು ತಿಳಿಸುತ್ತಾ ಉದಾಹರಣೆಗೆ ಕಾಮಾರ್ಥ ಎಂದು, ನಿಜಕ್ಕೆ ಧರ್ಮ ಮೋಕ್ಷಗಳೆಂದು ಪೂರ್ವದಲ್ಲಿ ಹೇಳಿದ್ದಾರೆ. ಈ ವಿಧವಾಗಿಯೇ ಬದುಕಿದಾಗ ತಂದೆ ಯಾರೆಂದು ತಿಳಿದುಕೊಳ್ಳುವುದು ಎಷ್ಟು ಮುಖ್ಯವೊ, ದೈವ ಯಾರೆಂದು ತಿಳಿದುಕೊಳ್ಳುವುದು ಸಹ ಅಷ್ಟೇ ಮುಖ್ಯವೆಂದು ತಿಳಿಸುತ್ತಾ, ತಂದೆಯನ್ನು ಯಾರ ಸಹಾಯದಿಂದ ತಿಳಿದುಕೊಳ್ಳಬೇಕೊ ತಿಳಿಸುತ್ತಾ, ಉದಾಹರಣೆಯಾಗಿ ತಾಯಿ ತಂದೆ ಎಂದು, ನಿಜವಾಗಲು ಗುರು ದೈವವೆಂದು ಹೇಳಿದ್ದಾರೆ. ದೈವವನ್ನು ಹೇಗೆ ತಿಳಿದುಕೊಳ್ಳಬೇಕೆಂಬುದಕ್ಕೆ ತಾಯಿ ತಂದೆ, ಗುರು ದೈವವೆಂದು, ಮೋಕ್ಷ ಹೇಗೆ ಹೊಂದಬೇಕೆನ್ನುವುದಕ್ಕೆ ಕಾಮಾರ್ಥ, ಧರ್ಮಮೋಕ್ಷಗಳೆಂದು ಆದಿಯಲ್ಲಿನವರು ಇಟ್ಟಿರುವ ವಾಕ್ಯಗಳಿವು. ಪುರುಷಾರ್ಥಗಳನ್ನುವವು ಒಂದು ಕಾಮಾರ್ಥ–ಧರ್ಮಮೋಕ್ಷಗಳನ್ನುವವೇ ಅಲ್ಲದೆ, ತಾಯಿ ತಂದೆ– ಗುರು ದೈವಗಳೆಂಬ ವಾಕ್ಯವು ಸಹ ಅನುಬಂಧವಾಗಿದೆ ಎಂದು ತಿಳಿಯಬೇಕು.

| | | | | |
|---|---|---|---|---|
| ತಾಯಿ | ತಂದೆ, | ಗುರು | ದೈವ | **ಪುರುಷಾರ್ಥಗಳು** |
| ಕಾಮ | ಅರ್ಥ, | ಧರ್ಮ | ಮೋಕ್ಷ | |

ಇನ್ನು ಇವುಗಳ ವರಸೆಯಲ್ಲಿ ಆದಿಯಲ್ಲಿನ ಹಿರಿಯರು ತಿಳಿಸಿರುವುದು ಏನೆಂದರೆ!

| | | | | | | |
|---|---|---|---|---|---|---|
| ತಾಯಿ | → | ತಂದೆ | | ಗುರು | → | ದೈವ |
| ↓ | | ↓ | | ↓ | | ↓ |
| ಆಸೆ | | ಧನ | | ಧರ್ಮವನ್ನು | | ಮೋಕ್ಷ |

ತಾಯಿ ಚಿಕ್ಕಂದಿನಿಂದ ಆ ವಸ್ತುವು ಈ ವಸ್ತುವು ಕೊಟ್ಟು, ಇದು ಬಚ್ಚಿಟ್ಟುಕೋ ಅದು ಬಚ್ಚಿಟ್ಟಿಕೋ ಎಂದು ಹೇಳುತ್ತಾ ಆಸೆಯನ್ನು ಕಲಿಸುತ್ತಾಳೆ. ಆದ್ದರಿಂದ ತಾಯಿಯಿಂದ ಆಸೆ ಲಭ್ಯವಾಗುತ್ತದೆ. ತಂದೆ ಧನವನ್ನು ಸಂಪಾದಿಸುವುದು ಕಲಿಸಿ ತನ್ನ ಧನವನ್ನು ಹಂಚಿಕೊಡುತ್ತಾನೆ. ಆದ್ದರಿಂದ ತಂದೆಯಿಂದ ಧನ ತಿಳಿಯುತ್ತದೆ. ಹಾಗೆ ಗುರುವು ಇದು ಜ್ಞಾನ ಇದು ಅಜ್ಞಾನವೆಂದು ಕಲಿಸಿ ಧರ್ಮವನ್ನು ತಿಳಿಸುತ್ತಾನೆ. ಆದ ಕಾರಣ ಗುರುವಿನಿಂದ ಧರ್ಮ ತಿಳಿಯುತ್ತದೆ. ಆ ವಿಧವಾಗಿಯೇ ನಾವು ತಿಳಿದುಕೊಂಡ ದೈವವನ್ನನುಸರಿಸಿ ಮೋಕ್ಷವಿರುತ್ತದೆ. ಆದ್ದರಿಂದ ತಾಯಿಯಿಂದ ಆಸೆ– ತಂದೆಯಿಂದ ಆಸ್ತಿ, ಗುರುವಿನಿಂದ ಧರ್ಮ – ದೈವವನ್ನನುಸರಿಸಿ ಮೋಕ್ಷವೆಂದು ಸಹ ತಿಳಿದುಕೊಳ್ಳಬಹುದು. ಪೂಜಿಸುವ ದೈವ ಸಾಕಾರವಾಗಿ ಭಗವಂತನು, ನಿರಾಕಾರವಾಗಿ ಆತ್ಮವಾಗದ ಪಕ್ಷದಲ್ಲಿ ಅವನಿಗೆ ಮೋಕ್ಷ ಲಭ್ಯವಾಗುವುದಿಲ್ಲ. ಹಾಗೆ ನಂಬಿದ ಗುರು ಪರಮಾರ್ಥ ಜ್ಞಾನ ತಿಳಿಸುವವನಾಗದೆ, ಗಿಡಕ್ಕು ಮರಕ್ಕು ಕೈ ಮುಗಿಸಿ ಭಜನೆಗಳು ಮಾಡಿಸುವವನಾದರೆ ಅವನಿಗೆ ಧರ್ಮ ಯಾವುದೋ ತಿಳಿದಿಲ್ಲ. ತಂದೆಗೆ ಆಸ್ತಿ ಇಲ್ಲದಿದ್ದರೆ ನಿನಗೆ ಏನು ಬರುವುದಿಲ್ಲ. ಆಸ್ತಿ ಇರುವ ತಂದೆಯಾದರೇನೆ ನಿನಗೆ ಧನ ಲಭ್ಯವಾಗುತ್ತದೆ. ಇನ್ನು ತಾಯಿ ಇಲ್ಲದಿದ್ದರು ಆಸೆಯನ್ನು ಎಲ್ಲರೂ ಸುಲಭವಾಗಿ ಕಲಿತುಕೊಳ್ಳುತ್ತಿದ್ದಾರೆ. ಆದ್ದರಿಂದ ಅದನ್ನು ಕುರಿತು ಚಿಂತಿಸಬೇಕಾಗಿರುವುದಿಲ್ಲ. ಮುಖ್ಯವಾದುದು ಧರ್ಮ, ಮೋಕ್ಷವಾದ್ದರಿಂದ ಅವುಗಳಿಗೋಸ್ಕರ ಕಾರಣವಾದ ಗುರುವು, ದೈವಗಳನ್ನು ತಿಳಿದುಕೊಳ್ಳೋಣ. ಇವರಲ್ಲಿ ಮೊದಲು ತಿಳಿದುಕೊಳ್ಳಬೇಕಾಗಿರುವುದು ಗುರುವನ್ನೇ, ಆದ್ದರಿಂದ ಕಾಲ ವ್ಯರ್ಥ ಮಾಡದಂತೆ ಜಾಗ್ರತೆಯಾಗಿ ಧರ್ಮ ತಿಳಿದ ಮತ್ತು ತಿಳಿಸುವ ಗುರುವನ್ನು ಆರಿಸಿಕೊಳ್ಳೋಣ.

ಪ್ರಕೃತಿ ಪುರುಷರನ್ನುವವು ಎರಡೇ ಮೊತ್ತವು ಸೃಷ್ಠಿಗೆ ಮೂಲ. ಅವುಗಳ ಆದಿ ಯಾರಿಗೂ ತಿಳಿದಿಲ್ಲ. ಆದರೂ ಗೀತೆಯಲ್ಲಿ ಹೇಳಿದ ಸಾರಾಂಶವನ್ನನುಸರಿಸಿ ಪ್ರಕೃತಿ, ಪುರುಷರನ್ನುವವರಿದ್ದಾರೆಂದು, ಪ್ರಕೃತಿ ಸ್ತ್ರೀ ಸ್ವರೂಪವಾದುದೆಂದು, ಅದರಿಂದಲೇ ಸಮಸ್ತ ಜೀವರಾಶಿಗಳ ಶರೀರಗಳು ತಯಾರಾಗುತ್ತಿವೆಯೆಂದು ತಿಳಿಯುತ್ತಿದೆ. ಪ್ರಕೃತಿ ಜನಿತವಾದ ಶರೀರಗಳಿಗೆ ಚಲನಾಶಕ್ತಿಕೊಡುವ ಪರಮಾತ್ಮ ಸರ್ವಜೀವರಾಶಿಗಳಿಗು ತಂದೆಯೆಂದು, ಶರೀರ ನಿರ್ಮಿತ ಮಾಡಿದ ಪ್ರಕೃತಿ ತಾಯಿ ಎಂದು ತಿಳಿಯಲ್ಪಟ್ಟಿದೆ. ಇದರಿಂದ ಒಟ್ಟಾರೆ ಸೃಷ್ಠಿಯೆಲ್ಲವನ್ನು ಎರಡು ಭಾಗಗಳಾಗಿ ಹೇಳಬಹುದು. ಒಂದು ಪರಮಾತ್ಮ, ಎರಡನೆಯದು ಪ್ರಕೃತಿ. ಇವುಗಳನ್ನು ವಿನಃ ಮತ್ತೇನು ಇಲ್ಲ. ಇವುಗಳಲ್ಲಿ ಪ್ರಕೃತಿ ಐದು ಭಾಗಗಳಾಗಿ, ಪರಮಾತ್ಮ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಪ್ರಕೃತಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಅನ್ನುವ ಐದು ಭಾಗಗಳಾಗಿ ಇರುವಾಗ, ಪುರುಷನು ಅನ್ನುವುದು ಜೀವಾತ್ಮ, ಆತ್ಮ, ಪರಮಾತ್ಮರನ್ನುವ ಮೂರುಭಾಗಗಳಾಗಿ ಇದೆ. ಪ್ರಕೃತಿಯಲ್ಲಿನ ಭಾಗಗಳು ಸ್ಥೂಲಕಣ್ಣುಗಳಿಗೆ ಕಾಣಿಸುವವು, ಆದ್ದರಿಂದ ಎಲ್ಲರಿಗೂ ತಿಳಿದಂತೆ ಇವೆ. ಆದರೆ ಪುರುಷಸಂಬಂಧವಾದ ಜೀವಾತ್ಮ, ಆತ್ಮ, ಪರಮಾತ್ಮಗಳು ಕಣ್ಣಿಗೆ ಕಾಣಿಸುವವು ಅಲ್ಲ. ಅವು ಕೇವಲ ಜ್ಞಾನಚಕ್ಷುವಿಗೆ ಮಾತ್ರವೇ ತಿಳಿಯುತ್ತವೆ. ಆದ್ದರಿಂದ ಇವುಗಳ ವಿವರ ಇಲ್ಲಿಯವರೆಗೂ ಬಹಳಜನರಿಗೆ ತಿಳಿದಿಲ್ಲವೆಂದೇ ಹೇಳಬಹುದು. ಯಾರಿಗಾದರೂ ಕೇಳಿದರೆ ಜೀವಿಯು, ದೇವರು ಅನ್ನುವ ಎರಡು ಪದಗಳೇ ನಮಗೆ ತಿಳಿದಿದೆಯಾಗಲಿ ಮೂರು ಇವೆಯೆಂದು ತಿಳಿದಿಲ್ಲ ಎನ್ನುತ್ತಿದ್ದಾರೆ. ಮೂವರು ಪುರುಷರ ಸವಿಸ್ತಾರವಾಗಿ ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ 16,17 ಶ್ಲೋಕದಲ್ಲಿ ಸಹ ಹೇಳಲಾಗಿದೆ. ಆದರೂ ಅಲ್ಲಿ ಬೋಧಕರೆಲ್ಲರೂ ಅವುಗಳನ್ನು ವಿವರಿಸದೆ ಕಪ್ಪೆದಾಟು ಹಾಕಿದ್ದಾರೆ. ಮತ್ತೆ ಕೆಲವರು ಮೂರು ಹೇಳಬೇಕೆಂಬ ಉದ್ದೇಶದಿಂದ ಒಂದು ಶರೀರ, ಎರಡು ಜೀವಿಯು, ಮೂರು ದೇವರೆಂದಿದ್ದಾರೆ. ಇನ್ನೂ ಕೆಲವರು ಅಲ್ಲಿ ಹೇಳಿದ ಕ್ಷರಾಕ್ಷರ ಪುರುಷೋತ್ತಮರ ಬಗ್ಗೆ ವಿವರಿಸುತ್ತ ಕ್ಷರವೆಂದರೆ ನಾಶವಾಗುವುದು ಶರೀರ, ಅಕ್ಷರವೆಂದರೇ ನಾಶವಾಗದಿರುವುದು ಜೀವಾತ್ಮ

ಪುರುಷೋತ್ತಮನೆಂದರೆ ದೇವರೆಂದು ಸಹ ಹೇಳಿದ್ದಾರೆ. ಪುರುಷರ ವಿವರದಲ್ಲಿ ಪ್ರಕೃತಿಯಾದ ಶರೀರವನ್ನು ತೆಗೆದುಕೊಳ್ಳುವುದು ಪೂರ್ತಿ ತಪ್ಪು. ಪ್ರಕೃತಿಯನ್ನು ಸ್ವಲ್ಪವೂ ತೆಗೆದುಕೊಳ್ಳದೆ ಕೇವಲ ಒಬ್ಬ ಪುರುಷರನ್ನು ಮಾತ್ರ ವಿವರಿಸಿಕೊಳ್ಳುವುದು ಸರಿಹೊಗುತ್ತದೆ. ಹಾಗಲ್ಲದೆ ಸ್ತ್ರೀ ಸಂಬಂಧವಾದ ಅಂದರೆ ಪ್ರಕೃತಿ ಸಂಬಂಧವಾದ ಶರೀರವನ್ನು ಸೇರಿಸಿ ಅರ್ಥ ಹೇಳಿ ಬರೆದ ಭಗವದ್ಗೀತೆಗಳು ಬಹಳ ಇವೆ. ಇಂತಹ ತಪ್ಪು ದಾರಿಯಿಂದ ಹೊರಬೀಳಬೇಕೆಂದರೆ ಪುರುಷರ ವಿವರ ತಿಳಿಯಬೇಕು. ಪುರುಷನು (ದೇವರು) ಕಣ್ಣಿಗೆ ಕಾಣಿಸುವವನು ಅಲ್ಲ, ಪ್ರಕೃತಿ ಕಣ್ಣಿಗೆ ಕಾಣಿಸುವುದು. ಕಣ್ಣಿಗೆ ಕಾಣಿಸದಿರುವುದನ್ನು ಮೂರು ಭಾಗಗಳಾಗಿ ವಿಭಜಿಸಿಕೊಳ್ಳಬೇಕು. ಅಂತಹ ವಿಭಜನೆಯಲ್ಲಿ ಕಣ್ಣಿಗೆ ಕಾಣಿಸುವ ಪ್ರಕೃತಿಯನ್ನು ಸೇರಿಸಿಕೊಳ್ಳುವುದು ಅಧರ್ಮ. ಈ ಅಧರ್ಮವನ್ನೆ ದೊಡ್ಡ ದೊಡ್ಡ ಭಗವದ್ಗೀತೆ ಗಳಲ್ಲಿ ಬರೆಯಲಾಗಿದೆ. ಭಕ್ತಿಯಿಂದ ಅವುಗಳನ್ನು ಓದಿದ ಪ್ರಜೆಗಳು ಅಷ್ಟೇ ಯೇನೋ ಅಂದುಕೊಳ್ಳುತ್ತಿದ್ದಾರೆ. ಆದ್ದರಿಂದ ಎಷ್ಟೋ ಜನ ಅಧರ್ಮವನ್ನೇ ಅರ್ಥಮಾಡಿಕೊಳ್ಳುವ ಅವಕಾಶವಿದೆ. ಹಾಗೆ ಆಗದಿರುವುದಕ್ಕೆ ಈಗ ಮೂವರು ಪುರುಷರ ವಿವರ ತಿಳಿದುಕೊಳ್ಳಬೇಕು.

ಪ್ರಕೃತಿಗೆ ವಿನಹ ಇರುವ ಯಾವುದೋ ಅತೀತವಾದ ಶಕ್ತಿಯನ್ನು ಪುರುಷನಂದಿದ್ದೇವೆ. ಆ ಪುರುಷನನ್ನು ಭಗವದ್ಗೀತೆಯಲ್ಲಿ ಮೂರು ಭಾಗಗಳಾಗಿ ವಿಭಜಿಸುತ್ತಾ **ಕ್ಷರನು, ಅಕ್ಷರನು, ಪುರುಷೋತ್ತಮನೆಂದು** ಶ್ಲೋಕಗಳಲ್ಲಿ ಹೇಳಿದ್ದಾರೆ. ಕ್ಷರನೆಂದರೆ ನಾಶವಾಗುವವನೆಂದು ಅರ್ಥ. ಇಲ್ಲಿ ನಾಶವಾಗುವುದೆಂದರೇನೆ ಬಹಳಜನ ನಾಶವಾಗುವುದು ಶರೀರವೇ ತಾನೆ, ಜೀವಾತ್ಮ ನಾಶ ಆಗುವುದಿಲ್ಲವಲ್ಲ, ಎಂದು ಪುರುಷನನ್ನು ಬಿಟ್ಟು ಪ್ರಕೃತಿಯಾದ ಶರೀರವನ್ನು ತೆಗೆದುಕೊಂಡಿದ್ದಾರೆ. ಜೀವಾತ್ಮ ಸಹ ನಾಶವಾಗುವುದೇ ಎಂದು ಅವರಿಗೆ ತಿಳಿಯದೆಹೋಗಿದೆ. ಜೀವಾತ್ಮ ಶರೀರಗಳನ್ನು ಬಿಟ್ಟು ಬೇರೆ ಶರೀರಗಳಿಗೆ ಹೋದಾಗ ಶರೀರಗಳು ಮಾತ್ರವೇ ನಶಿಸುತ್ತಿವೆ. ಜೀವಾತ್ಮ ನಾಶವಾಗದೆ ಮತ್ತೊಂದು ಶರೀರವನ್ನು ಪ್ರವೇಶಿಸುವುದು ನಿಜವೇ. ಯಾವುದೋ ಒಂದು ದಿನ ಜೀವಾತ್ಮ ಜ್ಞಾನ

ತಿಳಿದವನಾಗಿ, ಪರಮಾತ್ಮನಲ್ಲಿ ಐಕ್ಯವಾದ ದಿನ ಜೀವಾತ್ಮ ಎಂಬುವವನು ಇನ್ನು ಹುಟ್ಟುವುದಿಲ್ಲವಲ್ಲ! ಆದ್ದರಿಂದ ಆ ದಿನ ಅವನು ನಾಶ ಹೊಂದಿದಂತೆ, ಜೀವಪದ ಪೂರ್ತಿ ನಾಶವಾದ ನಂತರವೇ ಮೋಕ್ಷ ಹೊಂದುತ್ತಾನೆ. ಅನೇಕ ಜನ್ಮಗಳ ನಂತರ ಮೋಕ್ಷ ಸೇರುವ ದಿನದಂದು ಜೀವಾತ್ಮ ನಾಶ ಹೊಂದುವವನೇ, ಆದ್ದರಿಂದ ಅವನನ್ನು ಕ್ಷರನೆಂದು ಅರ್ಥ ಮಾಡಿಕೊಳ್ಳಬೇಕು. ಅಕ್ಷರನೆಂಬುವವನು ಅಂದರೆ ನಾಶ ಆಗದಿರುವನು ಆತ್ಮ, ಆತ್ಮ ಅನ್ನುವವನು ಎಂದಿಗೂ ನಾಶ ಆಗದಿರುವವನು, ಆತ್ಮ ಸರ್ವಜೀವರಾಶಿಗಳ ಶರೀರಗಳಲ್ಲಿ ಏಕವಾಗಿ ಇದ್ದು, ಒಂದು ಜೀವಾತ್ಮ ನಾಶ ಹೊಂದಿದರೂ ಉಳಿದ ಜೀವಾತ್ಮಗಳನ್ನು ಆಧಾರಮಾಡಿ ಕೊಂಡಿದೆ. ಎಂದಿಗೂ ನಾಶವಾಗದಿರುವುದು ಆದ್ದರಿಂದ ಆತ್ಮವನ್ನು ಅಕ್ಷರ ನೆನ್ನಬಹುದು. ಕ್ಷರ ಪುರುಷನಾದ ಜೀವಾತ್ಮವಲ್ಲದೆ, ಅಕ್ಷರ ಪುರುಷನಾದ ಆತ್ಮ ಅಲ್ಲದೆ ಇವುಗಳೆರಡಕ್ಕಿಂತ ಬೇರೆಯಾಗಿ ಉತ್ತಮನಾಗಿರುವವನನ್ನು ಪುರುಷೋತ್ತಮನೆಂದಿದ್ದಾರೆ. ಪುರುಷೋತ್ತಮನೆಂದರೆ ಇಬ್ಬರು ಪುರುಷರಿಗಿಂತ ಉತ್ತಮವಾದವನೆಂದು ಅರ್ಥ, ಆದರೆ ಅದು ಒಂದು ಹೆಸರಲ್ಲ. ಹಾಗೆಯೇ ಮೂರನೇ ಪುರುಷನಾದವನನ್ನು ಪರಮಾತ್ಮ ಎನ್ನುವುದು ಸಹ ಒಂದು ಹೆಸರಲ್ಲ. ಅಕ್ಷರನಾದ ಆತ್ಮಕ್ಕಿಂತ ಬೇರೆಯಾಗಿರುವವನನ್ನು ಪರಮಾತ್ಮ ಎನ್ನುತ್ತಿದ್ದೇವೆ. ಪರ ಎಂದರೆ ಬೇರೆ ಎಂದು ಅರ್ಥ, ಪರಮಾತ್ಮ ಎಂದರೆ ಆತ್ಮಕ್ಕಿಂತ ಬೇರೆಯಾಗಿರುವುದೆಂದು ಅರ್ಥ.

ಕ್ಷರ ಅಕ್ಷರ ಪುರುಷೋತ್ತಮರ ವಿವರ ಈಗ ಹೇಳಿಕೊಂಡಿದ್ದೇವೆ. ಇವುಗಳನ್ನು ಕುರಿತು ಇನ್ನೂ ತಿಳಿದುಕೊಳ್ಳಬೇಕೆಂದುಕೊಂಡಾಗ ಕ್ಷರನಾದ ಜೀವಾತ್ಮ ಎಲ್ಲಿ ವಾಸಿಸುತ್ತಿದ್ದಾನೆ. ಹಾಗೆ ಅಕ್ಷರನು ಪುರುಷೋತ್ತಮರು ಎಲ್ಲಿದ್ದಾರೆ? ಅವರ ಕೆಲಸವೇನು? ಯಾವ ನಿಮಿತ್ತವಿದ್ದಾರೆ? ಅವರ ಆಕಾರವೇನು? ಅನ್ನುವವು ಪ್ರಶ್ನೆಗಳಾಗಿ ನಿಲ್ಲುತ್ತವೆ. ಅವುಗಳಿಗೆ ಉತ್ತರಗಳು ತಿಳಿದುಕೊಂಡರೆ ಜೀವಾತ್ಮಕ್ಕೆ ಆಕಾರವಿದೆ ಎಂದು ಹೇಳುತ್ತಿದ್ದೇವೆ. ಜೀವಾತ್ಮಕ್ಕೆ ಆಕಾರವಿದೆ ಎಂಬ ಮಾತು ಇದೇ ಮೊದಲಸಾರಿ ಕೇಳುತ್ತಿದ್ದಾರೆ, ಆದ್ದರಿಂದ ಬಹುಶ ನಿಮಗೆಲ್ಲರಿಗೂ

ಆಶ್ಚರ್ಯವಾಗಿರುತ್ತದೆ. ಕೇವಲ ಜೀವಾತ್ಮನಿಗೆ ಅಲ್ಲದೆ ಆತ್ಮಕ್ಕು ಸಹ ಅವಧಿ ಇದೆಯೆಂದು ನಾವು ಹೇಳಿದರೆ ಇನ್ನೂ ಆಶ್ಚರ್ಯವಾದ ಮಾತೆ ಅಲ್ಲವೆ! ಆಶ್ಚರ್ಯವಾದರೂ ನಿಜವಾಗಲು ಜೀವಾತ್ಮಕ್ಕೂ, ಆತ್ಮಕ್ಕೂ ಅವಧಿ ಆಕಾರಗಳಿವೆ. ಆದರೆ ಪರಮಾತ್ಮ ಎನ್ನುವುದಕ್ಕೆ ಮಾತ್ರ ಯಾವ ಆಕಾರ ಯಾವ ಅವಧಿ ಇಲ್ಲ. ಮೊದಲ ಎರಡನೇ ಪುರುಷರಾದವರಿಗೆ ಜೀವಾತ್ಮಯೆಂದು, ಆತ್ಮಯೆಂದು ಹೆಸರುಗಳಿವೆ ಆದ್ದರಿಂದ ಅವುಗಳಿಗೆ ಆಕಾರಗಳಿವೆ. ಮೂರನೆಯದಾದ ಪರಮಾತ್ಮಕ್ಕೆ (ಆತ್ಮಗಿಂತ ಬೇರೆಯಾಗಿರುವುದಕ್ಕೆ) ಹೆಸರು ಇಲ್ಲ. **ರೂಪ ವಿದ್ದರೆ ನಾಮ, ನಾಮವಿದ್ದರೆ ರೂಪ** ಇರುತ್ತದೆಂಬ ಸೂತ್ರದ ಪ್ರಕಾರ ಮೊದಲ ಎರಡು ಆತ್ಮಗಳಿಗೆ ಹೆಸರುಗಳಿವೆ, ಆದ್ದರಿಂದ ಅವುಗಳಿಗೆ ಅವಧಿಯಿರುವ ಆಕಾರ ಇದೆಯೆಂದು ಹೇಳಬಹುದು. ಪರಮಾತ್ಮನಿಗೆ ಹೆಸರಿಲ್ಲ, ಆದ್ದರಿಂದ ಅದಕ್ಕೆ ಅವಧಿ ಆಕಾರ ಇಲ್ಲ. ಈ ಮಾತು ಕೇಳಿದಾಗ ಕೆಲವರಿಗೆ ಕೆಲವು ಅನುಮಾನಗಳು ಬರಬಹುದು. ಅವರು ಹೀಗೆ ಕೇಳಬಹುದು ಪ್ರಕೃತಿ ಮಾತ್ರವೇ ಕಣ್ಣಿಗೆ ಕಾಣಿಸುವುದು, ಪುರುಷರು ಕಣ್ಣಿಗೆ ಕಾಣಿಸುವುದಿಲ್ಲವೆಂದು ಮೊದಲೇ ನೀವು ಹೇಳಿದ್ದೀರಲ್ಲವೆ ಹಾಗೆ ಕಾಣಿಸದ ಪುರುಷರಿಗೇಗೆ ಆಕಾರ ಇದೆಯೆಂದು ಹೇಳುತ್ತಿದ್ದೀರ ಎಂದು ಕೇಳಬಹುದು. ವಾಸ್ತವವೇ ಪ್ರಕೃತಿ ಮಾತ್ರವೇ ಕಣ್ಣಿಗೆ ಕಾಣಿಸುತ್ತದೆ, ಪುರುಷರು ಕೇವಲ ಒಂದು ಜ್ಞಾನನೇತ್ರಕ್ಕೆ ಮಾತ್ರವೇ ಕಾಣಿಸುತ್ತಾರೆಂದು ತಿಳಿಸುತ್ತಿದ್ದೇವೆ.

ಜೀವಾತ್ಮನಾದ ಮೊದಲ ಪುರುಷನಿಗೆ ಮತ್ತು ಎರಡನೆ ಪುರುಷನಾದ ಆತ್ಮಕ್ಕೆ ನಿವಾಸಸ್ಥಾನವಿದೆ. ಆದ್ದರಿಂದ ಅವರ ನಿವಾಸ ಸ್ಥಾನಪರಿಧಿಯನ್ನನುಸರಿಸಿ ಅವರ ಆಕಾರವನ್ನು ಊಹಿಸಬಹುದು. ಮೂರನೆ ಪುರುಷನಾದ ಪರಮಾತ್ಮನಿಗೆ ನಿವಾಸಪರಿಧಿ ಇಲ್ಲ ಎಲ್ಲಾ ಕಡೆ ವ್ಯಾಪಿಸಿದವನು, ಆದ್ದರಿಂದ ಆ ಮೂರನೆ ಪುರುಷನಿಗೆ ಆಕಾರವಿಲ್ಲ. ಅಷ್ಟೇ ಅಲ್ಲದೆ ಈ ಮೂವರು ಪುರುಷರಿಗೆ ಯೋಗಶಾಸ್ತ್ರದ ಪ್ರಕಾರ ಶಾಸ್ತ್ರಬದ್ಧವಾದ ಸೂತ್ರಗಳು ಇವೆ. ಅವುಗಳಲ್ಲಿ ಒಂದು **ಜೀವಾತ್ಮ ಎಂದರೆ ಒಂದು ಶರೀರದಲ್ಲಿ ಮಾತ್ರವೇ ವಾಸಿಸುವುದು.** ಈ ಸೂತ್ರದ

ಪ್ರಕಾರ ಯೋಚಿಸಿದರೆ ಪ್ರಪಂಚದಲ್ಲಿ ಎಷ್ಟು ಶರೀರಗಳು ಇವೆಯೋ ಅವುಗಳೆಲ್ಲವುಗಳಲ್ಲಿ ಎಲ್ಲಾ ಜೀವಾತ್ಮಗಳು ಇವೆ. ಅಂದರೆ ಒಂದೊಂದು ಶರೀರ ದಲ್ಲಿ ಒಂದೊಂದು ಜೀವಾತ್ಮ ಇದೆಯೆಂದು ತಿಳಿಯುತ್ತಿದೆ. ಎಷ್ಟೋ ಶರೀರಗಳಲ್ಲಿ ಎಷ್ಟೋ ಜೀವಾತ್ಮಗಳು ಬೇರೆ ಬೇರೆಯಾಗಿ ಇರುವುದರಿಂದಲೇ ಅವುಗಳೆಲ್ಲವನ್ನು ಭಗವದ್ಗೀತೆಯಲ್ಲಿ ಸರ್ವ ಜೀವರಾಶಿಗಳೆಂದು ಹೇಳಲಾಗಿದೆ. ಈ ವಿಧವಾಗಿ ಒಂದು ಶರೀರದಲ್ಲಿ ವಾಸಿಸುವುದನ್ನು ಜೀವಾತ್ಮ ಎನ್ನುತ್ತಿದ್ದೇವೆ. ಜೀವಾತ್ಮ ಶರೀರದಲ್ಲಿ ತಲೆಮಧ್ಯೆ ಭಾಗದಲ್ಲಿ ಗುಣಗಳ ಮಧ್ಯದಲ್ಲಿರುವ ಬುದ್ಧಿ, ಚಿತ್ತ, ಅಹಮ್ ಎನ್ನುವವುಗಳ ಆವರಣದಲ್ಲಿ ಮಧ್ಯದಲ್ಲಿ ಇದೆ. ಜೀವಾತ್ಮ ಸುಖದುಃಖ ಗಳನ್ನನುಭವಿಸುತ್ತಾ ಶರೀರದಲ್ಲಿ ವಾಸಿಸುತ್ತಿದೆ. ಆದ್ದರಿಂದ ಅದರ ಸ್ವರೂಪವನ್ನು ಜ್ಞಾನನೇತ್ರರು ಗುರುತಿಸುತ್ತಾರೆ. ಇದೇ ವಿಷಯವನ್ನು ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ 10ನೇ ಶ್ಲೋ॥ ಈ ಕೆಳಗಿನ ವಿಧವಾಗಿ ಹೇಳಲಾಗಿದೆ.

**ಶ್ಲೋ॥** ***ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್।***
***ವಿಮೂಢಾ ನಾನು ಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥***

**ಭಾವಾರ್ಥ :-** ಜೀವಾತ್ಮ ಗುಣಮಯನಾಗಿ ಶರೀರದಲ್ಲಿ ವಾಸಿಸುತ್ತಾ ಸುಖ ದುಃಖಗಳನ್ನನುಭವಿಸುತ್ತಿರುತ್ತದೆ. ಈ ವಿಷಯ ಮೂಢರಿಗೆ ಸ್ವಲ್ಪವೂ ತಿಳಿದಿಲ್ಲ. ಜ್ಞಾನನೇತ್ರರು ಮಾತ್ರ ನೋಡುತ್ತಾರೆ. ಗೀತೆಯಲ್ಲಿ ಭಗವಂತನು ಹೇಳಿದಂತೆ ಜೀವಾತ್ಮ ಆತ್ಮಗಳ ಸ್ವರೂಪ ಜ್ಞಾನನೇತ್ರ ಇರುವವರಿಗೇ ತಿಳಿಯುತ್ತದೆ.

ಹಾಗೆ ಜ್ಞಾನನೇತ್ರರು ಜೀವಾತ್ಮ, ಆತ್ಮಗಳನ್ನು ನೋಡಿದರೂ ಕೇವಲ ಜೀವಾತ್ಮ ಆಕಾರವನ್ನು ಮಾತ್ರ ಹೊರಗೆ ಹೇಳುತ್ತಾರೆ. ಜೀವಾತ್ಮ ಚಿಕ್ಕದಾದ್ದರಿಂದ ಅದರ ಸ್ವರೂಪವನ್ನು ಹೊರಗೆ ತೋರಿಸುತ್ತಿದ್ದಾರೆ ಮತ್ತು ಹೇಳುತ್ತಿದ್ದಾರೆ. ಜೀವಾತ್ಮ ಆಕಾರ ಬುದ್ಧಿ, ಚಿತ್ತ, ಅಹಮ್ ಎನ್ನುವ ಮೂರು ಪೊರೆಗಳ ಮಧ್ಯದಲ್ಲಿ ಸಿಲುಕಿಕೊಂಡ ಖಾಲಿ ಸ್ಥಳವಾದ್ದರಿಂದ ಅದಕ್ಕೊಂದು ಆಕಾರ ಏರ್ಪಟ್ಟಿದೆ. ಜೀವಾತ್ಮ ಆಕಾರ ಹೀಗೆ ಇದೆ.




ಮೇಲಿರುವ ಚಿತ್ರದಲ್ಲಿ ಜೀವಾತ್ಮ ಆಕಾರ ಖಾಲಿಯಾಗಿರುವ ಶೂನ್ಯ ವಾದರೆ ಅದರ ಸುತ್ತಾ ಇರುವ ಪೊರೆ ಬುದ್ಧಿ, ಆ ನಂತರ ಇರುವುದು ಚಿತ್ತವು, ಮೂರನೆ ಹೊರಗಿನ ಪೊರೆ ಅಹಮ್. ಈ ಚಿತ್ರದ ಮೂಲಕ ಕಣ್ಣಿಗೆ ತಿಳಿಯದ, ಜ್ಞಾನನೇತ್ರಕ್ಕೆ ಮಾತ್ರವೇ ಕಾಣಿಸುವ ಜೀವಿಯೇ ಅಲ್ಲದೆ ಬುದ್ಧಿ, ಚಿತ್ತ, ಅಹಮ್ ಒಂದರ ಆಕಾರಗಳು ಸಹ ತಿಳಿದುಹೋಗಿವೆ. ಎಲ್ಲಾ ಜೀವಿಗಳ ಆಕಾರವೊಂದೇ ಆದರೂ ಅವುಗಳ ಸುತ್ತಾ ಇರುವ ಪೊರೆಗಳ ಮಂದವು ಒಬ್ಬೊಬ್ಬರಿಗೂ ಒಂದೊಂದು ವಿಧವಾಗಿ ಇರುತ್ತದೆ. ಜೀವಿಯ ಪಕ್ಕದಲ್ಲಿರುವ ಬುದ್ಧಿಪೊರೆ ಒಬ್ಬರಿಗೆ ಮಂದವಾಗಿ ಒಬ್ಬರಿಗೆ ತೆಳುವಾಗಿರಬಹುದು. ತೆಳುವಾಗಿ ರುವ ಪೊರೆ ಬಹಳ ಚುರುಕುತನ ಹೊಂದಿ ಒಳ್ಳೆಯ ಯೋಚನೆ ಮಾಡುವು ದಾಗಿರುತ್ತದೆ. ಮಂದವಾದ ಪೊರೆ ಚುರುಕುತನ ಇಲ್ಲದೆ ಯೋಚನಾ ತೀವ್ರತೆಯಿಲ್ಲದೆ ಇರುತ್ತದೆ. ಆದ್ದರಿಂದಲೇ ಇವನದು ಮಂದಬುದ್ಧಿ ಆದ್ದರಿಂದ ತಿಳುವಳಿಕೆ ಕಡಿಮೆ ಇರುವವನೆಂದು, ಇವನದು ಚುರುಕಾದ ಬುದ್ಧಿಯೆಂದು, ತೆಳುವಾದ ಬುದ್ಧಿಯೆಂದು ಆದ್ದರಿಂದ ತಿಳುವಳಿಕೆ ಇರುವವನೆಂದು ಎನ್ನುತ್ತಿ ರುತ್ತೇವೆ. ಹೀಗೆ ಪೂರ್ವದಲ್ಲಿ ಜೀವಿಯಸ್ಥಿತಿ ಬುದ್ಧಿಯ ಸ್ಥಿತಿ ತಿಳಿದವರು ಎನ್ನುತ್ತಿದ್ದರು. ಆ ಮಾತುಗಳು ಇಂದಿಗೂ ಇದ್ದರು, ಎನ್ನುವವರು ಜೀವಿಯಸ್ಥಿತಿ, ಬುದ್ಧಿಸ್ಥಿತಿ ತಿಳಿದವರು ಎನ್ನುವುದಿಲ್ಲ, ತಿಳಿಯದವರೇ ಎನ್ನುತ್ತಿದ್ದಾರೆ. ಇನ್ನು ಆತ್ಮ ವಿಷಯ ತಿಳಿದುಕೊಳ್ಳೋಣ.

ಒಂದೊಂದು ಶರೀರದಲ್ಲಿ ಒಂದೊಂದು ಜೀವಾತ್ಮ ಇರುವಾಗ, ಎಲ್ಲಾ ಶರೀರಗಳಲ್ಲಿಯೂ ಒಂದೇ ವಿಧವಾದ ಆತ್ಮ ಇರುತ್ತದೆ. ಎಲ್ಲಾ ಶರೀರಗಳಲ್ಲಿನ ಆತ್ಮ ಒಂದೇ ಆದರೂ ಅದು ಎಲ್ಲಾ ಶರೀರಗಳಲ್ಲಿ ಬಿಡಿಬಿಡಿಯಾಗಿದೆ. ಎಷ್ಟು ಜೀವ ಶರೀರಗಳಿವೆಯೋ ಅವುಗಳೆಲ್ಲವುಗಳಲ್ಲಿ ಆತ್ಮ ಬೇರೆಬೇರೆಯಾಗಿದ್ದು, ಜೀವಿಯ ಕರ್ಮಪ್ರಕಾರ ಬೇರೆ ಬೇರೆ ಕೆಲಸಗಳು ಮಾಡುತ್ತಿದೆ. ಆತ್ಮ ಅನ್ನುವುದು ಒಂದು ಚೈತನ್ಯಶಕ್ತಿ ಎಂದು ಹೇಳಬಹುದು. ಹಾಗೆ ಏಕೆ ಹೇಳುತ್ತಿದ್ದೇವೆಂದರೆ! ಶರೀರದಲ್ಲಿ ಇದ್ದು ಆ ಶರೀರವನ್ನು ಒಳಗೂ ಹೊರಗೂ ಕದಿಲಿಸಿ ಕೆಲಸ ಮಾಡಿಸುತ್ತಿದೆ. ಚಲನ ಶಕ್ತಿಯಾಗಿದೆ ಆದ್ದರಿಂದ ಆತ್ಮವನ್ನು ಚೈತನ್ಯ ಅನ್ನುತ್ತಿದ್ದೇವೆ. ಬೇರೆ ಬೇರೆ ಶರೀರಗಳಲ್ಲಿ ಬೇರೆ ಬೇರೆಯಾಗಿ ಕೆಲಸ ಮಾಡುವುದರಿಂದ ಆತ್ಮವನ್ನು ಬೇರೆ ಬೇರೆ ಭಾಗಗಳಾಗಿ ಹೇಳಿಕೊಳ್ಳುತ್ತಿದ್ದೇವೆ. ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ ಜಗತ್ತಿನಲ್ಲಿ ಇರುವುದು ಒಂದೇ ಆತ್ಮ ಆದರೂ ಅದು ಬೇರೆಬೇರೆ ಜೀವ ಶರೀರಗಳಲ್ಲಿ ವಾಸಿಸುತ್ತಾ, ಬೇರೆ ಬೇರೆ ಕೆಲಸಗಳು ಮಾಡುವುದರಿಂದ ಬೇರೆ ಬೇರೆ ಆತ್ಮಗಳಾಗಿ ಪರಿಗಣಿಸಲ್ಪಡುತ್ತಿದೆ. ಆದ್ದರಿಂದ ಒಂದೊಂದು ಜೀವಾತ್ಮಕ್ಕೆ ಶರೀರದಲ್ಲಿ ಜೊತೆಯಾಗಿ ಒಂದೊಂದು ಆತ್ಮ ಇದೆಯೆಂದು ಹೇಳಬಹುದು. ಉದಾಹರಣೆಗೆ ಒಂದು ಊರಿನಲ್ಲಿ ಸಾವಿರಜನ ಮನುಷ್ಯರಿದ್ದಾರೆಂದುಕೊಳ್ಳೋಣ, ಹಾಗೆಯೇ 50 ನಾಯಿಗಳಿವೆ, 500 ಕೋಳಿ ಇವೆ, ಉಳಿದ ಕ್ರಿಮಿ ಕೀಟಗಳೆಲ್ಲ ಒಂದು ಲಕ್ಷ ಇವೆ. ಅಲ್ಲಿಗೆ ಆ ಊರಿನಲ್ಲಿ ಒಟ್ಟು ಜೀವ ಶರೀರಗಳೆಲ್ಲವೂ 1,10,550 ಎಂದು ಹೇಳಬಹುದು. ಒಬ್ಬೊಬ್ಬ ಜೀವಿಗೂ ಒಂದೊಂದು ಆತ್ಮವನ್ನು ಲೆಕ್ಕಿಸಿದರೆ ಒಟ್ಟು ಜೀವಾತ್ಮಗಳಜೊತೆ ಆತ್ಮಗಳು ಸಹ 1,10,550 ಎಂದೇ ಹೇಳಬಹುದು. ವಾಸ್ತವಕ್ಕೆ ಆತ್ಮ ಒಂದೇ ಆದರೂ ಶರೀರಗಳನ್ನನುಸರಿಸಿ, ಅದರಲ್ಲಿನ ಜೀವಿಗಳ ಕರ್ಮವನ್ನನುಸರಿಸಿ, ಆತ್ಮ ಬೇರಬೇರೆಯಾಗಿ ಲೆಕ್ಕಿಸಲ್ಪಡುತ್ತಿದೆ. ಈ ವಿಧವಾಗಿ ಆತ್ಮ ಏಕವೇ ಆದರೂ ಒಂದು ವಸ್ತುವು ಬೇರೆಬೇರೆ ಕನ್ನಡಿಗಳಲ್ಲಿ ಬೇರೆಬೇರೆಯಾಗಿ ಕಾಣಿಸಿದಂತೆ ಒಂದೇ ಆತ್ಮ ಬೇರೆಬೇರೆ ಶರೀರಗಳಲ್ಲಿ ಬೇರೆಬೇರೆ ಆತ್ಮಗಳಾಗಿ ತಿಳಿಯುತ್ತಿದೆ. ಇದರಿಂದ ಜೀವಿಯೊಂದಿಗೆ ಆತ್ಮ ಕೂಟಸ್ಥನಾಗಿ ಇದ್ದಾನೆಂದು ಭಗವದ್ಗೀತೆಯಲ್ಲಿ

ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ 16ನೇ ಶ್ಲೋಕದಲ್ಲಿ ಭಗವಂತನೇ ಹೇಳಿದ್ದಾನೆ. ಜೀವಾತ್ಮ ನಾಶವಾದರೂ ಆತ್ಮ ನಾಶವಾಗುವುದಿಲ್ಲವೆಂದು, ಜೀವಾತ್ಮ ಕ್ಷರನಾದರೆ ಆತ್ಮ ಅಕ್ಷರನೆಂದು, ಅದೇ ಶ್ಲೋಕದಲ್ಲಿ ಹೇಳಿದ್ದಾರೆ. ಶ್ಲೋಕದ ಪ್ರಕಾರ ಒಂದು ಶರೀರದಲ್ಲಿನ ಜೀವಿಯು ಸಂಪೂರ್ಣನು, ಆದ್ದರಿಂದ ಅವನು ನಾಶವಾದರೂ ಒಂದು ಶರೀರದಲ್ಲಿನ ಆತ್ಮ ಅಸಂಪೂರ್ಣನು, ಆದ್ದರಿಂದ ಆತ್ಮ ನಾಶವಾಗು ವುದಿಲ್ಲವೆಂದು ತಿಳಿಯುತ್ತಿದೆ. ಜೀವಿಯ ಕರ್ಮಪ್ರಕಾರ ಶರೀರವನ್ನು ನಡೆಸಿ, ಜೀವಿಯಿಂದ ಕರ್ಮವನ್ನು ಅನುಭವಿಸುವಂತೆಮಾಡುವುದು ಆತ್ಮವೊಂದರ ಕೆಲಸ. ಕರ್ಮ ಮುಗಿದುಹೋದಾಗ ಜೀವಿಯನ್ನು ತನ್ನಲ್ಲಿ ಸೇರಿಸಿಕೊಂಡು ತಾನು ಪರಮಾತ್ಮನಲ್ಲಿ ಬೆರೆತುಹೋಗಿ ಜೀವಿಯನ್ನು ಪರಮಾತ್ಮನಲ್ಲಿ ಸೇರಿಸುವುದು ಆತ್ಮದ ಕರ್ತವ್ಯ. ಜೀವಿಯನ್ನು ಪರಮಾತ್ಮನಲ್ಲಿ ಅನುಸಂಧಾನ ಮಾಡಿದ ನಂತರ ಆತ್ಮ ಅದೃಶ್ಯವಾಗಿಹೋಗಿ ತಾನು ಅಕ್ಷರನಾಗಿಯೇ ಇರುತ್ತಾನೆ.

ಒಂದು ಜೀವಾತ್ಮಕ್ಕೆ ಜೊತೆಯಾಗಿರುವ ಆತ್ಮ ಭಾಗ ಅಥವಾ ಆತ್ಮ ಆ ಜೀವಿಯು ಎಷ್ಟು ಜನ್ಮಗಳೆತ್ತಿದರೂ ಅವನ ಹಿಂದೆಯೇ ಇದ್ದು ಅವನು ಕರ್ಮವನ್ನು ಅನುಭವಿಸುವಂತೆ ಮಾಡುತ್ತಿರುತ್ತದೆ. ಆ ಜೀವಿಯು ತನ್ನ ಪಕ್ಕದಲ್ಲಿರುವ, ತನ್ನ ಹಿಂದಿರುವ, ತನಗೆ ಎಲ್ಲಾ ಕೆಲಸಗಳು ಮಾಡಿ ಇಡುತ್ತಿರುವ ಆತ್ಮವನ್ನು ತಿಳಿದುಕೊಂಡು, ಆ ನಂತರ ಪರಮಾತ್ಮನನ್ನು ಸೇರಬೇಕೆಂದುಕೊಂಡರೆ ಅವನ ಕರ್ಮ ಮುಗಿದುಹೋದಾಗ ಅವನನ್ನು ಪರಮಾತ್ಮದೊಳಗೆ ಸೇರಿಸುತ್ತದೆ. ಈ ಪದ್ಧತಿ ಪ್ರಕಾರವೇ ಆತ್ಮ ಈಗ ನಮ್ಮ ಶರೀರದಲ್ಲಿ ಸಹ ಇದೆ. ನಿನ್ನ ಶರೀರದಲ್ಲಿ ನಿನ್ನ ಆತ್ಮ ಇರುವಾಗ, ನನ್ನ ಶರೀರದಲ್ಲಿ ನನ್ನ ಆತ್ಮ ಇದೆ. ನಿನ್ನ ಆತ್ಮ ನನ್ನ ಆತ್ಮಾ ಎರಡೂ ಒಂದೇ, ಆದರೂ ನಿನ್ನ ಕರ್ಮಪ್ರಕಾರ ನಿನ್ನ ಆತ್ಮ, ನನ್ನ ಕರ್ಮಪ್ರಕಾರ ನನ್ನ ಆತ್ಮ ಶರೀರಗಳಲ್ಲಿ ಕೆಲಸ ಮಾಡುತ್ತಿರುತ್ತದೆ. ಕರ್ಮವನ್ನು ಅನುಭವಿಸುವುದು ಜೀವಾತ್ಮವೊಂದರ ಕೆಲಸವಾದರೆ ಕರ್ಮವನ್ನು ಚಾಚು ತಪ್ಪದೆ ಆಚರಿಸುವುದು ಆತ್ಮವೊಂದರ ಕೆಲಸ. ಇದನ್ನನುಸರಿಸಿ ಆಚರಿಸುವವನು ಬೇರೆ, ಅನುಭವಿಸುವವನು ಬೇರೆಯೆಂದು, ಆಚರಿಸುವವನು ನಿನ್ನ ಆತ್ಮ ಆದರೆ

ಅನುಭವಿಸುವವನು ನೀನೇ ಎಂದು ತಿಳಿದುಕೋ. ಅಷ್ಟೇ ಅಲ್ಲದೆ ಆತ್ಮ ನಿನ್ನ ಗುಣಗಳಿಂದ ನಿನ್ನ ಭಾವಗಳಿಂದ ಸಂಬಂಧವಿಲ್ಲದೆ ಕೇವಲ ಕರ್ಮದಿಂದ ಮಾತ್ರ ಸಂಬಂಧ ಇಟ್ಟುಕೊಂಡಿದೆ. ಜಗತ್ತಿನಲ್ಲಿ ಒಬ್ಬ ಮನುಷ್ಯ ಮಾಡುವ ಅತಿ ಚಿಕ್ಕ ಕೆಲಸ ಮೊದಲುಗೊಂಡು ಅತಿ ದೊಡ್ಡ ಕೆಲಸದ ವರೆಗೂ ಆ ಮನುಷ್ಯನಲ್ಲಿನ ಆತ್ಮವೇ ಮಾಡುತ್ತಿದೆ. ಆದರೆ ಆ ಮನುಷ್ಯನಲ್ಲಿನ ಜೀವಾತ್ಮ ಮಾತ್ರ ಹನ್ನೆರಡು ಗುಣಗಳ ಭಾವಗಳಿಂದ ಕೂಡಿಕೊಂಡವನಾಗಿ ಎಲ್ಲಾ ಕೆಲಸಗಳು ತಾನೇ ಮಾಡುತ್ತಿದ್ದೇನೆಂದು ತಿಳಿಯುತ್ತಿರುತ್ತಾನೆ. ಜೀವಿಯು ಏನಂದುಕೊಂಡರು ಆತ್ಮ ಮಾತ್ರ ತನ್ನ ಕೆಲಸವನ್ನು ತಾನು ಮಾಡುತ್ತಲೇ ಹೋಗುತ್ತಿರುತ್ತಾನೆ. ಇದು ಶರೀರದಲ್ಲಿ ಆತ್ಮ ವೊಂದರ ವಿಧಾನವೆಂದು ತಿಳಿದರೆ ಅದೇ ಆಧ್ಯಾತ್ಮಿಕವಾಗುತ್ತದೆ.

ಇನ್ನು ಪರಮಾತ್ಮ ವಿಷಯಕ್ಕೆ ಬಂದರೆ ಜೀವಾತ್ಮಕ್ಕೂ ಆತ್ಮಕ್ಕೂ ಇರುವಂತೆ ಪರಮಾತ್ಮನಿಗೆ ಆಕಾರ ಇರುವುದಿಲ್ಲ. ಜೀವಾತ್ಮ ಆತ್ಮ ಎರಡು ಹೆಸರುಗಳು ಹೊಂದಿವೆ. ಪರಮಾತ್ಮನಿಗೆ ಹೆಸರಿಲ್ಲ, ಆಕಾರವಿಲ್ಲ. ಪರಮಾತ್ಮ ಎನ್ನುವುದು ಹೆಸರಲ್ಲ. ಆತ್ಮಗಿಂತ ಬೇರೆಯಾಗಿದೆ ಎಂಬ ಅರ್ಥದಿಂದ ಪರ+ಆತ್ಮ = ಪರಮಾತ್ಮ ಎನ್ನುತ್ತಿದ್ದೇವೆ. ಪರಮಾತ್ಮ (ದೇವರಿ)ಗೆ ಕೆಲಸ ಸಹ ಇಲ್ಲ. ಆದ್ದರಿಂದ ರೂಪ, ನಾಮ, ಕ್ರಿಯೆಗಳು ಇಲ್ಲದವನು ದೇವರೆಂದು ಹೇಳಬಹುದು. ಪ್ರಸ್ತುತಕ್ಕೆ ಪರಮಾತ್ಮ ಆಕಾರವನ್ನು ಕುರಿತು ಮಾತನಾಡಿದರೆ ಆತನು ಪ್ರಕೃತಿ ಎಲ್ಲವೂ ಅಣುವಣುವಿನಲ್ಲಿ ವ್ಯಾಪಿಸಿದ್ದಾನೆ. ಜೀವಾತ್ಮ ಶರೀರದಲ್ಲಿ ಒಂದುಕಡೆ ಇರುವಾಗ, ಆತ್ಮ ಶರೀರವೆಲ್ಲಾ ವ್ಯಾಪಿಸಿರುವಾಗ, ಪರಮಾತ್ಮ ಶರೀರದೊಳಗೆ, ಶರೀರದ ಹೊರಗೆ ವ್ಯಾಪಿಸಿದೆ. ವಿಶ್ವವೆಲ್ಲಾ ವ್ಯಾಪಿಸಿರುವ ಪರಮಾತ್ಮನಿಗೆ ಪ್ರತ್ಯೇಕವಾದ ರೂಪವಿಲ್ಲ, ಆದ್ದರಿಂದ ಪರಮಾತ್ಮನನ್ನು ವಿಶ್ವರೂಪನೆಂದಿದ್ದಾರೆ. ವಿಶ್ವರೂಪ ಎಂದರೆ ಒಂದು ರೂಪ ಅಲ್ಲದಿರುವುದೆಂದು ಅರ್ಥ. ಸೂರ್ಯ ನಕ್ಷತ್ರಗೋಳಗಳಲ್ಲಿ ಸಹ ವ್ಯಾಪಿಸಿದ ಪರಮಾತ್ಮನೇ ನಮ್ಮ ಶರೀರದಲ್ಲಿ ಸಹ ವ್ಯಾಪಿಸಿದ್ದಾನೆಂದು ತಿಳಿಯಬೇಕು. ಪರಮಾತ್ಮನಿಗೆ ಪರಿಧಿಯಿಲ್ಲ, ಆದ್ದರಿಂದ ಅದನ್ನು ಯಾವ ವಿಧವಾಗಿ ಹೇಳಲಾರೆವು.

1. ಜೀವಾತ್ಮ ಒಂದು ಶರೀರದಲ್ಲಿ ಇದೆ.
(ಶರೀರಾಂತರ್ಯಾಮಿ) **ಕ್ಷರನು.**

2. ಆತ್ಮ ಎಲ್ಲಾ ಶರೀರಗಳಲ್ಲಿ ವ್ಯಾಪಿಸಿ ಇದೆ.
(ಸರ್ವಶರೀರಾಂತರ್ಯಾಮಿ) **ಅಕ್ಷರನು.**

3. ಪರಮಾತ್ಮ ಎಲ್ಲಾ ಶರೀರಗಳ ಒಳಗು ಹೊರಗು ವ್ಯಾಪಿಸಿ ಇದೆ.
(ಸರ್ವಾಂತರ್ಯಾಮಿ) **ಪುರುಷೋತ್ತಮನು.**

# ದಾನ – ಧರ್ಮ

ದಾನ, ಧರ್ಮ ಎನ್ನುವವು ಎಲ್ಲರೂ ಕೇಳಿದ ಪದಗಳೆ. ದಾನ ಧರ್ಮ ಮಾಡಿರೆಂದು ಜೋಡಿ ಪದಗಳನ್ನು ಕೇಳುವುದು ಸಹ ಸಹಜವೆ. ಇಲ್ಲಿ ನಾವು ಮುಖ್ಯವಾಗಿ ತಿಳಿದುಕೊಳ್ಳಬೇಕಾಗಿರುವುದು ದಾನವೆಂದರೆ ಏನು? ದಾನ ಧರ್ಮವೆಂಬ ಜೋಡಿಪದ ಏಕಿದೆಯೆಂಬ ವಿಷಯ. ದಾನವೆಂಬ ಪದ ಹೊಸದಲ್ಲ, ಅದರಲ್ಲಿ ಯಾವ ದೊಡ್ಡ ರಹಸ್ಯವಿಲ್ಲ. ದಾನವೆಂದರೆ ತನ್ನ ಹತ್ತಿರ ಇರುವುದನ್ನು ಉಧಾರವಾಗಿ ಇತರರಿಗೆ ಕೊಡುವುದು. ಪ್ರತಿಫಲ ತೆಗೆದುಕೊಳ್ಳದೆ ಉಚಿತವಾಗಿ ಕೊಡುವುದು ದಾನವೆಂದು ನಮಗೆ ತಿಳಿದ ವಿಷಯವೆ. ಕೊಡುವುದು ಒಬ್ಬ ವ್ಯಕ್ತಿಗೆ ಧನಧಾನ್ಯವಾದರು ಆಗಬಹುದು ಅಥವಾ ಯಾವ ವಸ್ತುಗಳಾದರು ಆಗಬಹುದು. ಆದರೆ ಇಲ್ಲಿ ಮುಖ್ಯವಾಗಿ ಬಂದಿರುವ ಸಮಸ್ಯೆ ಏನೆಂದರೆ! **ದಾನಕೇಳುವವನು ಧರ್ಮ ಮಾಡಿರೆಂದು ಕೇಳುವುದು, ದಾನ ಕೊಟ್ಟವನು ಧರ್ಮ ಮಾಡಿದ್ದೇನೆನ್ನುವುದು.** ದಾನಕ್ಕೂ ಧರ್ಮಕ್ಕೂ ವ್ಯತ್ಯಾಸ ಇಲ್ಲವೆನ್ನುವಂತೆ ದಾನವೇ ಧರ್ಮವೆನ್ನುವಂತೆ ಇದರಿಂದ ತಿಳಿಯುತ್ತಿದೆ. ಆದರೆ ಶಾಸ್ತ್ರಬದ್ಧವಾಗಿ ಧರ್ಮ ಎಂದರೆ ದೈವಸಿದ್ಧಾಂತಗಳನ್ನು ತಿಳಿಸುವುದೆಂದು, ಭಗವದ್ಗೀತೆಯಲ್ಲಿ ತಿಳಿಸಿ ರುವವೆಲ್ಲ ಧರ್ಮಗಳೆಂದು ಇದೆ. ದಾನ ಎಂದರೆ ಅನುಭವರೀತ್ಯ ನಮಗೆ ತಿಳಿದಿರುವುದು, ಒಂದು ಪದಾರ್ಥವನ್ನು ಮತ್ತೊಬ್ಬರಿಗೆ ಕೊಡುವುದು.

ಅಂಥದರಲ್ಲಿ ದಾನ, ಧರ್ಮ ಬೇರೆ ಬೇರೆ ಅರ್ಥಗಳಲ್ಲಿ ಕೂಡಿಕೊಂಡಿದೆಯೆಂದು ಸುಲಭವಾಗಿ ತಿಳಿದುಹೋಗುತ್ತಿದೆ.

ಈದಿನ ದಾನವನ್ನು ದಾನವೆಂದು ಮಾತಾಡದೆ, ಧರ್ಮವೆಂದು ಮಾತಾಡುವುದು ಬಹಳ ಕಡೆ ಇರುವ ವಿಷಯ. ಉದಾಹರಣೆಗೆ ಹತ್ತುಜನ ಭಕ್ತರಿಗೆ ಅನುಕೂಲವಾಗಿ ಇರುವಂತೆ ಒಂದು ದೇವಾಲಯಕ್ಕೆ ಫ್ಯಾನನ್ನು ದಾನವಾಗಿ ಕೊಟ್ಟು ಅದರಮೇಲೆ ಇಂಥವರು ಕೊಟ್ಟಿದ್ದಾರೆಂಬ ಗುರುತಿಗೆ ಅವರ ಹೆಸರನ್ನು ಬರೆಯುವುದು ಇರುವ ವಿಷಯವೇ. ಅಲ್ಲಿ ವೆಂಕಯ್ಯ ಎನ್ನುವವರು ಕೊಟ್ಟಿದ್ದಾರೆಂದುಕೊಳ್ಳೋಣ. ವೆಂಕಯ್ಯ ದಾನವೆಂದು ಫ್ಯಾನ್ ಮೇಲೆ ಬರೆದಿಲ್ಲ. ವೆಂಕಯ್ಯ ಧರ್ಮವೆಂದು ಬರೆದಿರುತ್ತದೆ. ಹೀಗೆ ಅನೇಕ ದಾನಗಳು ಕಾಣಿಸಿದರೂ ಅವು ಕೊಟ್ಟವರ ಹೆಸರಿನ ಮೇಲೆ ಧರ್ಮವೆಂದು ಕಾಣಿಸುವುದು ಈಗಿನ ಕಾಲದಲ್ಲಿ ಸಹಜ. ದಾನ ಧರ್ಮ ಸೂತ್ರಪ್ರಾಯವಾಗಿ ಬೇರೆ ಬೇರೆಯಾದಾಗ, ದಾನ ಮಾಡಿ ಧರ್ಮ ಮಾಡಿದ್ದೇವೆಂದುಕೊಳ್ಳುವುದು ಒಂದು ತಪ್ಪೇ ಎಂದು ತಿಳಿಯುತ್ತಿದೆ. ಇದನ್ನು ಜ್ಞಾನರೀತ್ಯ ಶಾಸ್ತ್ರಬದ್ಧವಾಗಿ ತಿಳಿದುಕೊಳ್ಳುವುದು ಎಷ್ಟಾದರೂ ಅಗತ್ಯವೇ. ಇಲ್ಲಿ ಪಾಠಕರಿಗೆ ಒಂದು ಮನವಿ. ನಮ್ಮ ಬರಹಗಳು ಒಬ್ಬರನ್ನು ವಿಮರ್ಶಿಸಬೇಕೆಂಬ ಉದ್ದೇಶದಿಂದ ಬರೆಯುತ್ತಿದ್ದೇವೆಂದು ಮಾತ್ರ ಅಂದುಕೊಳ್ಳಬೇಡಿ. ತಿಳಿಯದ ಸತ್ಯವನ್ನು ತಿಳಿಸಬೇಕೆಂಬ ತಾಪತ್ರಯ ಹೊರತು ಮತ್ತೇನು ಇಲ್ಲವೆಂದು ಗ್ರಹಿಸುತ್ತೀರೆಂದು ಕೋರುತ್ತಿದ್ದೇವೆ. ಅನ್ವೇಷಣಾ ದೃಷ್ಟಿಯಿಂದ ಮುಂದಕ್ಕೆ ಓದಿರಿ.

ಹೀಗೆ ಅನೇಕ ವಿಧಗಳ ದಾನಧರ್ಮಗಳಿಗೆ ಭೇದಗಳಿವೆ. ಎಲ್ಲಾ ವಿಧಗಳ ದಾನಕ್ಕಿಂತ ಧರ್ಮವೇ ದೊಡ್ಡದಾಗಿ ಇದೆ. ಆದ್ದರಿಂದ ತಿಳಿದ ಹಿರಿಯರು ದಾನಕ್ಕಿಂತ ಧರ್ಮವೇ ಶ್ರೇಷ್ಠವಾದುದೆಂದು ತಿಳಿದು **"ಧರ್ಮಂ ಶರಣಂ ಗಚ್ಛಾಮಿ"** ಅಂದಿದ್ದಾರೆ ಆದರೆ ದಾನಂ ಶರಣಂ ಗಚ್ಛಾಮಿ ಅನ್ನಲಿಲ್ಲ. ಇಷ್ಟು ವ್ಯತ್ಯಾಸಗಳಿರುವುದರಿಂದ ದಾನವನ್ನು ಧರ್ಮವಾಗಿ ಹೋಲಿಸಿಕೊಳ್ಳಬಾರದು. ಕೊಟ್ಟಿರುವ ದಾನದ ಮೇಲೆ ಇಂಥವರ ಧರ್ಮವೆಂದು ಬರೆಯಬಾರದು.

ಇತರರಿಗೆ ಕೊಡುವ ದಾನವನ್ನು ಸಹಿತ ಈ ದಾನಕ್ಕೆ ಇವನು ಸರಿಯಾ! ಸರಿಯಲ್ಲವಾ!! ಎಂದು ಯೋಚಿಸಿ ಪಾತ್ರಾಪಾತ್ರ ದಾನ ಮಾಡೆಂದಿದ್ದಾರೆ ಹಿರಿಯರು. ದಾನ ಮೂರು ವಿಧಗಳಾಗಿ ವಿಭಜಿಸಿ ತಾಮಸ, ರಾಜಸ, ಸಾತ್ತ್ವಿಕ ದಾನಗಳೆಂದು ಸಹ ಗೀತೆಯಲ್ಲಿ ಹೇಳಿದ್ದಾರೆ. ದಾನ ಯಾವ ವಿಧವಾಗಿ ಮಾಡಿದರೂ ಪಾಪವೊ ಅಥವಾ ಪುಣ್ಯವೊ ಸಂಭವಿಸಿ ಜನ್ಮಗಳೇ ಉಂಟುಮಾಡುತ್ತದೆ. ದಾನ ಒಂದು ಗುಣವಾದ್ದರಿಂದ, ಅದಕ್ಕೆ ನಡೆಯುವ ಕೆಲಸದಿಂದ ಅಗ್ನಿಗೆ ಹೊಗೆ ಸಹಜವೆನ್ನುವಂತೆ, ಕಾರ್ಯಕ್ಕೆ ಕರ್ಮ ಸಹಜವಾಗಿ ಬರುತ್ತಿರುತ್ತದೆ. ತೆಗೆದುಕೊಳ್ಳುವವನು ಸರಿಹೋಗುತ್ತಾನಾ ಇಲ್ಲವಾ ಎಂದು ತಿಳಿಯಬೇಕೆಂದರೆ, ಅವನಹಿಂದೆ ನಾವು ತಿರುಗಬೇಕಾಗಿ ಬರುತ್ತದೆ. ಅದು ನಡೆಯದ ಕೆಲಸ ಆದ್ದರಿಂದ ಮತ್ತೊಬ್ಬನ ವಿಷಯ ತಿಳಿಯದಿರುವಾಗ, ಅವನಿಗೆ ದಾನ ಮಾಡಬೇಕಾಗಿ ಬಂದಾಗ, ಅದರಿಂದ ಕರ್ಮ ಅಂಟದಂತಿರುವುದಕ್ಕೆ ಧರ್ಮಬದ್ಧವಾಗಿ ಮಾಡಿರೆಂದಿದ್ದಾರೆ. ಹಾಗೆ ಮಾಡುವುದರಿಂದ ಕರ್ಮ ಅಂಟುವುದಿಲ್ಲ. ಧರ್ಮಬದ್ಧವೆಂದರೆ ಎಂತಹದೆಂಬ ಅನುಮಾನ ನಮಗೆ ಉಂಟಾಗಬಹುದು. ದಾನಗುಣದಿಂದ ನಡೆಯುವ ಕಾರ್ಯ ಕರ್ಮ ಕಾರಣದಿಂದಲೇ ನಡೆಯುತ್ತಿದೆ ಎಂದು ಜಿವಾತ್ಮನಾದ ತಾನು ಇದಕ್ಕೆ ಕಾರಣ ಅಲ್ಲವೆಂದು ಸತ್ಯ ತಿಳಿದು, ಅಹಂಕಾರ ಇಲ್ಲದಂತೆ ಕೊಡುವುದೇ ಧರ್ಮಬದ್ಧವಾದ ಕೆಲಸ. ಈ ಧರ್ಮದ ಪ್ರಕಾರ ಯಾವ ದಾನ ಮಾಡಿದರೂ, ಯಾವ ಕಾರ್ಯ ನಡೆದರೂ ಅದರಲ್ಲಿನ ಕರ್ಮ ಅಂಟುವುದಿಲ್ಲವೆಂದು ಗೀತೆಯಲ್ಲಿ ಕರ್ಮಯೋಗ ಸಿದ್ಧಾಂತ ತಿಳಿಸುತ್ತಿವೆ.

ದಾನ ಮಾಡುವವರೆಲ್ಲರೂ ಕರ್ಮಯೋಗ ಸಿದ್ಧಾಂತಗಳನ್ನು ತಿಳಿದ ಜ್ಞಾನಿಗಳು ಆಗಬೇಕೆಂದರೆ ಅದು ಕಷ್ಟವೇ. ಧಾತರೆಲ್ಲರು ಕರ್ಮಯೋಗ ಸಿದ್ಧಾಂತಗಳನ್ನು ಆಚರಿಸಲಾರರು. ಅಂತಹದರಲ್ಲಿ ದಾನ ಮಾಡುವುದು ಬಿಡಬೇಕಾ? ಅನ್ನುವ ಸಂಶಯ ಏರ್ಪಡುತ್ತದೆ. ಹಾಗೆ ಬಿಡಬೇಕಾದ ಕೆಲಸವೇನು ಇಲ್ಲ. ಅದಕ್ಕೆ ಒಂದು ಉಪಾಯ ತಿಳಿಸುತ್ತಾ ನಮ್ಮ ಹಿರಿಯರು ದಾನ ಧರ್ಮ

ಅನ್ನುವ ಜೋಡಿಪದಗಳನ್ನು ಉಪಯೋಗಿಸಿದ್ದಾರೆ. ಇದರಲ್ಲಿ ಅರ್ಥವೇನೆಂದರೆ ನೀನು ದಾನ ಮಾಡಿದರೆ ಧರ್ಮಬದ್ಧವಾಗಿ ಮಾಡು. ಇಲ್ಲದಿದ್ದರೆ ಧರ್ಮಕ್ಕೋಸ್ಕರ ಮಾಡು ಎಂದು ತಿಳಿಸುತ್ತಾ ದಾನಧರ್ಮಗಳು ಅಂದಿದ್ದಾರೆ. ಧರ್ಮಬದ್ಧವಾಗಿ ಅಂದರೆ ದೇವರು ತಿಳಿಸಿದ ಕರ್ಮಯೋಗ ಸಿದ್ಧಾಂತ ತಿಳಿದ ಜ್ಞಾನಿಗಳಾಗಿರಬೇಕು. ಹಾಗೆ ಅಲ್ಲದಿರುವಾಗ ಧರ್ಮಕ್ಕೋಸ್ಕರ ಅಂದಿದ್ದಾರೆ. ಧರ್ಮಕ್ಕೋಸ್ಕರ ಅಂದರೆ ಹೇಗೆ ಎಂದು ಸಹ ಅನುಮಾನ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ! ಪ್ರಪಂಚ ಸಂಬಂಧ ಅಲ್ಲದೆ, ದೇವರು ತಿಳಿಸಿದ ವಿಧಾನಗಳಿಗೆ ಉಪಯೋಗಿಸುವುದಕ್ಕೆ ಕೊಡಲ್ಪಟ್ಟಿರುವುದನ್ನು ಧರ್ಮಕ್ಕೋಸ್ಕರವೆಂದು ಅರ್ಥ. ದೇವರು ತಿಳಿಸಿದ ಜ್ಞಾನಕ್ಕೋಸ್ಕರ, ಆ ಜ್ಞಾನ ಎಲ್ಲರಿಗೂ ತಿಳಿಸುವುದಕ್ಕೋಸ್ಕರ, ಜ್ಞಾನ ನಶಿಸಿ ಹೋಗದಂತೆ ಇರುವುದಕ್ಕೋಸ್ಕರ, ತಕ್ಕ ವಿಧಾನದಲ್ಲಿ ಮಾಡುವ ದಾನವನ್ನು ದೇವರ ಧರ್ಮಕ್ಕೋಸ್ಕರ ಮಾಡಿರುವುದೆಂದು ತಿಳಿಯುತ್ತಿದೆ.

| ದಾನ | ಧರ್ಮ |
|---|---|
| 1. ಒಬ್ಬರಿಗೆ ಕೊಟ್ಟಿರುವುದು. ಕೊಟ್ಟಿರುವುದು ಏನಾದರು ತೆಗೆದುಕೊಂಡವನ ಹತ್ತಿರ ಸ್ವಲ್ಪಕಾಲಕ್ಕೆ ಇಲ್ಲದಂತೆ ಹೋಗಬಹುದು. | 1. ಒಬ್ಬರಿಗೆ ತಿಳಿಸುವುದು. ತಿಳಿಸಿದ ವಿಷಯ ಶಾಶ್ವತವಾಗಿ ನಿಂತುಹೋಗುತ್ತದೆ. |
| 2. ಧನ, ಕನಕ, ವಸ್ತು ವಾಹನ ರೂಪದಿಂದ ಇರಬಹುದು. | 2. ಆತ್ಮ ಸಂಬಂಧ ವಿಷಯ ಮಾತ್ರವಾಗಿಯೇ ಇರುತ್ತದೆ. |
| 3. ಮಾಡುವವರು ಪ್ರಪಂಚ ಧನಿಕರಾಗಿರುತ್ತಾರೆ. | 3. ತಿಳಿಸುವವರು ಜ್ಞಾನಿಧನಿಕರಾಗಿ ಇರುತ್ತಾರೆ. |
| 4. ಮಾಡುವುದರಿಂದ ಹೊಸ ಕರ್ಮ ಸಂಭವಿಸುತ್ತದೆ. | 4. ಆಚರಿಸುವುದರಿಂದ ಇರುವ ಕರ್ಮ ನಾಶವಾಗಿ ಹೋಗುತ್ತದೆ. |

| | |
|---|---|
| 5. ಮಾಡುವುದರಿಂದ ಪ್ರಪಂಚದಲ್ಲಿ ಕೀರ್ತಿ ಪ್ರತಿಷ್ಠೆಗಳು ಏರ್ಪಡುತ್ತವೆ. | 5. ಆಚರಿಸುವುದರಿಂದ ಪ್ರಪಂಚಕ್ಕೆ ಅತೀತವಾದ ಮೋಕ್ಷವೇರ್ಪಡುತ್ತದೆ. |
| 6. ಮಾಡಿದ ದಾನದಿಂದ ತೆಗೆದುಕೊಂಡವನಿಗೆ ಕಷ್ಟನಷ್ಟಗಳು ಬರಬಹುದು ಇಲ್ಲವೆ ಸುಖ ಸೌಖ್ಯಗಳು ಉಂಟಾಗಬಹುದು. | 6. ತಿಳಿದುಕೊಂಡವನಿಗೆ ಸುಖ ದುಃಖಗಳಿಂದ ಹೊರಬೀಳುವ ವಿಧಾನ ಗೊತ್ತಾಗುತ್ತದೆ. |
| 7. ಆಸೆ ಎನ್ನುವ ಗುಣಕ್ಕೆ ವಿರುದ್ಧವಾದುದು. | 7. ಗುಣವಲ್ಲ, ದೇವರನ್ನು ತಿಳಿಸುವ ಶಾಸನ. |

ಈ ವಿಷಯವಾಗಿ ಭಗವದ್ಗೀತೆಯಲ್ಲಿ ಭಕ್ತಿಯೋಗವೆಂಬ ಅಧ್ಯಾಯದಲ್ಲಿ 10 ಶ್ಲೋಕದಲ್ಲಿ ನೀನು ಯಾವ ಸಾಧನೆ ಮಾಡಲಾರದೆ ಹೋದರೂ, ಯೋಗಿಯು ಜ್ಞಾನಿಯು ಆಗದೆಹೋದರೂ, ಪರಮಾತ್ಮ ಸನ್ನಿಧಾನ ಸೇರುವಮಾರ್ಗ ತಿಳಿಸುತ್ತಾ ನನ್ನ ಜ್ಞಾನದಲ್ಲಿ ಸಾಧನೆಯಲ್ಲಿ ನೀನು ಅಸಮರ್ಥನು ಆದರೂ ನನಗೋಸ್ಕರ ನೀನು ಕೆಲಸಮಾಡು. ನನಗೋಸ್ಕರ ಕರ್ಮಗಳನ್ನು ಆಚರಿಸುವುದರಿಂದ ನಿನಗೆ ಮೋಕ್ಷ ತಪ್ಪದೆ ಉಂಟಾಗುತ್ತದೆ. 'ಅಭ್ಯಾಸೇಪ್ಯ ಅಸಮ ರ್ಥೋಸಿ ಮತ್ಕರ್ಮ ಪರಮೋಭವ। ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ' ಎಂದು ಹೇಳಿದ್ದಾನೆ. ಇಲ್ಲಿ ದೇವರ ಕೆಲಸ ಏನು ಎಂದು ತಿಳಿದರೆ ತಾನೆ! ನಾವು ಆತನ ಕೆಲಸವನ್ನು ಮಾಡುತ್ತೇವೆಂದು ಯೋಚನೆ ಸಹ ಬರಬಹುದು, ಅದಕ್ಕೆ ನಮ್ಮ ಉತ್ತರ ಏನೆಂದರೆ! ದೇವರ ಧರ್ಮಗಳು ನಶಿಸದಂತೆ ದೇವರ ಧರ್ಮಗಳು ಎಲ್ಲರಿಗೂ ತಿಳಿಯುವಂತೆ ನಾವು ಮಾಡುವುದೇ ಆತನ ಕೆಲಸವನ್ನು ನಾವು ಮಾಡಿದಂತೆ. ಯಾವ ಅವಕಾಶ ಇಲ್ಲದವನು ಈ ವಿಧವಾಗಿಯಾದರೂ ನನ್ನಹತ್ತಿರಕ್ಕೆ ಸೇರಬಹುದೆಂದಾಗ, ಜ್ಞಾನ ತಿಳಿಯದವನು ಯೋಗಿ ಅಲ್ಲದವನು

ಸಹಿತ ದಾನ ಮಾಡುವಾಗ, ಆ ದಾನ ದೇವರ ಕೆಲಸವಾದ ಧರ್ಮ ಪ್ರಚಾರಕ್ಕೇ ವಿನಿಯೋಗಿಸಲ್ಪಡುವಂತೆ ಮಾಡುವುದು ದೈವಸಾನ್ನಿಧ್ಯಕ್ಕೆ ಮಾರ್ಗವಾಗುತ್ತದೆ. ಆದ್ದರಿಂದಲೇ ಹಿರಿಯರು ನೀನು ಮಾಡುವ ದಾನ ಧರ್ಮಕ್ಕೋಸ್ಕರ ಇರಬೇಕೆಂದು ಆ ಮಾತು ಮರೆತು ಹೋಗದಂತೆ ದಾನಧರ್ಮ ಮಾಡಿರೆಂದು ಹೇಳಿದ್ದಾರೆ.

ಈ ದಿನ ದಾನ ಎಂದರೆ ಏನೊ? ಧರ್ಮ ಎಂದರೆ ಏನೊ? ತಿಳಿಯದವರು ದಾನವನ್ನು ಧರ್ಮವಾಗಿ, ಧರ್ಮವನ್ನು ದಾನವಾಗಿ ಅರ್ಥಮಾಡಿಕೊಂಡಿದ್ದಾರೆ. ಈ ಸಮಸ್ಯೆ ಬಗೆಹರಿಯಬೇಕೆಂದರೆ ದಾನಧರ್ಮ ಜೋಡಿಪದಗಳಿಗೆ ಅರ್ಥ ತಿಳಿಯಬೇಕು. ಧರ್ಮ ಎಂದರೆ ನ್ಯಾಯವೆಂದು ಸಹ ಅಂದುಕೊಳ್ಳುವುದು ಇದೆ. ಆದರೆ ಧರ್ಮ ಬೇರೆ, ನ್ಯಾಯ ಬೇರೆ, ದಾನ ಬೇರೆ ಎಂದು ತಿಳಿದಾಗಲೇ ಎಲ್ಲಾ ಕಾರ್ಯಗಳ ವಿವರ ತಿಳಿದು ಜ್ಞಾನಿಗಳಾಗುತ್ತೇವೆ. ಈಗಿನಿಂದಾದರೂ ನೀವು ದಾನ ಮಾಡುವ ಪ್ರತಿ ಪೈಸಾ ಧರ್ಮಕ್ಕೆ ವಿನಿಯೋಗಿಸಲ್ಪಡುವಂತೆ ನೋಡಿರಿ. ನಿಮ್ಮ ದಾನ ಪ್ರಪಂಚಕ್ಕೆ ಉಪಯೋಗ ಪಡಬಾರದು. ಪರಮಾತ್ಮ ಸೇವೆಗೆ ಉಪಯೋಗಪಡಬೇಕು. ಆದ್ದರಿಂದಲೇ ಕುರುಡರಂತೆ ಕೊಡುವ ದಾನಗಳನ್ನು ಬಿಟ್ಟು, ದಾನಕ್ಕೆ ಧರ್ಮವೆಂಬ ಪದವನ್ನು ಜೋಡಿಸುವಂತೆ ಪ್ರತಿಯೊಂದು ಧರ್ಮಕ್ಕೋಸ್ಕರವೇ ವಿನಿಯೋಗಿಸಿರಿ, ಆಗಲೇ ಯಾವ ಕರ್ಮ ಬರುವುದಿಲ್ಲ. ದಾನಧರ್ಮ ಹೊಂದಿದ ಜೀವನ ಧನ್ಯ.

| | | |
|---|---|---|
| **1)** | **ಒಬ್ಬರಿಗೆ ಕೊಡುವುದು ದಾನ** | ಎರಡು ಮಿಳಿತವಾದಾಗಲೇ |
| **2)** | **ಒಬ್ಬರಿಗೆ ತಿಳಿಸುವುದು ಧರ್ಮ** | ದಾನ ಧರ್ಮವಾಗುತ್ತದೆ. |

# ಧರ್ಮವನ್ನು ರಕ್ಷಿಸಿರಿ ಧರ್ಮವೇ ನಿಮ್ಮನ್ನು ರಕ್ಷಿಸುತ್ತದೆ

ಧರ್ಮವನ್ನು ರಕ್ಷಿಸಿದರೆ ಧರ್ಮವೇ ನಿಮ್ಮನ್ನು ರಕ್ಷಿಸುತ್ತದೆಂದು ಹಿರಿಯರು ಹೇಳುತ್ತಿದ್ದಾರೆ. ಧರ್ಮ ಎಂದರೆ ಏನೆಂದು ತಿಳಿದಾಗಲ್ಲವೆ! ನಾವು ಅದನ್ನು ರಕ್ಷಿಸುವುದೆಂದು ಕೆಲವರು ಕೇಳುತ್ತಿದ್ದಾರೆ. ಧರ್ಮವೆಂಬುವುದು ಇಂತಹದೆಂದು ಸೂಚಿಸುವುದರಲ್ಲಿ ಬಹಳ ಗ್ರಂಥಗಳು ಇವೆ. ಆ ಗ್ರಂಥಗಳಿಂದ ತಿಳಿದುಕೊಂಡಿರುವವು ಧರ್ಮಗಳಾ ಅಲ್ಲವಾ! ಎನ್ನುವ ಪ್ರಶ್ನೆಯೂ ಸಹ ಮಾನವನಲ್ಲಿ ಉದ್ಭವಿಸಿದೆ. ಈ ವಿಧವಾಗಿ ಈ ದಿನ ಮಾನವರಲ್ಲಿ ಧರ್ಮ ಎಂದರೆ ಏನೋ ತಿಳಿಯದ ಸ್ಥಿತಿ ಏರ್ಪಟ್ಟಿದೆ. ಇದನ್ನೇ ಭಗವದ್ಗೀತೆಯಲ್ಲಿ **'ಧರ್ಮಗ್ಲಾನಿ'** ಎಂದು ಭಗವಂತನು ಹೇಳಿದ್ದಾನೆ.

ಮಾನವನಿಗೆ ಧರ್ಮಗಳು ತಿಳಿಯದಿರುವಾಗ ಧರ್ಮಗ್ಲಾನಿ ಏರ್ಪಡುತ್ತದೆಂದು, ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು ತಿಷ್ಠೆ ಹಾಕುತ್ತವೆಂದು, ತಿಳಿದ ನಮ್ಮ ಹಿರಿಯರು ಧರ್ಮಗಳು ಮಾನವರಲ್ಲಿ ಮಾಸಿಹೋಗದಂತೆ ಇರಬೇಕೆಂದು ಯೋಚಿಸಿ, ಧರ್ಮಗಳನ್ನು ನಮ್ಮ ಆಚಾರ ವಿಚಾರಗಳಲ್ಲಿ ಸಹ ಇರುವಂತೆ ಇಟ್ಟಿದ್ದಾರೆ. ಹಿರಿಯರು ಮಾಡಿದ ಈ ಅಮೋಘವಾದ ಯೋಚನೆ ಬಹಳ ಪ್ರಶಂಸನೀಯವಾದುದು. ಇಂದೂಧರ್ಮ ಸತ್ ಸಾಂಪ್ರದಾಯ ಹಿಂದುಗಳಲ್ಲಿ ಇಂದಿಗೂ ನಿಂತಿದೆ. ಕಾಲಕ್ರಮೇಣ ಮಾನವರಲ್ಲಿ ಅಜ್ಞಾನ ಬೆಳೆದು ಇಂದಿನ ನಮ್ಮ ಸತ್ ಸಾಂಪ್ರದಾಯದಲ್ಲಿನ ಸಾರಾಂಶವಾದ ಧರ್ಮಗಳ ಬೆಲೆ ತಿಳಿಯದೆ ಹೋಗಿದೆ. ಅಂತಹ ಪರಿಸ್ಥಿತಿಯಲ್ಲಿ ಹಿಂದೂಜಾತಿಯಲ್ಲಿನವರು ತಮ್ಮ ಸಂಪ್ರದಾಯವನ್ನೆ ತಾವು ಆಚರಿಸದೆ ಹೋಗುತ್ತಿದ್ದಾರೆ. ಅಸಲು ಧರ್ಮ ಎಂದರೆ ಏನೋ ತಿಳಿಯದಂತಿದ್ದಾರೆ.

ಕೆಲವು ಗ್ರಾಮಗಳಿಗೆ ಹೋಗಿ ನೋಡಿದರೆ ಧರ್ಮ ಎಂದರೆ ಏನೋ, ಅಧರ್ಮ ಎಂದರೆ ಏನೋ ತಿಳಿಯದವರು, ಜ್ಞಾನ ಎಂದರೆ ಎಂತಹದ್ದೋ, ಅಜ್ಞಾನವೆಂದರೆ ಏನೊ ತಿಳಿಯದವರಿದ್ದಾರೆ. ಇನ್ನೂ ಹೇಳಬೇಕೆಂದರೆ ನಾನು

ಹಿಂದೂ ಮತಸ್ಥನೆಂದು ಸಹ ತಿಳಿಯದವರಿದ್ದಾರೆ. ಮತದ ಹೆಸರು ಕೇಳಿದರೆ ಕುಲದ ಹೆಸರು ಹೇಳುವವರಿದ್ದಾರೆ. ಇದರಿಂದ ನೋಡಿದರೆ ಮತಧರ್ಮಗಳು ತಿಳಿಯದೆ ಹೋಗುವುದರಿಂದ ಈ ದಿನ ಅಧರ್ಮಗಳು ಹೆಚ್ಚಾಗಿವೆ ಎಂಬುವು ದರಲ್ಲಿ ಅನುಮಾನವಿಲ್ಲ.

ಇಂತಹ ಸಂದರ್ಭಗಳಲ್ಲಿ ಗುರುಗಳು, ಪೀಠಾಧಿಪತಿಗಳು, ಧರ್ಮಗಳು ತಿಳಿದವರು ಧರ್ಮಗಳನ್ನು ಕುರಿತು ಬೋಧಿಸಬೇಕಾಗಿದೆ. ಅಂತಹ ಬೋಧನೆಯಲ್ಲಿ **'ಧರ್ಮವನ್ನು ರಕ್ಷಿಸಿರಿ ಧರ್ಮವೇ ನಿನ್ನನ್ನು ರಕ್ಷಿಸುತ್ತದೆ'** ಎಂದು ಕೇಳಿದವರು ತನ್ನನ್ನು ತಾನು ರಕ್ಷಿಸಿಕೊಳ್ಳಲಾರದ ಧರ್ಮ ನಮ್ಮನ್ನು ಹೇಗೆ ರಕ್ಷಿಸುತ್ತದೆಂದು ಹಿಂದುಗಳೇ ಅನ್ನುವುದು ನಡೆಯುತ್ತಿದೆ. ಇತರ ಮತಸ್ಥರು ಸಹ ಮಾನವನಿಂದ ರಕ್ಷಿಸಲ್ಪಡುವ ಧರ್ಮವು ಮಾನವನನ್ನು ರಕ್ಷಿಸುತ್ತದಾ? ಎಂದು ವಿಮರ್ಶಿಸುವುದು ನಡೆಯುತ್ತಿದೆ. ಈ ವಿಧವಾಗಿ ಧರ್ಮ ತಿಳಿಯದವರು ಕೆಲವರಾದರೆ, ಯಾವುದು ಧರ್ಮವೋ ತಿಳಿಯದವರು ಕೆಲವರಿದ್ದಾರೆ.

ಹಿಂದೂಧರ್ಮ ಪ್ರಚಾರಕ್ಕೋಸ್ಕರವೇ ನಾವಿದ್ದೇವೆಂದು ತಿಳಿಸುವವರು ಭಜನೆಗಳು ಮಾಡುವುದು, ಹರಿಕಥೆಗಳು ಹೇಳಿಸುವುದು, ಪುರಾಣಗಳು ಬೋಧಿಸುವುದು, ದಾನಗಳು ಮಾಡುವುದು, ವ್ರತಗಳು ಆಚರಿಸುವುದು ಧರ್ಮಗಳೆಂದು ಪ್ರಕಟಿಸುತ್ತಿದ್ದಾರೆ. ಇವು ಧರ್ಮಗಳೆಂದು ನಂಬಿದವರು ಕೆಲವರಾದರೆ ನಂಬದವರು ಕೆಲವರಿದ್ದಾರೆ. ಇವುಗಳೆಲ್ಲವನ್ನನುಸರಿಸಿ ನೋಡಿದರೆ ಧರ್ಮಗಳು ಯಾವುವೆಂದು ಎಲ್ಲರಿಗೂ ಅನುಮಾನ ಬಾರದೆ ಇರುವುದಿಲ್ಲ.

ಅನುಮಾನ ಬರುವುದಕ್ಕೆ ಬಲವಾದ ಕಾರಣವಿದೆ. ಅದು ಏನೆಂದರೆ! ಹಿಂದೂ ಮತಗ್ರಂಥವೆಂದು ಹೇಳಿಕೊಳ್ಳುವ ಗೀತೆಯಲ್ಲಿ ಹೇಳಲ್ಪಟ್ಟಿರುವವೆಲ್ಲ ಧರ್ಮಗಳೇ. ಧರ್ಮಸಂಸ್ಥಾಪನೆಗೇ ನಾನು ಬಂದಿದ್ದೇನೆಂದು ಭಗವಂತನು ಪ್ರಕಟಿಸಿದ್ದಾನೆ. ಅದರಲ್ಲಿ ತಿಳಿಸಿದ ಧರ್ಮಗಳನ್ನು ಅನುಸರಿಸಿ ನೋಡಿದರೆ ಭಜನೆಗಳು, ಹರಿಕಥೆಗಳು. ಪುರಾಣಗಳು, ವ್ರತಗಳು ಧರ್ಮಗಳಲ್ಲವೆಂದು

ತಿಳಿಯುತ್ತಿದೆ. ಆದ್ದರಿಂದ ಧರ್ಮಯುತವಾದ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿನ ಮಾತು ನಂಬಬೇಕಾ? ಅಥವಾ ಈಗ ಕೆಲವರು ಪ್ರಚಾರ ಮಾಡುವಮಾತುಗಳು ನಂಬಬೇಕಾ? ಎನ್ನುವ ಸಂದಿಗ್ಧಾವಸ್ಥೆಯಲ್ಲಿ ಮಾನವನಿದ್ದಾನೆ. ಗೀತೆಯ ಧರ್ಮ ಗಳನ್ನು ನಂಬಿದರೆ ಹಿರಿಯರ ಮಾತುಗಳು ಬಿಡಬೇಕಾಗಿದೆ ಅಥವಾ ಹಿರಿಯರ ಮಾತು ನಂಬಿದರೆ ಗೀತೆಯಮಾತನ್ನು ಬಿಡಬೇಕಾಗಿದೆ. ಯಾವುದು ಸತ್ಯವೋ ಯಾವುದು ಅಸತ್ಯವೋ ನಿರ್ಣಯಿಸಲಾರದ ಸ್ಥಿತಿಯಲ್ಲಿ ಮಾನವನಿದ್ದಾನೆ.

ಧರ್ಮಗಳಿಗೆ ಆಪತ್ತು ಉಂಟಾದಾಗ, ಅವು ತಿಳಿಯದೆಹೋದಾಗ ನಾನು ಬಂದು ಅವುಗಳನ್ನು ತಿಳಿಸಿ ಅವುಗಳನ್ನು ರಕ್ಷಿಸುತ್ತೇನೆಂದು ದೇವರು ಗೀತೆಯಲ್ಲಿ ಹೇಳಿದ್ದಾನೆ. ಇದರಿಂದ ಧರ್ಮಗಳೆನ್ನುವವು ಯಾವೋ ದೇವ ರೊಬ್ಬನಿಗೆ ತಿಳಿದಿದೆ. ಆತನೇ ಅವುಗಳನ್ನು ರಕ್ಷಿಸುತ್ತಾನೆಂದು ಪೂರ್ತಿಯಾಗಿ ತಿಳಿಯುತ್ತಿದೆ. ಅಂತಹದರಲ್ಲಿ ಮಾನವನು ಧರ್ಮಗಳನ್ನು ರಕ್ಷಿಸುತ್ತಾನೆನ್ನುವುದು ಹಾಸ್ಯಾಸ್ಪದ. ಮಾನವನು ಧರ್ಮಗಳನ್ನು ಆಚರಿಸಬೇಕೆಂದು ದೇವರು ಹೇಳಿದ್ದಾನೆ. ಮಾನವನಿಗೆ ಧರ್ಮಗಳು ಯಾವುವೊ ತಿಳಿಯದೆ ಅವುಗಳನ್ನು ಆಚರಿಸದ ಸಮಯದಲ್ಲಿ ದೇವರೇ ಹುಟ್ಟಿಬಂದು ಧರ್ಮಗಳು ತಿಳಿಸಿಹೋಗುತ್ತೇನೆಂದು ತಿಳಿಸಿದ್ದಾನೆ. ದೇವರು ತಿಳಿಸಿದ ಧರ್ಮಗಳನ್ನು ಆಚರಿಸಿದರೆ ಧರ್ಮಗಳಿಂದ ಕರ್ಮದಿಂದ ಜೀವಿಯು ರಕ್ಷಿಸಲ್ಪಟ್ಟು ಮುಕ್ತನಾಗಿ ದೇವರನ್ನು ಸೇರುತ್ತಾನೆ.

ಧರ್ಮಗಳನ್ನು ಮಾನವನು ರಕ್ಷಿಸಲಾರನು. ಮಾನವನು ಧರ್ಮಗಳನ್ನು ಆಚರಿಸುವುದೇ ಕರ್ತವ್ಯ. ಧರ್ಮಗಳನ್ನು ನೀನು ಆಚರಿಸುವುದರಿಂದ ಧರ್ಮಗಳು ನಿನ್ನನ್ನು ಕರ್ಮದಿಂದ ರಕ್ಷಿಸುತ್ತವೆಂಬುವುದು ಸತ್ಯವಾದ ಮಾತು.

ಧರ್ಮಗಳನ್ನು ನೀನು ಹೇಗೆ ರಕ್ಷಿಸುತ್ತೀಯಾ? ಧರ್ಮಗಳು ನಿನ್ನನ್ನು ಯಾವುದರಿಂದ ರಕ್ಷಣೆ ಮಾಡುತ್ತವೆಂದು ಕೇಳಿದರೂ ಉತ್ತರ ಹೇಳಲಾರದೆ 'ಧರ್ಮೋರ್ರಕ್ಷತಿ ರಕ್ಷಿತಃ' ಎನ್ನುವ ಮಾತು ಹೇಳುವುದು ಧರ್ಮವಿರುದ್ಧ. ಗೀತೆಯಲ್ಲಿನ ದೇವರ ಮಾತನ್ನು ಹೀಯಾಳಿಸುವುದೆ ಆಗಲಿ ಬೇರೆಯಲ್ಲ.

ಅಧರ್ಮಗಳನ್ನು ಪ್ರೋತ್ಸಹಿಸುವುದೇ ಆಗುತ್ತದೆ. ಯಾವ ಮಾತನ್ನು ಹೇಳಿದರು ಹೇತುಬದ್ಧವಾಗಿ ಹೇಳಿದಾಗ ಹೇತುವಾದಿಗಳ ಬಾಯಿ ಮುಚ್ಚಿಸಬಹುದು. ನಾಸ್ತಿಕರನ್ನು ನಾಸ್ತಿ ಮಾಡಬಹುದು. ಹಾಗಲ್ಲದೆ ಹೇತುವಿಲ್ಲದ ಶಾಸ್ತ್ರವಿರುದ್ಧವಾದ ಮಾತಿನಿಂದ ಹೇತುವಾದಿಗಳ ಹಾಗೂ ನಾಸ್ತಿಕವಾದಿಗಳ ಪ್ರಾಬಲ್ಯ ಹೆಚ್ಚಾಗುವುದಿಲ್ಲವಾ! ಧರ್ಮಗ್ಲಾನಿ ಏರ್ಪಡುವುದಿಲ್ಲವಾ! ಧರ್ಮ ತಿಳಿಯದವರು ಕೆಲವರು ನಮ್ಮನ್ನು ವಿಮರ್ಶಿಸಬಹುದು. ಸಹೇತುಕವಾಗಿ ಮಾತನಾಡಿದ ಯಾವ ಮಾತಿಗಾದರು ನಾವು ಉತ್ತರ ಹೇಳುತ್ತೇವೆ. ಕ್ರಮವೆಂಬುದು ಇಲ್ಲದೆ ಇಷ್ಟಬಂದಂತೆ ಮಾತ ನಾಡುವವರಿಗೆ ನಾವು ಯಾವ ಉತ್ತರ ಹೇಳಲಾರೆವು, ಹೇಳುವುದಿಲ್ಲ. ಇಲ್ಲಿಯವರೆಗೂ ಹೇಳಿದ ನಂತರ ಧರ್ಮಎಂದರೆ ಏನೋ ಹೇಳದೆಹೋದರೆ ಚೆನ್ನಾಗಿರುವುದಿಲ್ಲ, ಆದ್ದರಿಂದ ಧರ್ಮವನ್ನು ಕುರಿತು ಹೇಳುವುದೇನೆಂದರೆ! ದೇವರ ಸನ್ನಿಧಿಗೆ ಜೀವಿಯನ್ನು ಸೇರಿಸುವುದಕ್ಕೆ ಇರುವ ಶಾಸನಗಳೇ ಧರ್ಮಗಳು. ಅವು ಯಾವೋ ಭಗವದ್ಗೀತೆಯಲ್ಲಿ ದೇವರೆ ತಿಳಿಸಿದ್ದಾನೆ.

ಮಾನವನಿಂದ ಧರ್ಮ ರಕ್ಷಿಸಲ್ಪಡುವಂತಾದರೆ ಪರಮಾತ್ಮ ಭಗವಂತ ನಾಗಿ ಹುಟ್ಟಬೇಕಾಗಿಲ್ಲ. ಧರ್ಮರಕ್ಷಣೆಗೋಸ್ಕರ ದೇವರೇ ಅವತರಿ ಸುತ್ತಿದ್ದಾನೆ. ಆದ್ದರಿಂದ ನೀನು ಧರ್ಮವನ್ನು ರಕ್ಷಿಸುವುದಿಲ್ಲ. ಆದ್ದರಿಂದ

**'ನೀನು ಧರ್ಮವನ್ನು ಆಚರಿಸು, ಅದು ನಿನ್ನನ್ನು ರಕ್ಷಿಸುತ್ತದೆ'.**

# ರುದ್ರಾಕ್ಷ

ರುದ್ರ ಎಂದರೆ ನಾಶ. ರುದ್ರಭೂಮಿ ಎಂದರೆ ಶರೀರಗಳು ನಾಶವಾಗುವ ಭೂಮಿ, ಅಂದರೆ ಸ್ಮಶಾನ. ರುದ್ರನೆಂದರೆ ರುದ್ರಭೂಮಿಯಲ್ಲಿ ಸಂಚರಿಸುವವನು (ಶಿವನು) ಎಂದು ಅರ್ಥ. ರುದ್ರಭೂಮಿಯಲ್ಲಿ ಭೂತ, ಪ್ರೇತ, ಪಿಶಾಚಿಗಳು, ಯಕ್ಷ, ಕಿನ್ನೆರ, ಕಿಂಪುರುಷ, ಗರುಡ, ಗಂಧರ್ವ, ಗ್ರಹಗಳು ಅನೇಕವು ವಾಸಿಸುತ್ತಿರುತ್ತವೆ. ಅವುಗಳೆಲ್ಲವುಗಳಿಗೂ ರುದ್ರ ಅಧಿಪತಿ. ಆ ರುದ್ರನು ಧರಿಸಿದ

ಮಣಿಗಳನ್ನು ರುದ್ರಾಕ್ಷಗಳೆಂದು ಎನ್ನುತ್ತಿದ್ದರು. ಆ ರುದ್ರಾಕ್ಷಗಳನ್ನು ನಾವು ಧರಿಸುವುದರಿಂದ ಪಿಶಾಚಿ ಗಣಗಳ ಬಾಧೆಗಳಿರುವುದಿಲ್ಲವೆಂದು ಪೂರ್ವದಲ್ಲಿ ಅಂದುಕೊಳ್ಳುತ್ತಿದ್ದರು. ರುದ್ರಾಕ್ಷಗಳನ್ನು ಪಿಶಾಚ ಗಣಗಳು ರುದ್ರನಿಗೆ ಸಮಾನವಾಗಿ ನೋಡಿಕೊಳ್ಳುತ್ತವೆಂದು ಪೂರ್ವದಲ್ಲಿ ಅಂದುಕೊಳ್ಳುತ್ತಿದ್ದರು. ರಕ್ಷಣೆಗೋಸ್ಕರ ರುದ್ರನ ಹೆಸರಿನಿಂದ ಧರಿಸುವ ಕಾಯಿ ರುದ್ರಾಕ್ಷ, ಆದ್ದರಿಂದ ಅವನನ್ನು ರುದ್ರಾಕ್ಷ ಎನ್ನುತ್ತಿದ್ದಾರೆ. ಒಂದು ಯಂತ್ರವನ್ನು (ತಾಯತವನ್ನು) ಧರಿಸುವುದನ್ನು ಸಹ ರಕ್ಷ ಕಟ್ಟಿಕೊಳ್ಳುವುದು ಎಂದು ಅನ್ನುತ್ತಿದ್ದರು. ತಾಯತಗಳು ಕಟ್ಟಿಕೊಳ್ಳುವುದು ಸಹ ಪಿಶಾಚಿಗಣಪೀಡೆಗಳ ನಿವಾರಣೆಗೇ ಎಂದು ಎಲ್ಲರಿಗೂ ತಿಳಿದಿದೆ. ಅಂತಹ ರಕ್ಷಣೆಗೋಸ್ಕರವೇ ಪೂರ್ವದಲ್ಲಿ ರುದ್ರಾಕ್ಷವನ್ನು ಸಹ ಕಟ್ಟಿಕೊಳ್ಳುತ್ತಿದ್ದರು. ಆದ್ದರಿಂದ ಅದನ್ನು **ರುದ್ರ ರಕ್ಷ** ಎಂದು ಸಹ ಬಿಡಿಸಿ ಹೇಳುತ್ತಿದ್ದರು. ಅದು ಇರುವುದರಿಂದ ರುದ್ರನೇ ತಮ್ಮ ಹತ್ತಿರ ಇದ್ದು ರಕ್ಷಣೆಕೊಡುತ್ತಾನೆಂದು ಧೈರ್ಯದಿಂದಿರುತ್ತಿದ್ದರು. ಪೂರ್ವದಲ್ಲಿ ಪಿಶಾಚಿ ಬಾಧೆಗಳು ಇರುವವರು ಮತ್ತು ಅವುಗಳಿಗೆ ಭಯಪಡು ವವರು ಕಟ್ಟುಕೊಳ್ಳುತ್ತಿದ್ದರು. ಕಾಲ ಕಳೆದಂತೆಲ್ಲ ಭಾವನೆಗಳು ಬದಲಾಗಿಹೋಗಿವೆ. ಶಿವನು ಧರಿಸಿದ್ದಾನೆಂದು ಶಿವಭಕ್ತರು ಧರಿಸುವುದು ಪ್ರಾರಂಭ ಮಾಡಿದ್ದಾರೆ. ಕೊನೆಗೆ ವೇದಾಂತಿಗಳು, ಸ್ವಾಮಿಗಳು ಧರಿಸುವುದು ಪ್ರಾರಂಭ ಮಾಡಿದ್ದಾರೆ. ಇವರೆಲ್ಲರನ್ನು ನೋಡಿದ ಮಾನವನು ರುದ್ರಾಕ್ಷ ಪಿಶಾಚಿಗಣಕ್ಕೋಸ್ಕರವೆಂದು ತಿಳಿಯದೆ, ರುದ್ರಾಕ್ಷಗಳು ಧರಿಸಿದವರಿಗೆ ಮುಗಿಯುವುದು ಪ್ರಾರಂಭ ಮಾಡಿದ್ದಾನೆ. ಈ ವಿಧವಾಗಿ ರುದ್ರಾಕ್ಷದ ಅರ್ಥ ಯಾವಾತ್ತೋ ಬದಲಾಗಿದೆ.

ರುದ್ರಾಕ್ಷಗಳನ್ನು ಹಾಕಿಕೊಳ್ಳುವುದರಿಂದ ಇನ್ನು ಕೆಲವು ಶರೀರ ಆರೋಗ್ಯಗಳು ಸಹ ಗುಣವಾಗುತ್ತವೆ. ಎಲ್ಲದಕ್ಕಿಂತ ಮುಖ್ಯವಾಗಿ ದೆವ್ವಗಳ ಬಾಧೆಗಳ ಭಯಕ್ಕೇ ಅವುಗಳನ್ನು ಬಳಸಬಹುದು. ದೆವ್ವಗಳಿಗೆ ಭಯಪಡುವವರು ಬಳಸಿದರು ಪರವಾಗಿಲ್ಲ. ಆದರೆ ಜ್ಞಾನ ಇರುವವರು ಸಹ ರುದ್ರಾಕ್ಷಗಳು ಬಳಸುವುದು ಆಶ್ಚರ್ಯವಾಗಿದೆ. ಒಬ್ಬರು ಹಾಕಿದ್ದಾರೆಂದು ಇನ್ನೊಬ್ಬರು ಹಾಕಿಕೊಳ್ಳುತ್ತಿದ್ದಾರೆ. ಆದರೆ ನಿಜವಾಗಲು ತಿಳಿದು ಹಾಕಿಕೊಳ್ಳುತ್ತಿಲ್ಲ.

# ಗುರು – ಬೋಧಕನು

"ಮಾಡಿಕೊಂಡವರಿಗೆ ಮಾಡಿಕೊಂಡಷ್ಟು" ಎಂಬ ನಾಣ್ನುಡಿ ಇದೆ. ನಾವು ಏನು ಮಾಡಿದರೆ ಅದಕ್ಕೆ ತಕ್ಕಷ್ಟು ಫಲಿತವಿರುತ್ತದೆಂದು ದೊಡ್ಡವರು ಹೇಳಿದ್ದಾರೆ. ಅದು ವಾಸ್ತವವೆ ಆದರೂ ಬಹಳಜನ ಅದನ್ನು ವಿಸ್ಮರಿಸುವುದು ಆಶ್ಚರ್ಯ. ಸಾಧಾರಣ ಮನುಷ್ಯರು ತಾವು ಮಾಡುತ್ತಿರುವುದಕ್ಕೆ ಫಲಿತವನ್ನು ಮರೆತುಹೋದರು ಪರವಾಗಿಲ್ಲ. ಜ್ಞಾನಿಗಳಾದವರು ಸಹ ಅಂತಹ ಸ್ಥಿತಿಗೆ ಇಳಿಜಾರುವುದು ಒಳ್ಳೆಯದು ಅಲ್ಲ. ಉದಾಹರಣೆಗೆ ಒಬ್ಬ ಗುರುವು ತನ್ನ ಶಿಷ್ಯರಿಗೆ ಅಪೂರ್ವ ಜ್ಞಾನ ತಿಳಿಸಿ ಅದರ ಪ್ರಕಾರ ನಡೆದುಕೋ ಎಂದು ಹೇಳುತ್ತಿದ್ದನು. ಆ ವಿಧವಾಗಿ ಗುರು ಹೇಳುತ್ತಾಹೋಗಿ ಶಿಷ್ಯರು ಕೇಳುತ್ತಾ ಹೋಗುತ್ತಿದ್ದರು. ಒಂದು ದಿನ ಗುರುಗಳು ಶಿಷ್ಯರನ್ನು ಕರೆದು ಈ ದಿನ ಅಡಿಗೆಗೆ ಸೌದೆ ಬೇಕೆಂದು ಅವುಗಳನ್ನು ತಂದಿಡಲು ಹೇಳಿದ್ದಾರೆ. ಆ ಮಾತು ಕೇಳಿದ ಶಿಷ್ಯರು ಕೆಲವರು ಸೌದೆಗೋಸ್ಕರ ಕಾಡಿಗೆ ಹೊರಟಿದ್ದಾರೆ. ಮಾರ್ಗ ಮಧ್ಯದಲ್ಲಿ ಒಬ್ಬರಿಗೊಬ್ಬರು ಮಾತನಾಡುವ ಸಂದರ್ಭದಲ್ಲಿ ಹೀಗೆ ಪ್ರಶ್ನೆ ಉತ್ತರಗಳ ರೂಪದಲ್ಲಿ ಅವರ ಸಂಭಾಷಣೆ ನಡೆದಿದೆ.

**ಪ್ರ) ಜ್ಞಾನವಾದರೆ ನಾವು ಕೇಳಬಹುದು, ಆದರೆ ಈ ಕೆಲಸಗಳು ಹೇಳುವುದೇನು?**

ಉ) ಗುರು ಹೇಳಿರುವುದು ಕೇಳಬೇಕಲ್ಲವೆ!

**ಪ್ರ) ಕೇಳಬೇಕು, ಕೇಳುವವರೆಗೂ ಚೆನ್ನಾಗೆ ಇದೆ. ಕೆಲಸಗಳು ಹೇಳುವುದು ಚೆನ್ನಾಗಿರುವುದಿಲ್ಲ ಅಲ್ಲವೆ?**

ಉ) ಕೇಳುವುದೆಂದರೆ ಕಿವಿಗಳಿಂದ ಕೇಳುವುದೇ ಅಲ್ಲ. ಹೇಳಿರುವುದು ಮಾಡುವುದು ಸಹ ಕೇಳುವುದೆ ಆಗುತ್ತದೆ.

**ಪ್ರ) ನನಗೆ ಕೇಳುವ ಸಹನೆ ಇದೆ. ಆದರೆ ಮಾಡುವ ಸಹನೆ ಇಲ್ಲವೆ?**

ಉ) ಹೇಳಿದ್ದು ಮಾಡಿದಾಗಲೇ ಸೇವೆ ಮಾಡಿದಂತಾಗುತ್ತದಲ್ಲವೆ!

**ಪ್ರ) ಸೇವೆ ಎಂದರೆ ಗುರುಗಳ ಕಾಲುಗಳು ಒತ್ತುವುದು, ಗಾಳಿ ಬೀಸುವುದು,**

**(ಬೀಸಣಿಕೆಯಿಂದ ಬೀಸುವುದು) ಆಗುತ್ತದೆ. ಆದರೆ ಕಷ್ಟಪಟ್ಟು ಕಟ್ಟಿಗೆಗಳು ತರುವುದೇನು?**

**ಉ)** ಗುರುಗಳ ಜ್ಞಾನಕ್ಕೆ ನಾವು ಬಾಕಿ ಇರುತ್ತೇವೆ. ಏನು ಹೇಳಿದರೆ ಅದು ಮಾಡುವುದರಿಂದ ಗುರುಗಳ ಋಣ ತೀರಿದಂತಾಗುತ್ತದೆ.

**ಪ್ರ) ಬಾಯಿಂದ ಹೇಳಿದ ಮಾತುಗಳಿಗೆ ಬಾಕಿ ಇದ್ದಂತಾಗುತ್ತದಾ! ಆತನು ಹಣಕೊಟ್ಟಿದ್ದಾನಾ ಬಾಕಿ ಇರುವುದಕ್ಕೆ?**

**ಉ)** ಜ್ಞಾನ ಹಣಕ್ಕಿಂತ ಬೆಲೆಯುಳ್ಳದ್ದು. ಅದನ್ನು ಹಣಕ್ಕೆ ಹೋಲಿಸಬಾರದು.

**ಪ್ರ) ಆಗಾಗ ಮನೆ ಹತ್ತಿರ ಕೆಲಸ ಬಿಟ್ಟುಹೋಗಿ ಕೇಳುತ್ತಿದ್ದೇವಲ್ಲ! ಅದರಿಂದ ನಮಗೆ ಬರುವ ಆದಾಯ ಹೋಗುತ್ತದೆ, ಆದರೆ ಆತನದ್ದೇನು ಹೋಗುತ್ತದೆ?**

**ಉ)** ಜ್ಞಾನ ನಮಗೆ ಅವಶ್ಯಕ. ಅದಕ್ಕೋಸ್ಕರ ನಾವು ಬರುತ್ತಿದ್ದೇವೆ. ಯಾವಾಗಲೊ ಒಂದುಸಲಬಂದು ಸ್ವಲ್ಪಹೊತ್ತು ಕೇಳಿಹೋಗುವ ನಾವು ಕೆಲಸಹೋಗಿದೆ, ಲಾಭ ಹೋಗಿದೆ ಎಂದರೆ, ಪ್ರತಿ ದಿನ ನಮ್ಮಂತೆ ಬರುವವರೆಷ್ಟೋ ಜನರಿಗೆ ಜ್ಞಾನ ಬೋಧನೆ ಮಾಡುವುದರಲ್ಲಿ ಕಾಲ ಕಳೆಯುವ ಆತನಿಗೆ ಸಹ ಪ್ರಪಂಚ ಕೆಲಸಗಳು ನಿಂತುಹೋದಂತಲ್ಲವೆ! ಆತನು ಸಹ ನಮ್ಮಂತೆ ನನ್ನ ಕೆಲಸಗಳು ಹೋಗುತ್ತವೆಂದು ಕೊಂಡರೆ ನಮಗೆ ಜ್ಞಾನ ತಿಳಿಯುತ್ತಿತ್ತಾ!

**ಪ್ರ) ಜ್ಞಾನ ಹೇಳಿದರೆ ಆತನಿಗೆ ಪುಣ್ಯ ಬರುತ್ತದಲ್ಲವೆ!**

**ಉ)** ಕೇಳಿದರೆ ನಮಗೂ ಏನೋ ಬರುತ್ತದೆಂದು ಏಕೆ ಅಂದುಕೊಳ್ಳಬಾರದು. ನಮಗೇನೊ ಹಣ ಹೋಗುತ್ತದೆಂಬುವುದು, ಆತನಿಗೇನೋ ಪುಣ್ಯಬರುತ್ತದೆಂಬು ವುದು ಇದೆಲ್ಲಿಯ ನೀತಿ.

**ಪ್ರ) ಸರಿ ಆತನು ನಮಗೆ ಜ್ಞಾನ ತಿಳಿಸುವುದರಿಂದ ಆತನ ಕಾಲ ವೃಥಾ ಅನ್ನುತ್ತಿದ್ದೇವೆ. ನಾವು ಹೀಗೆ ಕೆಲಸ ಮಾಡಿ ಇಡುವುದಕ್ಕಿಂತ ನಮಗೆ ತೋಚಿದ ಹಣ ಕೊಟ್ಟು ಸಹಾಯ ಮಾಡಬಹುದಲ್ಲವೆ! ಅದರಿಂದ ಆತನ ಅವಶ್ಯಕತೆಗಳು ಸಹ ತೀರುತ್ತವಲ್ಲ!**

**ಉ)** ಇದು ಬಹಳ ತಪ್ಪಾದ ಮಾತು. ನಮಗೆ ತೋಚಿರುವುದು ಕೊಡುವುದಕ್ಕೆ ಆತನೇನು ಭಿಕ್ಷುಕನಲ್ಲ. ನಮಗಿಂತ ಉನ್ನತ ಸ್ಥಾನದಲ್ಲಿರುವ ಗುರು. **ಗುರು ಸಾಕ್ಷಾತ್ ಪರಬ್ರಹ್ಮ** ಎನ್ನುವ ನಾವೇ ಹಾಗೆ ಅನ್ನಬಾರದು ಉನ್ನತ ಸ್ಥಾನದಲ್ಲಿರುವ ಗುರುವಿಗೆ ನಾವೇನುಕೊಟ್ಟರು ತೀರುವುದಲ್ಲ. ಆದ್ದರಿಂದ ಕೊಡುವು ದೆಂಬುವುದು ಅಲ್ಲದೆ ಕೈಲಾದಷ್ಟು ಮಾಡುವುದು ಸಹ ಕರ್ತವ್ಯವೇ. ಗುರುವಿನ ಋಣ ಅಷ್ಟು ಸುಲಭವಾಗಿ ತೀರುವುದು ಅಲ್ಲ. ಆದ್ದರಿಂದ ಪೂರ್ವದಲ್ಲಿ ಹಿರಿಯರು ತಮಗಿರುವ ಸರ್ವವು ಗುರುವಿನದೇ ಅಂದಿದ್ದಾರೆ.

**ಪ್ರ) ಪ್ರಪಂಚದಲ್ಲಿ ಎಷ್ಟೋ ಜನ ಗುರುಗಳಿದ್ದಾರೆ, ಅವರಲ್ಲಿ ನಿಜವಾದ ಗುರು ಯಾರೋ ತಿಳಿದರೆ ನೀನಂದಂತೆ ನಡೆದುಕೊಳ್ಳಬಹುದು. ಇಷ್ಟು ಜನರಲ್ಲಿ ನಿಜಗುರು ವಾಗಿ ಯಾರನ್ನು ತಿಳಿಯಬಹುದು. ಯಾರೊ ಬರೆದ ಗ್ರಂಥ ಓದಿ ಅದರಲ್ಲಿನ ವಿಷಯಗಳನ್ನು ಹೇಳುವವನು ಗುರುನಾ? ಅಥವಾ ಸ್ವತಃ ತಿಳಿದವನು ಗುರುವಾ?**

**ಉ)** ಯಾರೋ ಬರೆದಿರುವುದು, ಯಾರೋ ಹೇಳಿರುವುದಾದ ವಿಷಯವನ್ನು ಹೇಳುವವನು ಕೇವಲ ಬೋಧಕನೇ ಆಗುತ್ತಾನೆ. ಗುರುವಿಗೂ ಬೋಧಕನಿಗೂ ಬಹಳ ವ್ಯತ್ಯಾಸವಿದೆ. ಗುರು ಎಂದಿಗೂ ಇತರರು ಹೇಳಿರುವುದನ್ನು, ಬರೆದಿರುವುದನ್ನು ಹೇಳುವುದಿಲ್ಲ. ಯಾರಿಗೂ ತಿಳಿಯದ ವಿಷಯವನ್ನು ಹೇಳುವವನು ಗುರುವು. ಗುರು ಹೇಳಿರುವುದನ್ನು ಬೋಧಿಸಿದವರು ಬೋಧಕರು. ಬೋಧಕರು ಎಷ್ಟು ಜನರಾದರೂ ತಯಾರಾಗಬಹುದು. ಆದರೆ ಗುರು ಭೂಮಿಮೇಲೆ ಒಬ್ಬನೇ ಇರುತ್ತಾನೆ. ಒಂದು ಊರಿನಿಂದ ಮತ್ತೊಂದು ಊರಿಗೆ ದಾರಿ ಏರ್ಪಡಿಸಿ ಅದನ್ನು ನಿರ್ಮಿಸುವವನು ಒಬ್ಬನಾದರೆ, ಆ ದಾರಿಯನ್ನು ತೋರಿಸುವವರು, ಆ ದಾರಿ ವಿವರ ತಿಳಿಸುವವರು ಎಷ್ಟು ಜನರಾದರೂ ಇರಬಹುದು. ಅವರು ತೋರಿಸಿದ ದಾರಿ ಮೂಲಕ ಮತ್ತೆಷ್ಟುಜನರಾದರು ಪ್ರಯಾಣಿಸಬಹುದು ನಡೆಯುವವನಿಗಿಂತ ದಾರಿಯನ್ನು ತೋರಿಸುವವನು ದೊಡ್ಡವನು. ದಾರಿಯನ್ನು ತೋರಿಸಿದವನಿಗಿಂತ ಮೊದಲು ದಾರಿಯನ್ನು ಕಂಡುಹಿಡಿದು ನಿರ್ಮಿಸಿದವನು ಎಲ್ಲರಿಗಿಂತಲೂ ದೊಡ್ಡವನು. ಹೊರಡುವ

ಸ್ಥೂಳ ಪ್ರಪಂಚ ಅಥವಾ ಪ್ರಕೃತಿಯಾದರೆ, ಸೇರಬೇಕಾದ ಗುರಿ ಮೋಕ್ಷ ಅಥವಾ ದೇವರು. ಪ್ರಪಂಚದಿಂದ ದೇವರವರೆಗೂ ಸೇರುವ ಮಾರ್ಗವನ್ನು ಮೊದಲು ಕಂಡುಹಿಡಿದು ಅದನ್ನು ಶಾಸ್ತ್ರಬದ್ಧವಾಗಿ ನಿರ್ಮಿಸಿದವನು ಗುರು. ಹಾಗೆ ನಿರ್ಮಿಸಿರುವುದನ್ನು ಕುರಿತು ಎಷ್ಟು ಜನರಾದರು ಹೇಳಬಹುದು. ಹಾಗೆ ಹೇಳುವವರು ಬೋಧಕರು. ಶಾಸ್ತ್ರಬದ್ಧವಾದ ಸೂತ್ರವನ್ನು ಕಂಡುಕೊಳ್ಳುವವನು ಒಬ್ಬನೇ, ಕಂಡುಹಿಡಿದ ಸೂತ್ರವನ್ನು ಎಷ್ಟು ಜನರಾದರು ಹೇಳಿಕೊಳ್ಳಬಹುದು, ಎಷ್ಟು ಜನರಾದರು ಆಚರಿಸಬಹುದು. ಪ್ರಪಂಚದಲ್ಲಿ ಒಂದು ವಿಷಯವನ್ನು ಕಂಡುಹಿಡಿದವನು ಒಬ್ಬನೇ. ಕಂಡುಹಿಡಿದವನನ್ನು ಶಾಸ್ತ್ರಜ್ಞ, ಪರಿಶೋಧಕ ಎನ್ನುತ್ತಾರೆ. ಅದೇ ವಿಷಯವನ್ನು ಇತರರಿಗೆ ತಿಳಿಸುವವನನ್ನು ಬೋಧಕ ಎನ್ನುತ್ತಾರೆ. ಹಾಗೆ ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಷಯವನ್ನು ಶೋಧಿಸಿ ಮೊಟ್ಟ ಮೊದಲು ತಿಳಿಸುವವನು ಗುರು. ನಂತರ ಅದನ್ನು ಎಷ್ಟು ಜನ ತಿಳಿಸುತ್ತಾ ಹೋದರು ಅವರು ಕೇವಲ ಬೋಧಕರು. ಬೋಧಕರಿಗು ಗುರುಗಳಿಗು ಬಹಳ ವ್ಯತ್ಯಾಸವಿದ್ದರೂ ಗುರುತಿಸದ ಸ್ಥಿತಿಯಲ್ಲಿ ಪ್ರಜೆಗಳಿರುವುದರಿಂದ, ಆಧ್ಯಾತ್ಮಿಕತೆಗೂ ನಿಜವಾದ ಗುರುಗಳಿಗೂ ಸಮಾಜದಲ್ಲಿ ಬೆಲೆ ಇಲ್ಲದಂತಾಗಿದೆ.

**ಪ್ರ) ನಿಮ್ಮ ಮಾತಿನ ಪ್ರಕಾರವಾದರೆ ಗುರುಗಳೇ ಬಹಳ ಅಪರೂಪ. ಬೋಧಕರೇ ಬಹಳಷ್ಟು ಜನರಿದ್ದಾರೆಂಬ ಮಾತು. ಹಾಗಾದರು ಪ್ರಸ್ತುತ ಕಾಲದಲ್ಲಿ ಎಲ್ಲಾ ಬೋಧಕರೆ ಆಗುತ್ತಾರೆ. ಗುರು ರಾಷ್ಟ್ರಕ್ಕೊಬ್ಬನು ಸಹ ಸಿಗುವುದು ಅಪರೂಪವೆ!**

**ಉ)** ರಾಷ್ಟ್ರಕ್ಕೆ ಅಲ್ಲ, ದೇಶಕ್ಕೆ ಅಲ್ಲ, ಪ್ರಪಂಚಕ್ಕೆಲ್ಲವೂ ಒಬ್ಬನು ಸಿಗುವುದು ಸಹ ಅಪರೂಪವೆ.

**ಪ್ರ) ಆದರೆ ಈಗ ನಮ್ಮ ಗುರುವು ಬೋಧಕನಾ ಅಥವಾ ಗುರುವಾ?**

**ಉ)** ಆ ವಿಷಯ ಸ್ವತಃ ಯಾರಿಗೆ ಅವರು ತಿಳಿಯತಕ್ಕದ್ದು. ಇದಕ್ಕು ಮೊದಲೆ ಹೇಳಿದ್ದೇನಲ್ಲವೆ, ಗುರುವಿಗೂ ಬೋಧಕನಿಗೂ ಬಹಳ ವ್ಯತ್ಯಾಸ ವಿರುತ್ತದೆಂದು.

**ಪ್ರ) ನಮ್ಮ ಊರಿನಲ್ಲಿ ಒಬ್ಬ ವ್ಯಕ್ತಿ ವಿಕರಣ ಮಹರ್ಷಿ ಭಕ್ತನೆಂದು ಆತನ ಬೋಧನೆಗಳೇ ಹೇಳುತ್ತಾ, ಕಾಷಾಯ ವಸ್ತ್ರ ಹಾಕುತ್ತಾ ಊರಿಗೆ ಉತ್ತರಾಣ ಅಳ್ಳದ ದಡದ ಮೇಲೆ ವಿಕರಣ ಮಹರ್ಷಿ ಹೆಸರಿನ ಮೇಲೆ ಹಣ ವಸೂಲು ಮಾಡಿ ಆಶ್ರಮ ಸಹ ಕಟ್ಟಿಸಿದ್ದಾನೆ. ಆತನನ್ನು ನಾನು ಗುರುವೇ ಅಂದುಕೊಂಡಿದ್ದೆನು, ಕೇವಲ ಬೋಧಕನೆಂಬಮಾತು.**

**ಉ)** ನಿನ್ನ ಬಾಯಿಂದ ನೀನೆ ಹೇಳುತ್ತಿದ್ದೀಯಲ್ಲ! ಆತನು ವಿಕರಣ ಮಹರ್ಷಿ ಭಕ್ತನೆಂದು, ಗುರು ಅನ್ನುವವನು ಎಂದಿಗೂ, ಯಾವ ಸ್ವಾಮಿಗು ಭಕ್ತನಾಗಿರುವು ದಿಲ್ಲ. ಆತನು ಸ್ವತಃವಾಗಿ ಪರಮಾತ್ಮ ಮೇಲೆಯೇ ಭಕ್ತಿ ಶ್ರದ್ಧೆ ಹೊಂದಿರುತ್ತಾನೆ. ಕಾಣಿಸದ ದೇವತೆಗಳಿಗು, ಕಾಣಿಸುವ ಮನುಷ್ಯರಿಗೂ ಭಕ್ತನಾಗಿ ಗುರುವು ಇರುವುದಿಲ್ಲ. ಪ್ರಪಂಚಕ್ಕೆಲ್ಲವೂ ದೊಡ್ಡವನಾದವನು ಯಾರು ಇದ್ದಾನೋ ಅವನನ್ನು ಆರಾಧಿಸುವವನೇ ಗುರು, ಉಳಿದವರು ಬೋಧಕರು ಆಗಬಹುದು.

**ಪ್ರ) ಹಾಗಾದರೆ ನಮ್ಮ ಗುರುಗಳು ಸಹ ಶ್ರೀಕೃಷ್ಣನನ್ನು, ಗೌರವಿಸಿ ಹೆಚ್ಚಾಗಿ ಅವರ ಬೋಧನೆ ಹೇಳುತ್ತಿರುತ್ತಾನಲ್ಲವೆ! ಮೊದಲು ಯಾವಾಗಲೊ ಹುಟ್ಟಿಹೋದ ಶ್ರೀಕೃಷ್ಣನು ಮನುಷ್ಯನೇ ತಾನೆ! ಮನುಷ್ಯರನ್ನು ಕುರಿತು ಹೇಳುವವನಾದ್ದರಿಂದ ಈತನನ್ನು ಸಹ ಬೋಧಕನೇ ಎನ್ನಬಹುದು.**

**ಉ)** ಹಾಗೆಂದು ಅಂದುಕೊಂಡರೆ ನೀನು ಕೆಸರಿನಲ್ಲಿ ಕಾಲುಹಾಕಿದಂತೆ.

**ಪ್ರ) ನೀನು ಹೇಳಿದಂತೆ ಅಲ್ಲವೆ! ನನ್ನದೇನು ತಪ್ಪಿದೆ.**

**ಉ)** ಶ್ರೀಕೃಷ್ಣನು ಸಾಮಾನ್ಯ ಮಾನವನು ಅಲ್ಲ. ಪ್ರಪಂಚವೆಲ್ಲಾ ವ್ಯಾಪಿಸಿರುವ ಪರಮಾತ್ಮ ಅಂಶವೇ ಎಂದು ತಿಳಿಯಿರಿ. ಮಾನವ ಶರೀರದೊಳಗೆ ಬಂದಿರುವ ಪರಮಾತ್ಮ ಪ್ರತಿರೂಪ ಅಂದುಕೋ. ಅವರನ್ನು ಗೌರವಿಸುವುದರಲ್ಲಿ ಗುರುವಿಗೆ ಯಾವ ಲೋಪ ಇಲ್ಲ.

**ಪ್ರ) ಶ್ರೀಕೃಷ್ಣನ ಬೋಧನೆಯನ್ನು ಬೋಧಿಸುತ್ತಾನೆಂದಿದ್ದೀಯಲ್ಲ! ಅಂಥದರಲ್ಲಿ ಬೋಧಕನೆ ಅಲ್ಲವೆ! ಗುರು ಅಲ್ಲ ತಾನೆ!**

**ಉ)** ನಿನ್ನ ತಲೆಗೆ ಎಲ್ಲಾ ವಿರುದ್ಧ ಆಲೋಚನೆಗಳೇ ಬರುತ್ತಿರುತ್ತವೆ. ನಮ್ಮ ಗುರು ಗುರು ಅಲ್ಲದಿರುವುದೇನು! ಆತನು ಹೇಳಿದ ಬೋಧನೆಗಳು ಎಲ್ಲಾ ಹೊಸ ವಿಷಯಗಳೇ. ಅಷ್ಟೇ ಅಲ್ಲದೆ ಒಂದಲ್ಲ ಎರಡಲ್ಲ ನೂರಾರು ವಿಷಯಗಳು ಯಾರು ಹೇಳದಿರುವವು ಹೇಳಿದ್ದಾನೆ. ಅಷ್ಟೇತಕ್ಕೆ ಆತನ ಪ್ರತಿ ಬರಹದಲ್ಲಿಯೂ, ಪ್ರತಿ ಬೋಧನೆಯಲ್ಲಿಯೂ ಹೊಸತನ ಇರುತ್ತದೆ. ಈಗ ನಿನಗೆ ನಾನು ಹೇಳಿದ ಗುರು ಬೋಧಕರ ವ್ಯತ್ಯಾಸವನ್ನು ಸಹ ಆತನೇ ಹೇಳಿದ್ದಾನೆ. ಇದು ಹೊಸ ವಿಷಯ ಅಲ್ಲವೆ! ಸರ್ವಜೀವರಾಶಿಗಳು ಅತಿ ಮುಖ್ಯವಾಗಿ ತಿಳಿಯಬೇಕಾದ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಗಮನಗಳು, ಆಕಾರಗಳು ಹೇಳಿದವನು ನಮ್ಮ ಗುರು ಅಲ್ಲವಾ! ಇಲ್ಲಿಯವರೆಗೂ ಜೀವಿಗೆ ಆಕಾರವಿದೆ ಎಂದು, ಆತ್ಮನಿಗೂ ಸಹ ಆಕಾರವಿದೆ ಎಂದು, ಮನಸ್ಸಿಗೂ ಆಕಾರವಿದೆ ಎಂದು ಹೇಳಿದವರಿದ್ದಾರಾ? ಹೀಗೆ ಎಷ್ಟೋ ವಿಷಯಗಳು ತಿಳಿಸಿದ ಗುರುವನ್ನು ಗ್ರಹಿಸಲಾರದ ನಿನ್ನ ಬುದ್ಧಿ ಬಹಳ ಮಂದವಾಗಿದೆ ಎಂದು ಹೇಳಬಹುದು. ಅಂಥವನ ಹತ್ತಿರ ಸೇರಿ ಕೆಲಸಗಳು ಮಾಡಬೇಕಾ ಅಂದುಕೊಳ್ಳುವುದು ನಿನ್ನ ಕುರುಡುತನಕ್ಕೆ ನಿದರ್ಶನ. ಆತನು ಹೇಳಬೇಕೇ ಆಗಲಿ ಮಾಡಲಾರದೆಹೋಗುವುದು ನಮ್ಮ ದುರದೃಷ್ಟ.

**ಪ್ರ) ಆದರೆ ನನ್ನದು ತಪ್ಪೆ. ನಾನು ತಪ್ಪಾಗಿ ಅರ್ಥೈಸಿಕೊಂಡಂತೆ ಅಲ್ಲವೆ?**

**ಉ)** ಹೊರಗೆ ಹೇಳದೆಹೋದರೂ ನಿನ್ನ ಅಂತರಂಗದಲ್ಲಿ ಒಪ್ಪಿಕೊಂಡರೂ ಪರವಾಗಿಲ್ಲ.

**ಪ್ರ) ನನ್ನದೊಂದು ಚಿಕ್ಕ ಪ್ರಶ್ನೆ, ಸಜೀವವಾಗಿ ಪ್ರಸ್ತುತವಿರುವ ಗುರು ಅಲ್ಲದೆ ಪೂರ್ವವೆಷ್ಟೋ ಜನ ಗುರುಗಳಿರುತ್ತಿದ್ದರಲ್ಲವೆ! ಅಂತಹ ಗುರುಗಳಲ್ಲಿ ಒಬ್ಬ ಗುರುವೊಂದರ ಫೋಟೋ ಇಟ್ಟುಕೊಂಡು, ಆತನನ್ನು ಗುರುವಾಗಿ ಭಾವಿಸಿಕೊಂಡು, ಕೆಲವರು ಗುರುಗಳಾಗಿ ಚಲಾವಣೆ ಆಗುತ್ತಿದ್ದಾರೆ. ಇವರು ಯಾವ ಗುಂಪಿಗೆ ಸೇರಿದವರು?**

**ಉ)** ಫೋಟೋ ಇಟ್ಟುಕೊಂಡು ಗುರುಗಳಾಗುವುದು ಬಹಳ ಸುಲಭ.

ಪೂರ್ವದಲ್ಲಿ ಗುರುಗಳು ಎಂಥವರಾದರು ಅವರ ಫೋಟೋ ಇಟ್ಟುಕೊಳ್ಳುವುದರಿಂದ ಇವರು ಗುರುಗಳು ಆಗಲಾರರು. ಪೂರ್ವಿಕರಾದರೂ ಈಗಿನವರಾದರೂ ಗುರುಗಳಾಗುತ್ತಾರೋ ಇಲ್ಲವೋ ಮೊದಲು ಹೇಳಿದ ಸೂತ್ರವನ್ನನುಸರಿಸಿ ಹೇಳಬಹುದು. ಭೂಮಿಮೇಲೆ ನಾವು ಗುರುಗಳೆಂದು ಎಷ್ಟು ಜನರಾದರು ಅನ್ನಬಹುದು. ನಾವು ಮಾತ್ರ ಬಹಳ ಜಾಗ್ರತೆಯಾಗಿ ಶಿಷ್ಯರಾಗಬೇಕು. ನಿಜಗುರುವು ಸಿಗುವುದು ಕಷ್ಟ. ದೊರೆತರು ಶಿಷ್ಯರಾಗಿ ಮುಂದುವರಿಯುವುದು ಮತ್ತಷ್ಟು ಕಷ್ಟ. ಆದ್ದರಿಂದ ನಿಜಗುರು ಹತ್ತಿರ ಕಡಿಮೆ ಶಿಷ್ಯರಿರುತ್ತಾರೆ.

**ಪ್ರ) ಈದಿನ ಗುರುಗಳು ಊರೂರು ತಿರುಗಿ ಉಪದೇಶಕೊಡುತ್ತಾ ಹೋಗಿ ಶಿಷ್ಯರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತಾ ಇದ್ದರೆ, ನಿಜಗುರುವು ಶಿಷ್ಯರನ್ನು ಕಡಿಮೆ ಮಾಡಿಕೊಳ್ಳುವುದೇನು**?

**ಉ)** ನಿಜಗುರುವು ತನ್ನ ಶಿಷ್ಯರನ್ನು ಒಂದುಸಲ ಉಪದೇಶಕೊಟ್ಟು ಬಿಟ್ಟು ಬಿಡುವುದಿಲ್ಲ. ಅವರನ್ನು ಜ್ಞಾನಿಗಳಾಗಿ ಮಾಡುವುದಕ್ಕೆ ಅನೇಕ ವಿಧಗಳ ಪ್ರಯತ್ನ ಮಾಡುತ್ತಿರುತ್ತಾನೆ. ಆ ಪ್ರಯತ್ನದಲ್ಲಿ ಮಾತು ಮಾತಿಗು ನಿಮ್ಮಲ್ಲಿ ಅಜ್ಞಾನ ಇಷ್ಟು ಉಳಿದಿದೆ ಎಂಬುವುದಕ್ಕೆ ಅವರ ತಪ್ಪುಗಳನ್ನು ಹೊರಬೀಳುವಂತೆ ಮಾಡುತ್ತಿರುತ್ತಾನೆ. ಆದ್ದರಿಂದ ಆ ಶಿಕ್ಷಣಕ್ಕೆ ಕೆಲವರು ಸಹಿಸಿಕೊಳ್ಳದೆ ಮಧ್ಯದಲ್ಲಿಯೇ ಜಾರಿಕೊಳ್ಳುತ್ತಿರುತ್ತಾರೆ. ಆದ್ದರಿಂದ ಶಿಷ್ಯರ ಸಂಖ್ಯೆ ಕಡಿಮೆ ಎಂದು ಹೇಳಬಹುದು. ಅವರಕಥೆ ಹೇಗಾದರು ಇರುತ್ತದೆ ಆದರೆ ನಿನ್ನ ಪರಿಸ್ಥಿತಿ ಏನು?

ನೀನು ಹೇಳಿರುವುದನ್ನು ನೋಡಿದರೆ ನಾನು ಗುರು ಹತ್ತಿರ ಬಹಳ ತಪ್ಪುಗಳು ಮಾಡಿದ್ದೇನೆ. ಇನ್ನು ಮೇಲೆ ಎಂತಹ ತಪ್ಪುಗಳು ಮಾಡದಂತೆ ಪ್ರವರ್ತಿಸುತ್ತೇನೆಂದು ಅಂದುಕೊಳ್ಳುತ್ತಿದ್ದೇನೆ. ಒಳ್ಳೆಯದಾಗಿ ಸೇವೆ ಮಾಡಿ ಕೊಳ್ಳುತ್ತೇನೆ.

ಈ ವಿಧವಾಗಿ ಆ ಇಬ್ಬರು ಶಿಷ್ಯರ ಮಧ್ಯೆ ಸಂಭಾಷಣೆ ನಡೆದಿದೆ. ಈ ಸಂಭಾಷಣೆಯಿಂದ ಮುಖ್ಯವಾಗಿ ತಿಳಿದಿರುವುದು ಏನೆಂದರೆ ಗುರು, ಬೋಧಕರ

ಮಧ್ಯೆ ವ್ಯತ್ಯಾಸ ತಿಳಿದಿದೆ. ಅಷ್ಟೇ ಅಲ್ಲದೆ ನಿಜಗುರು ದೊರೆತಾಗ ಮಾಯೆ ಗೊಳಗಾಗದೆ, ನಮ್ಮತಲೆಯಲ್ಲಿನ ಗುಣಗಳ ಹಿಂದೆಹೋಗದೆ, ಗುರುವನ್ನೆ ಅನುಸರಿಸಬೇಕೆಂದು ತಿಳಿಯುತ್ತಿದೆ ಅಲ್ಲವೆ!

# ರೋಗ – ಯೋಗ

ಹುಟ್ಟಿದ ಪ್ರತಿ ಜೀವಿಗು ಅನುಭವಗಳ ವಿಷಯವನ್ನು ಕುರಿತು ನೋಡಿದರೆ ಒಟ್ಟು ಎರಡು ವಿಧಗಳಾದ ಅನುಭವಗಳಿವೆಯೆಂದು ತಿಳಿಯುತ್ತಿದೆ. ಪ್ರಕೃತಿ ಸಂಬಂಧವಾದ ಪ್ರಪಂಚ ವಿಷಯಗಳ ಅನುಭವಗಳೆಲ್ಲ ಒಂದು ವಿಧ. ದೈವಸಂಬಂಧವಾದ ಆತ್ಮಾನುಭವ ಒಂದು ವಿಧವಾಗಿ ವಿಭಜಿಸಿಕೊಳ್ಳಬಹುದು. ಪ್ರಕೃತಿ ಸಂಬಂಧವಾದ ಅನುಭವಗಳೆಲ್ಲವೂ ನಿತ್ಯ ಪ್ರತಿ ಜೀವಿಯು ಅನುಭವಿಸುತ್ತಲೇ ಇದ್ದಾನೆ. ಮುಂಜಾನೆ ಎದ್ದಾಗ ಮೊದಲು ನಡೆಯುತ್ತಿರುವ ಪ್ರತಿ ಕಾರ್ಯವು ಪ್ರಕೃತಿಗೆ ಸಂಬಂಧಿಸಿದ ಅನುಭವಗಳಾಗಿಯೇ ಇವೆ. ಪರಮಾತ್ಮ ಸಂಬಂಧವಾದ ಆತ್ಮಾನುಭವ ಜೀವಿಗೆ ಒಂದೇ ಒಂದು ಅನುಭವವಾದರೆ, ಪ್ರಕೃತಿಗೆ ಸಂಬಂಧಿಸಿದ ಅನುಭವಗಳು ಲೆಕ್ಕವಿಲ್ಲದಷ್ಟು ಇವೆ. ಆತ್ಮವೊಂದರ ಅನುಭೂತಿಯನ್ನು ಒಂದೇ ಒಂದು ಬ್ರಹ್ಮಯೋಗದಲ್ಲಿ ಜೀವಿಯು ಹೊಂದುತ್ತಿದ್ದಾನೆ. ಆದ್ದರಿಂದ ಜೀವಿಯು ಹೊಂದುವ ದೈವಸಂಬಂಧವಾದ ಅನುಭೂತಿಯನ್ನು ಯೋಗ ಎನ್ನುವ ಹೆಸರಿನಿಂದ ಕರೆಯುತ್ತಿದ್ದೇವೆ. ಜೀವಿಯು ಹೊಂದುವ ಎರಡು ವಿಧಗಳ ಅನುಭೂತಿಗಳಲ್ಲಿ ಒಂದು ಯೋಗ ಎಂದು ತಿಳಿದುಹೋಗಿದೆ. ಸುಖದುಃಖವಲ್ಲದ ಅನುಭೂತಿಯೇ ಯೋಗವೆಂದು ತಿಳಿಯುತ್ತಿದೆ.

ಎರಡನೇ ವಿಧವಾದ ಪ್ರಪಂಚ ಅನುಭೂತಿಗಳನ್ನು ನೋಡಿದ ಪಕ್ಷದಲ್ಲಿ ಅವು ಅನೇಕ ವಿಧಗಳಾದ ಸುಖದುಃಖಗಳಿಂದ ಕೂಡಿಕೊಂಡು ಇವೆ. ಸುಖದುಃಖಗಳನ್ನು ಕುರಿತು ವಿಶಧೀಕರಿಸಿಕೊಳ್ಳೋಣ. ಶರೀರದೊಳಗೆ ಮನಸ್ಸಿನ ಮೂಲಕ ಚಿಂತೆಮಾಡುವುದೆಂಬ ಬಾಧೆ ಇದೆ. ಹಾಗೆಯೇ ಶರೀರದಲ್ಲಿನ

ಅವಯವಗಳಿಗೆ ಸ್ವಸ್ಥತೆ ಇಲ್ಲದಿರುವಾಗ ದುಃಖವಾಗಿರುತ್ತದೆ. ಇಲ್ಲಿ ಎಲ್ಲರಿಗೂ ತಿಳಿದಂತೆ ಮನಸ್ಸಿನ ಮೂಲಕ ಬರುವ ದುಃಖವನ್ನು ಮನೋರೋಗ ಎನ್ನುವುದು ನಡೆಯುತ್ತದೆ. ಹಾಗೆಯೇ ಶರೀರಾಂತರ್ಗತವಾಗಿ ಉಂಟಾದ ಅನೇಕ ವಿಧಗಳಾದ ಅಸ್ವಸ್ಥತೆಗಳಿಗೆ ಅನೇಕ ವಿಧರೋಗಗಳೆಂದು ಸಹ ಎನ್ನುತ್ತಿದ್ದೇವೆ. ಇದನ್ನು ಅನುಸರಿಸಿ ನೋಡಿದರು ಜೀವಿಯು ಅನುಭವಿಸುವವುಗಳನ್ನು **'ರೋಗ'** ಎನ್ನುತ್ತಿದ್ದೇವೆ. ಪರಮಾತ್ಮ ಸಂಬಂಧವಾದ ಸುಖದುಃಖವಿಲ್ಲದ ಆತ್ಮಾನುಭೂತಿ ಯನ್ನು **'ಯೋಗ'** ಎಂದೂ ಪ್ರಕೃತಿ ಸಂಬಂಧ ಅನುಭವಗಳನ್ನು **'ರೋಗ'** ಎಂದು ಕರೆಯುತ್ತಿದ್ದೇವೆ. ಹೀಗೆ ಜೀವಿಗಿರುವ ಎರಡು ಅನುಭವಗಳಲ್ಲಿ ಒಂದು **'ರೋಗ'** ಎರಡನೆಯದು **"ಯೋಗ"** ಎಂದು ತಿಳಿದುಹೋಗಿದೆ.

ಈಗ ಕೆಲವರೊಂದು ಪ್ರಶ್ನೆ ಕೇಳಬಹುದು. ಅದೇನೆಂದರೆ ಶರೀರ ದಲ್ಲಿರುವ ದುಃಖಮಯ ಅನುಭವವನ್ನು ರೋಗ ಎನ್ನುವುದು ನಿಜವೇಯಾಗಲಿ, ಸುಖಮಯ ಅನುಭವವನ್ನು ರೋಗವೆಂದು ಎಲ್ಲಿಯೂ ಕೇಳಲಿಲ್ಲವೇ ಎಂದು ಕೇಳಬಹುದು. ಅದಕ್ಕೆ ಸಮಾಧಾನವೇನೆಂದರೆ! ಪ್ರತ್ಯೇಕಿಸಿ ದುಃಖಗಳನ್ನೆ ರೋಗಗಳೆನ್ನುವುದು ಸುಖಗಳನ್ನು ರೋಗಗಳನ್ನದೆ ಹೋಗುವುದು ಪ್ರಸ್ತುತ ನಡೆಯುತ್ತಿರುವುದು ವಾಸ್ತವವೆ. ನಿಜಕ್ಕೆ ಪರಿಶೀಲಿಸಿ ನೋಡಿದರೆ ನಮಗೆ ತಿಳಿಯದೆಯೇ ಸುಖವನ್ನು ಸಹ ರೋಗವೆನ್ನುತ್ತಿದ್ದೇವೆ. ಪ್ರತಿ ಅವಯವಯೊಂದರ ಕಷ್ಟವನ್ನು ರೋಗವೆಂದಾಗ ಹಾಗೆಯೇ ಪ್ರತಿ ಅವಯವದ ಸುಖವನ್ನು ಯಾವುದೋ ಒಂದು ಅನ್ನಬೇಕಲ್ಲವೆ! ಹಾಗೆ ಎನ್ನುವುದಕ್ಕೆ ಏನೂ ಇಲ್ಲ. ಅದನ್ನು ಸಹ ರೋಗವೇ ಎನ್ನುತ್ತಿದ್ದೇವೆ. ಪೂರ್ವದಲ್ಲಿ ದೊಡ್ಡವರೇನೋ ಸುಃಖದುಃಖಗಳೆಂಬುವ ಎರಡು ಅನುಭವಗಳನ್ನು ರೋಗ ಎನ್ನುವುದು ವಾಸ್ತವ ಎನ್ನುವುದಕ್ಕೆ ಸ್ವಲ್ಪ ಉದಾಹರಣೆ ಸಹ ಇದೆ. ಈಗ ಪ್ರಸ್ತುತ ಕಾಲದಲ್ಲಿ ಸಹ ಸುಖಗಳನ್ನು ಅಲ್ಲಲ್ಲಿ ರೋಗಗಳೆಂದೇ ಎಲ್ಲರು ಎನ್ನುವುದು ಜ್ಞಾಪಕ ಮಾಡಿಕೊಳ್ಳೋಣ. ಒಬ್ಬನು ಸಂತೋಷವಾಗಿ ರಾಗ ಹಾಡುತ್ತಿದ್ದರೆ ಅವನಿಗೆ ರಾಗ ತೆಗೆಯುವ ರೋಗವಿದೆ ಎನ್ನುತ್ತಾರೆ. ಒಬ್ಬನು ಉಲ್ಲಾಸವಾಗಿ ಆಟವಾಡಿ

ಕೊಳ್ಳುತ್ತಿದ್ದರೆ ಅವನನ್ನು ದೊಡ್ಡವರು ಹೆದರಿಸುವಾಗ **'ಏನೋ ಯಾವಾಗಲು ನಿನಗೆ ಆಟವಾಡಿಕೊಳ್ಳುವ ರೋಗ ಹೊರತು ಬೇರೆ ಯಾವುದು ಇಲ್ಲವಾ'** ಎಂದು ಅನ್ನುತ್ತಿರುತ್ತಾರೆ. ಹಾಗೆಯೇ ಇತರರ ಅಭ್ಯಾಸಗಳನ್ನು ಕುರಿತು ಹೇಳುವಾಗ ಅವನ ಅಭ್ಯಾಸವನ್ನು ರೋಗವಾಗಿ ವರ್ಣಿಸುತ್ತಾ ಒಬ್ಬೊಬ್ಬನಿಗೂ ಒಂದೊಂದು ರೋಗ ಇದ್ದೇಯಿದೆ ಅನ್ನುತ್ತಿರುತ್ತಾರೆ. ಇವುಗಳನ್ನನುಸರಿಸಿ ನೋಡಿದಾಗ ಕೇವಲ ದುಃಖಗಳನ್ನೇ ಅಲ್ಲದೆ ಸುಖಗಳನ್ನೂ ಸಹ ರೋಗಗಳೆನ್ನುವುದು ನಡೆಯುತ್ತಿದೆ.

ರೋಗ ಒಂದರ ವಿವರವೇನೆಂದು ನೋಡಿದಂತಾದರೆ ಒಬ್ಬ ಜೀವಿಗೆ ಸಂಭವಿಸುವ ಅನುಭವಗಳ ಮೂಲಕ ಅಸಂತೃಪ್ತಿ, ಅಸಹನೆ, ಅಶಾಂತಿ, ಉಂಟಾಗುವುದೆ ರೋಗವೆನ್ನುತ್ತಿದ್ದೇವೆ. ಯಾವಾಗಾದರೆ ಜೀವಿಗೆ ಶಾಂತಿ ಇಲ್ಲವೊ, ಆಗಲೇ ಅಸಹನೆ ಏರ್ಪಡುತ್ತದೆ. ಯಾವಾಗದರೆ ಸಹಿಸಿಕೊಳ್ಳಲಾರದ ಸ್ಥಿತಿ (ಅಸಹನೆ) ಜೀವಿಗಿದೆಯೊ, ಆಗಲೇ ರೋಗವಿದೆಯೆಂದು ತಿಳಿಯುತ್ತಿದೆ. ಬಹಳಜನ ಪ್ರತ್ಯೇಕಿಸಿ ಹೆಸರುಹೊಂದಿದ ಕೆಲವು ಅನುಭವಗಳನ್ನೇ ರೋಗ ಗಳೆಂದುಕೊಂಡಿದ್ದಾರೆ. ಮನೋವ್ಯಾಧಿ ರೋಗವೆಂಬ ಮಾತು ಮರೆತಿದ್ದಾರೆ. ಅಶಾಂತಿ ರೋಗವೆಂಬ ಮಾತು ಮರೆತಿದ್ದಾರೆ. ಶರೀರದಲ್ಲಿನ ಅಶಾಂತಿ ಎಂಬುದು ಒಂದು ದೊಡ್ಡರೋಗವೆಂದು ಅದು ಅನೇಕ ವಿಧಗಳ ರೋಗಗಳ ಕೂಡಲಿ ಎಂದು ಹೇಳಬಹುದು. ಅಶಾಂತಿಯನ್ನು ಪರಿಶೀಲಿಸಿ ನೋಡಿದರು ಅನೇಕ ವಿಧಗಳಾದ ರೋಗಗಳಾಗಿ ಕಾಣಿಸುತ್ತಿದೆ. ಅಶಾಂತಿ ಎನ್ನುವುದು ಕೇವಲ ದುಃಖಗಳಲ್ಲಿಯೇ ಅಲ್ಲದೆ ಸುಖಗಳಲ್ಲಿಯೂ ಸಹ ಇದೆ. ಈ ಮಾತು ನಿಜವೆಂಬುವುದಕ್ಕೆ ಎಷ್ಟೋ ಆಧಾರಗಳು ಸಹ ಇವೆ. ಈ ದಿನ ಸರ್ವ ಸುಖಗಳನ್ನು ಅನುಭವಿಸುವ ಧನಿಕರು ಸಹ ಅಶಾಂತಿಗೆ ಗುರಿಯಾಗಿ ಬಾಧೆ ಪಡುತ್ತಿದ್ದಾರೆ. ಮೂರುಗುಣಗಳನ್ನು ಬಿಟ್ಟು ಗುಣಾತೀತಸ್ಥಾನದಲ್ಲಿರುವ ಒಬ್ಬ ಬ್ರಹ್ಮಯೋಗಿ ಹೊರತು ಪ್ರಪಂಚದಲ್ಲಿ ಗುಣಸಂಬಂಧ ಇರುವವನ್ಯಾರಾದರೂ, ಎಂತಹ ಧನಿಕನಾದರೂ, ಎಷ್ಟು ಸುಖವಂತನಾದರು ಅಶಾಂತಿ ಎನ್ನುವ ರೋಗದಿಂದ ದುಃಖಪಡುತ್ತಿದ್ದಾನೆ. ಗುಣಗಳಲ್ಲಿರುವ ಯಾರಾಗಲಿ ನಾನು ಶಾಂತಿಯಾಗಿದ್ದೇ

ನೆಂದು ಹೇಳಲಾರನು. ಏಕೆಂದರೆ ಪ್ರತಿ ಮನುಷ್ಯ, ಪ್ರತಿ ಜೀವಿಯು ಇತ್ತ ಯೋಗದಲ್ಲಾಗಲಿ, ಅತ್ತ ರೋಗದಲ್ಲಾಗಲಿ ಇರಲೇಬೇಕಾಗಿದ್ದೆ. ಯೋಗದಲ್ಲಿ ಇಲ್ಲದವನು ರೋಗದಲ್ಲಿಯೂ, ರೋಗದಲ್ಲಿ ಇಲ್ಲದವನು ಯೋಗದಲ್ಲಿಯೂ ಇರಬೇಕು. ಯೋಗ ತಿಳಿಯದವನು ತಪ್ಪದೆ ರೋಗದಲ್ಲಿ ಇದ್ದಾನೆಂದೇ ಹೇಳಬಹುದು. ಈ ಸೂತ್ರವನ್ನು ಅನುಸರಿಸಿ ಪ್ರತಿಜೀವಿಯು ಹುಟ್ಟಿದ್ದು ಮೊದಲು ರೋಗದಲ್ಲಿ ಇರುತ್ತಿದ್ದಾನೆ. ರೋಗ ಪೀಡೆಯಿಂದಿರುವುದೆಂದು, ಸುಖದಃಖ ಗಳೆಲ್ಲವುಗಳಲ್ಲಿಯೂ ಒತ್ತಡ ಉಂಟುಮಾಡುತ್ತಲೇ ಇರುತ್ತದೆಂದು, ಅಂತಹ ಪೀಡೆ ಇರುವ ಪೀಡೆಯಿಂದ ಬಿಡುಗಡೆಯಾಗುವುದೆ ಬಿಡುಗಡೆ ಅಥವಾ ಮುಕ್ತಿ ಎಂದು ತಿಳಿದವರು ರೋಗದಿಂದ ಯೋಗಕ್ಕೆ ಬದಲಾಗಬೇಕೆಂದು ಪ್ರಯತ್ನಿಸುತ್ತಾರೆ.

ರೋಗದಿಂದ ಯೋಗಕ್ಕೆ ಬದಲಾಗಬೇಕೆಂದರೂ, ರೋಗಕ್ಕೆ ಔಷಧಿ ಮತ್ತು ಔಷಧಿಕೊಡುವ ವೈದ್ಯ ಅವಶ್ಯಕ. ಒಳ್ಳೆಯ ವೈದ್ಯನು ದೊರೆತು, ಅವರ ಹತ್ತಿರ ಒಳ್ಳೆ ಔಷಧಿ ದೊರೆತರೆ ರೋಗವು ವಾಸಿಯಾಗಿ ಯೋಗವನ್ನು ಹೊಂದಬಹುದು. ಈ ವಿಧಾನ ತಿಳಿಸುವುದಕ್ಕೇ ಪೂರ್ವದಲ್ಲಿ ಹಿರಿಯರು ಜೀವಿಯು ಅನುಭವಿಸುವ ಎಲ್ಲಾ ಅನುಭವಗಳನ್ನು ಸೇರಿಸಿ **'ಭವರೋಗ'** ಎಂದಿದ್ದಾರೆ. ಭವ ಎಂದರೆ ನಿನ್ನೊಂದರ ಎಂದು ಅರ್ಥ. ಭವರೋಗ ಎಂದರೆ ನಿನ್ನ ರೋಗ ಎಂದು ಅರ್ಥ. ಯಾವುದೋ ಒಂದು ಹೆಸರಿಟ್ಟುಕೊಂಡು ಪ್ರಪಂಚದಲ್ಲಿ ಚಲಾವಣೆಯಾಗುತ್ತಿರುವ ನೀನು ನಿನ್ನೊಂದರ ರೋಗಕ್ಕೆ ಅಥವಾ ಭವರೋಗಕ್ಕೆ ಬ್ರಹ್ಮಜ್ಞಾನವೇ ದಿವ್ಯ ಔಷಧವೆಂದು ತಿಳಿಯಬೇಕು. ಜ್ಞಾನವೆಂಬ ಔಷಧಿ ನಮಗೆ ತಿಳಿಸುವ ವೈದ್ಯನೇ ಯೋಗಿ ಅಥವಾ ಗುರು. ರೋಗಿ ಯೋಗಿಯ ಬಳಿಸೇರಿ ರೋಗಕ್ಕೆ ಚಿಕಿತ್ಸೆ ಮಾಡಿಸಿಕೊಳ್ಳುವುದು ರೋಗಿಯೊಂದರ ಮುಖ್ಯ ಕರ್ತವ್ಯ. ಚಿಕ್ಕ ಚಿಕ್ಕ ರೋಗಗಳಿಗೆ ಡಾಕ್ಟರ್‌ಗಳ ಹತ್ತಿರ ದೊಡ್ಡ ಮೊತ್ತವನ್ನು ಖರ್ಚು ಇಡಬೇಕಾಗಿಬರುತ್ತದೆ. ಅದನ್ನನುಸರಿಸಿ ನೋಡಿದರೆ ಒಟ್ಟು

ಭವರೋಗಗಳಿಗೆ ವೈದ್ಯವು ಬಹಳ ಬೆಲೆಯುಳ್ಳದ್ದು. ಆದ್ದರಿಂದಲೇ ಜ್ಞಾನ ಬೆಲೆಕಟ್ಟದಷ್ಟು ಖರೀದಾದುದೆಂದು ಕೆಲವರಂದಿದ್ದಾರೆ. ಮಾನವರಿಗಿರುವವೆಲ್ಲ ರೋಗಗಳೇ ಎಂದು ತಿಳಿಸುತ್ತಾ **ರಾಮಜೋಗಿ ಔಷಧಿ ಕೊಳ್ಳಿರೋ** ಎಂದು ಒಬ್ಬ ವೇದಾಂತಿ ಹಾಡಿನರೂಪವಾಗಿ ಹೇಳಿದ್ದಾರೆ.

ಯೋಗ ಒಂದೇ ಆದರೆ ರೋಗಗಳು ಅನೇಕ ವಿಧಗಳಾಗಿ ಇದೆ ಎಂದಿದ್ದೇವೆ. ಅದರ ಪ್ರಕಾರ ನೋಡಿದಂತಾದರೆ ನಾವು ನಿತ್ಯ ರೋಗಗಳನ್ನೇ ಅನುಭವಿಸುತ್ತಿದ್ದೇವೆ. ಯೋಗವಿಲ್ಲದ ಕಾಲವೆಲ್ಲವೂ ರೋಗದಲ್ಲಿಯೇ ಕಳೆದಂತಾಗುತ್ತದೆ. ನಿತ್ಯ ಸರ್ವವೇಳೆಯಲ್ಲಿ ಸರ್ವರೋಗಗಳು ಹೊಂದಿರುವ ನಾವು ರೋಗಗಳ ಬಾಧೆಗಳಿಂದ ಹೊರಬೀಳುವಂತೆ ಅವುಗಳನ್ನು ಕುರಿತು ಆಲೋಚಿಸುತ್ತಿಲ್ಲ. ಯಾವಾಗಾದರು ಒಂದು ರೋಗ ಶರೀರಕ್ಕಿದೆ ಎಂದು ಡಾಕ್ಟರ್ಸ್ ಹೇಳಿದಾಗ ಬಹಳ ದುಃಖಪಡುತ್ತೇವೆ, ಅದನ್ನು ವಾಸಿಮಾಡಿಸಿ ಕೊಳ್ಳುವುದಕ್ಕೆ ಪ್ರಯತ್ನಿಸುತ್ತೇವೆ. ಒಂದು ರೋಗಕ್ಕೇ ಎಷ್ಟೋ ಸ್ಪಂದಿಸಿ ಗುಣಪಡಿಸಿಕೊಳ್ಳುವುದಕ್ಕೆ ಪ್ರಯತ್ನಿಸುವ ನಾವು ಎಷ್ಟೋ ರೋಗಗಳ ಕೂಡಲಿ ನಮ್ಮಲ್ಲಿ ಇದ್ದರೂ, ಅವುಗಳನ್ನು ನಿತ್ಯವು ಅನುಭವಿಸುತ್ತಿದ್ದರೂ, ಅವುಗಳ ವಿಷಯ ತಿಳಿಯದವರಾಗಿ ಇರುವುದರಿಂದ ಅವುಗಳನ್ನು ಕುರಿತು ಆಲೋಚಿಸುತ್ತಿಲ್ಲ. ಅವುಗಳಿಂದ ಹೊರಬಿದ್ದು ರಕ್ಷಣೆ ಪಡೆಯಬೇಕೆಂದು ಪ್ರಯತ್ನಿಸಲೂ ಇಲ್ಲ. ಭವರೋಗಗಳಿಂದ ರಕ್ಷಣೆಕೊಡುವ ರಕ್ಷಕನನ್ನು ಹುಡುಕಲೂ ಇಲ್ಲ. ಈಗಾದರೂ ಜಾಗ್ರತೆಹೊಂದಿ ನೀನು ರೋಗದಲ್ಲಿ ಇದ್ದೀಯೋ ಯೋಗದಲ್ಲಿ ಇದ್ದೀಯೋ ಆಲೋಚಿಸಿ ನೋಡಿಕೊಂಡು ರೋಗದಲ್ಲಿ ಇದ್ದಂತಾದರೆ ಯೋಗದಲ್ಲಿರುವುದಕ್ಕೆ ಪ್ರಯತ್ನಿಸಬೇಕೆಂದು, ರೋಗದಿಂದ ಯೋಗಕ್ಕೆ ಒಳ್ಳೆಯದಾರಿ ತೋರಿಸುವ ಗುರುವನ್ನು ಆಶ್ರಯಿಸಬೇಕೆಂದು, ಔಷಧಕ್ಕೆ ಬೆಲೆಕೊಟ್ಟು ರೋಗವನ್ನು ಇಲ್ಲದಂತೆ ಮಾಡಿಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ.

# ಭಗವಂತನು ಯಾರು?

ಆದಿಕರ್ತನಾದ ಪರಮಾತ್ಮ ಸರ್ವಜಗತ್ತಿಗೆಲ್ಲ ಅಧಿಪತಿಯಾಗಿ ಸರ್ವವನ್ನು ತಾನೇ ಸೃಷ್ಠಿಸಿ, ಅವು ಎಲ್ಲಾ ನಡೆಯುವುದಕ್ಕೆ ಬೇಕಾದ ಪದ್ಧತಿಯನ್ನು ಏರ್ಪಡಿಸಿದ್ದಾನೆ. ಏರ್ಪಡಿಸಿದ ಪದ್ಧತಿಗೆ ಸಮಸ್ತವು ತನ್ನ ಅಧೀನದಲ್ಲಿರುವಂತೆ ಮಾಡಿದ್ದಾನೆ. ಸರ್ವಪ್ರಪಂಚಕ್ಕೆ ತಾನೇ ಸೃಷ್ಠಿಕರ್ತ, ಅಧಿಪತಿ ಆದರೂ ಪ್ರಪಂಚ ಜೊತೆ ತಾನು ಮಾತ್ರ ಜೋಕ್ಯ ಮಾಡಿಕೊಳ್ಳದೆ, ಬಂಧ ಇಟ್ಟುಕೊಳ್ಳದೆ ತಾನು ನಿರ್ಮಿಸಿದ ಪದ್ಧತಿಯಿಂದ ನಡೆಯುವಂತೆ ನಿರ್ಮಾಣಮಾಡಿದ್ದಾನೆ. ತಾನು ನಿರ್ಮಿಸಿದ ಪದ್ಧತಿಗೆ ಸಮಸ್ತವು ಅಧೀನವಾಗಿದ್ದು, ಆ ಪದ್ಧತಿ ಪ್ರಕಾರವೇ ನಡೆದುಕೊಳ್ಳುತ್ತಿವೆ. ಈ ಲೆಕ್ಕ ಪ್ರಕಾರ ಸರ್ವಪ್ರಪಂಚವನ್ನು ಅಧೀನಪಡಿಸಿಕೊಂಡು ಆಡಿಸುತ್ತಿರುವುದು ಸ್ವತಃವಾಗಿ ಪರಮಾತ್ಮ ಅಲ್ಲ, ಪರಮಾತ್ಮನಿಂದ ನಿರ್ಮಿಸಲ್ಪಟ್ಟ ಪ್ರತ್ಯೇಕವಾದ ವಿಧಾನ. ಆ ವಿಧಾನಕ್ಕೆ ಅಥವಾ ಪದ್ಧತಿಗೆ ಮುಖ್ಯವಾದ ಹೆಸರು ಇದೆ. ಅದನ್ನೇ **'ಮಾಯೆ'** ಅನ್ನುತ್ತಿದ್ದೇವೆ. ಮಾಯೆಗೆ ಮತ್ತೆಕೆಲವು ಹೆಸರುಗಳಿವೆ. ಏಸುಪ್ರಭು ಅದಕ್ಕೆ **ಸಾತಾನ್ (ಸೈತಾನ್)** ಎಂದು ಹೆಸರು ಇಟ್ಟರೆ, ಇಸ್ಲಾಂ ಪ್ರವಕ್ತ **ಸೈತಾನ್** ಎಂಬ ಹೆಸರಿನಿಂದ ಕರೆದಿದ್ದಾನೆ.

ಮಾಯೆ ಪರಮಾತ್ಮನಿಂದ ನಿರ್ಮಿಸಲ್ಪಟ್ಟು, ಆತನು ಮೊದಲು ಹೇಳಿದ ಆದೇಶಾನುಸಾರ ತನ್ನ ಕೆಲಸವನ್ನು ತಾನು ಮಾಡುತ್ತಾಹೋಗುತ್ತಿದೆ. ಪ್ರಪಂಚದಲ್ಲಿ ಮಾಯೆಗೆ ಒಳಪಡದಿರುವುದು ಏನೂ ಇಲ್ಲ. ಹುಟ್ಟಿರುವವೆಲ್ಲ ಮಾಯೆಗೆ ಒಳಪಟ್ಟಿರುವವೇ. ಮಾಯೆಗೆ ಒಳಪಡದಿರುವುದು ಮಾಯೆಯನ್ನೇ ಹುಟ್ಟಿಸಿದ ಪರಮಾತ್ಮ ಒಂದೇ. ಮಾಯೆ ಪದ್ಧತಿ ಪ್ರಕಾರ ತನ್ನ ಅಧೀನದಲ್ಲಿರುವವರನ್ನು ಸಾಧಾರಣವಾಗಿ ನಡೆಸುತ್ತಿರುತ್ತದೆ. ಹಾಗಲ್ಲದೆ ತನಗೆ ವಿರುದ್ಧವಾಗಿ ನಡೆಯಬೇಕೆಂದುಕೊಂಡವರಿಗೆ ಪೂರ್ತಿ ವಿರುದ್ಧವಾಗಿ ಮಾಡುವುದಕ್ಕೆ ಪ್ರಯತ್ನಿಸುತ್ತದೆ. ಪ್ರಕೃತಿ ಸಿದ್ಧವಾದ ಜನನ, ಮರಣದಿಂದ ತಪ್ಪಿಸಿಕೊಳ್ಳಬೇಕು ಅನ್ನುವವರೆಲ್ಲರೂ ಮಾಯೆ ಅಧೀನದಿಂದ ತಪ್ಪಿಸಿಕೊಳ್ಳಬೇಕೆಂದುಕೊಳ್ಳುವವರೇ. ಆದಕಾರಣ ಮಾಯೆಗೆ ಮುಕ್ತಿಬೇಕೆನ್ನುವವರು ವಿರೋಧಿಗಳು, ಮುಕ್ತಿ ಬೇಕೆನ್ನುವವರು

ಪ್ರಪಂಚಾಧಿನೇತಯಾದ ಮಾಯೆಯನ್ನು ಏನೂ ಮಾಡಲಾರರು. ಆದರೆ ಮಾಯೆ ಅಂದುಕೊಂಡರೆ ಯಾರನ್ನಾದರೂ ಏನಾದರು ಮಾಡಬಲ್ಲದು. ಹಾಗಾದರೆ ಮೋಕ್ಷವನ್ನು ಯಾರು ಹೊಂದಲಾರರಲ್ಲವೆ ಎಂಬ ಪ್ರಶ್ನೆ ಸಹ ಬರುತ್ತದೆ.

ಯಾರೂ ಜಯಿಸಲಾರದ ಅತಿಬಲವಾದ ಮಾಯೆಯನ್ನು ಜಯಿಸಿ ಅದರ ಅಧೀನದಿಂದ ಹೊರಬೀಳುವುದಕ್ಕೆ ಪರಮಾತ್ಮ ಒಂದು ಪ್ರತ್ಯೇಕವಾದ ವಿಧಾನವನ್ನು ನಿರ್ಮಿಸಿದ್ದಾನೆ, ಅವುಗಳೆ ಧರ್ಮಗಳು (ಜ್ಞಾನ). ಪರಮಾತ್ಮ ಧರ್ಮಗಳನ್ನು ಆಚರಿಸುವವರನ್ನು ಮಾಯೆ ಎಷ್ಟು ಆತಂಕಪಡಿಸಿದರು ಅದರಿಂದ ಹೊರಬಿದ್ದು ಕೊನೆಗೆ ಪರಮಾತ್ಮನನ್ನೆ ಸೇರುತ್ತಾರೆ. ಹಾಗೆ ಆಚರಿಸುವುದಕ್ಕೆ ಪರಮಾತ್ಮ ಧರ್ಮಗಳು ಇಂತಹವೆಂದು ತಿಳಿಯಬೇಕಲ್ಲವೆ! ಎಂದು ಕೆಲವರು ಕೇಳಬಹುದು. ಇದಕ್ಕೆ ಉತ್ತರ ಏನೆಂದರೆ! ಪ್ರಪಂಚ ಸೃಷ್ಠಿ ಆದಿಯಲ್ಲಿ ಮಾಯೆಯನ್ನು ತಯಾರುಮಾಡಿದ ಪರಮಾತ್ಮ, ಮಾಯೆಗೆ ಪ್ರತ್ಯರ್ಥಿಯಾಗಿ ಇರುವಂತೆ ಸೂತ್ರಬದ್ದವಾದ ಜ್ಞಾನವನ್ನು, ಧರ್ಮಗಳನ್ನು ಸಹ ತಯಾರು ಮಾಡಿಟ್ಟಿದ್ದಾನೆ. ಮಾಯೆ ಕೆಲಸ ಮಾಯೆಗೆ, ಧರ್ಮಗಳ ಕೆಲಸ ಧರ್ಮಗಳಿಗೆ ನಿರ್ಮಿಸಿಟ್ಟಿದ್ದಾನೆ. ಆಗಿನಿಂದ ಅವೆರಡು ಅವವುಗಳ ಕೆಲಸ ನಿರ್ವಹಿಸುತ್ತಲೇ ಇವೆ. ಮಾಯೆ ಅದಕ್ಕೆ ವಿರುದ್ಧವಾದ ಧರ್ಮಗಳು ಪ್ರಪಂಚದಲ್ಲಿನ ಜೀವರಾಶಿ ಗಳಿಗೋಸ್ಕರವೇ ನಿರ್ಮಿಸಿದರೂ, ಜೀವರಾಶಿಗಳೆಲ್ಲ ಮಾಯೆ ಕಡೆಗೆ ಹೆಚ್ಚಾಗಿ ಪ್ರಭಾವಿತವಾಗುತ್ತಿವೆ. ಧರ್ಮಗಳ ಕಡೆ ಸೇರಲಾರದೆಹೋಗುತ್ತಿವೆ. ದೇವರು ತನಗೆಕೊಟ್ಟಿರುವ ಅಧಿಕಾರದಿಂದ ಮಾಯೆ ಮಾನವರೆಲ್ಲರನ್ನು ತನ್ನಕಡೆಗೆ ಸೆಳೆದು ಕೊಳ್ಳುತ್ತಿದೆ. ತನ್ನ ಪಕ್ಷವೇ ಎಲ್ಲರಿಗೂ ಒಳ್ಳೆಯದಾಗಿ ಕಾಣಿಸುವಂತೆ ಮಾಡುತ್ತಿದೆ. ಇದಕ್ಕೆ ಕಾರಣ ಮಾಯೆಯೊಂದರ ಫಲಿತ ಪ್ರತ್ಯಕ್ಷವಾಗಿದೆ. ಧರ್ಮಗಳೊಂದರ ಫಲಿತ ಪ್ರತ್ಯಕ್ಷವಾಗಿ ಇಲ್ಲ. ಮಾಯೆ ಮತ್ತು ಅದಕ್ಕೆ ವಿರುದ್ಧವಾದ ಜ್ಞಾನ ಅವವುಗಳ ಇರುವಿಕೆಯನ್ನು ಕಳೆದುಕೊಳ್ಳದಂತಿರುವುದಕ್ಕೆ ಅವುಗಳ ಪ್ರಯತ್ನ ಅವು ಮಾಡುತ್ತಲೇ ಇವೆ. ಆ ಪ್ರಯತ್ನಗಳಲ್ಲಿ ಮಾಯೆ ತಾನು ಸಹ ಜ್ಞಾನ ಧರ್ಮಗಳಂತೆ ನಟಿಸುತ್ತಾ, ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುತ್ತಿದೆ. ಹಾಗೆ

ಜ್ಞಾನ ಸಹ ಮಾಯೆಯ ಹಾಗೆ ನಟಿಸುತ್ತಾ ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳ ಬೇಕೆಂದು ನೋಡುತ್ತಿದೆ. ಯಾವುದು ಏನಾದರು ಪ್ರಪಂಚದಲ್ಲಿ ಜ್ಞಾನಕ್ಕಿಂತ ಮಾಯೆಯೊಂದರ ಪ್ರಾಬಲ್ಯ ಅಧಿಕವಾಗಿರುವುದಕ್ಕೆ ಮುಖ್ಯವಾದ ಕಾರಣವೊಂದು ಇದೆ. ಜ್ಞಾನಕ್ಕೆ ಒಂದುಪಟ್ಟು ಬಲವಿರುವಾಗ, ಮಾಯೆಗೆ ಸಾವಿರ ಪಟ್ಟು ಬಲಹೆಚ್ಚಾಗಿರುವಂತೆ ಮೊದಲೇ ನಿರ್ಣಯಿಸಲ್ಪಟ್ಟಿದೆ. ಒಂದುಪಟ್ಟು ಬಲವೂ ಸಹ ಜ್ಞಾನಕ್ಕೆ ಸರಿಯಾಗಿಲ್ಲ. ಆದ್ದರಿಂದ ಗೀತೆಯಲ್ಲಿ ಭಗವಂತನು ಮನುಷ್ಯರಲ್ಲಿ ಸಾವಿರಮನೆಗೊಬ್ಬನು ಸಿದ್ಧಿಗೋಸ್ಕರ ಪ್ರಯತ್ನಿಸುವುದು ಸಹ ಅಪರೂಪವಾಗಿ ರುತ್ತಾರೆಂದು ತಿಳಿಸಿದ್ದಾನೆ.

ಭೂಮಿ ಮೇಲೆ ಕೆಲವರು ಗುರುಗಳಾಗಿ ಹೊರಟು ಜ್ಞಾನ ಬೋಧಿ ಸುವುದು, ಉಪದೇಶಗಳು ಕೊಡುವುದು ನಡೆಯುತ್ತಿರುವ ಕೆಲಸವೇ. ಮಾಯೆ ಅವರ ಮೇಲೆಯೇ ದೃಷ್ಠಿಯನ್ನು ಹರಿಸಿ ಅವರನ್ನು ಒಳ್ಳೆಯ ಜ್ಞಾನಿಗಳಾಗಿ ಹೊರಗೆ ಕಾಣಿಸುವಂತೆ ಮಾಡಿ, ಅವರನ್ನು ಬಹಳಜನ ಆಶ್ರಯಿಸುವಂತೆ ಮಾಡುತ್ತಿರುತ್ತದೆ. ಅಷ್ಟೇ ಅಲ್ಲದೆ ಬೋಧಿಸುವುದೆಲ್ಲವೂ ಪರಮಾತ್ಮ ಜ್ಞಾನವಾಗಲಿ ಧರ್ಮವಾಗಲಿ ಇಲ್ಲ ಎನ್ನದಂತೆ ಜಾಗ್ರತೆಪಟ್ಟು, ಜ್ಞಾನ ದೇವರು ಎನ್ನುವ ಪದಗಳನ್ನು ಉಪಯೋಗಿಸುತ್ತಲೇ, ಎಷ್ಟೋ ಆಕರ್ಷಣೀಯವಾದ ಬೋಧನೆಗಳು ಮಾಡಿಸುತ್ತಿರುತ್ತದೆ. ಆ ಬೋಧನೆಗಳಲ್ಲಿ ಶೇಕಡ ಒಂದರಷ್ಟು ಜ್ಞಾನ ಇದ್ದರೆ, 99% ಮಾಯೆಗೆ ಸಂಬಂಧಿಸಿದ ಜ್ಞಾನವೇ ಒಳಗೊಂಡಿರುತ್ತದೆ. ಇದು ಮಾಯೆಗೆ ಸಂಬಂಧಿಸಿದ ಜ್ಞಾನವೆಂದು ಪರಮಾತ್ಮನೊಳಗೆ ಐಕ್ಯ ಮಾಡುವುದು ಅಲ್ಲವೆಂದು ಯಾರು ಗುರುತಿಸಲಾರರು. ಅದೇ ಮಾಯೆಯೊಂದರ ದೊಡ್ಡತನ. ಎಷ್ಟೋ ದೊಡ್ಡ ಆಧ್ಯಾತ್ಮಿಕ ಗುರುವೆಂದರೂ, ಸ್ವಚ್ಛವಾದ ಆಧ್ಯಾತ್ಮಿಕವನ್ನು ಬೋಧಿಸಿದರೂ, ಅವರಲ್ಲಿಯೂ ಸಹ ಕೊನೆಗೆ 95% ಧರ್ಮಗಳು ಇಲ್ಲದ ಮಾಯೆಯೊಂದರ ಬೋಧನೆಯೇ ಇರುತ್ತದೆ. ಹೀಗೆ ಕಾಣಿಸುವ ಗುರುಗಳಲ್ಲಿ ಸಹ ಇದ್ದು ಅವರಿಂದಲೇ ಜ್ಞಾನವೆನ್ನುವಂತೆ, ಧರ್ಮಗಳೆನ್ನುವಂತೆಯೂ ಅಧರ್ಮಗಳನ್ನು ಬೋಧಿಸುವುದರಿಂದ, ದೇವರನ್ನು ತಿಳಿದುಕೊಳ್ಳಬೇಕೆನ್ನುವವರು ಸಹ

ಮಾಯೆಯಲ್ಲಿಯೇ ಸಿಲುಕಿಕೊಂಡು ಪರಮಾತ್ಮನ ಕಡೆ ಪ್ರಯಾಣಿಸದಂತಿದ್ದಾರೆ. ಇರುವ ಪ್ರಜೆಗಳಲ್ಲಿ ಸಾವಿರ ಸಂಖ್ಯೆಯಲ್ಲಿ ಕೆಲವರಿಗೆ ಮಾತ್ರವೇ ಜ್ಞಾನದ ಮೇಲೆ ಇಚ್ಛೆ ಉಂಟಾದಾಗ, ಅವರನ್ನು ಸಹ ಮಾಯೆ ಗುರುಗಳ ರೂಪದಲ್ಲಿದ್ದು ಬೋಧಿಸುತ್ತಲೇ ತನ್ನಕಡೆ ಸೆಳೆದುಕೊಳ್ಳುತ್ತಿದೆ. ಆದ್ದರಿಂದ ಗೀತೆಯಲ್ಲಿ ವಿಜ್ಞಾನ ಯೋಗದಲ್ಲಿ ಮೋಕ್ಷವನ್ನು ಕೋರುವವರಲ್ಲಿ ಕೊನೆಗೆ ಯಾರೋ ನನ್ನನ್ನು ತಿಳಿದುಕೊಳ್ಳುವುದು ಅಂದಿದ್ದಾನೆ. ಮಾಯೆ ಅನೇಕ ಸ್ಥಾನಗಳಲ್ಲಿ ಅನೇಕ ವಿಧಗಳ ಗುರುಗಳನ್ನು ಆವರಿಸಿ ಇರುವುದರಿಂದ ಜ್ಞಾನವನ್ನು ಕೋರುವವರು ಯಾವುದೋ ಒಬ್ಬ ಗುರುವನ್ನು ಆಶ್ರಯಿಸಿ ಮಾಯೆ ಆವರಣದಲ್ಲಿಯೇ ಸೇರಿ ಹೋಗುತ್ತಿದ್ದಾರೆ. ಆದ್ದರಿಂದ ನಿಜವಾದ ಪರಮಾತ್ಮ ಜ್ಞಾನ ಸಿಗಬೇಕೆಂದರೆ ಅನೇಕ ಜನ್ಮಗಳ ಸಂಸ್ಕಾರಗಳಿಂದಲೇ ಲಭಿಸುತ್ತದೆಂದು ಗೀತೆಯಲ್ಲಿ ಹೇಳಿದ್ದಾನೆ. ಅನೇಕ ಅಂದರೆ ನೂರಾರು ಆಗಬಹುದು ಅಥವಾ ಸಾವಿರಾರು ಆಗಬಹುದು ಇಲ್ಲಿ ಕೆಲವರಿಗೊಂದು ಅನುಮಾನಬರಬಹುದು. ಅದು ಏನೆಂದರೆ! ಗುರುಗಳೆಲ್ಲರನ್ನು ಮಾಯೆ ಮೋಸಮಾಡಿ ಭ್ರಮಿಸುವಂತೆ ಮಾಡಿ, ತನ್ನ ಬೋಧನೆ ಬೋಧಿ ಸುತ್ತಿದೆಯೆಂದಾಗ, ಯಾರೂ ಪರಮಾತ್ಮ ಜ್ಞಾನ ಬೋಧಿಸುವವರೇ ಇಲ್ಲದಿರುವಾಗ, ಅನೇಕ ಜನ್ಮಗಳ ನಂತರವಾದರು ಅವರಿಗೆ ಪರಮಾತ್ಮ ಜ್ಞಾನ ಹೇಗೆ ಲಭಿಸುತ್ತದೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ, ಪರಮಾತ್ಮಯೊಂದರ ಜ್ಞಾನ ಧರ್ಮಗಳನ್ನು ನೂರಕ್ಕೆ ನೂರರಷ್ಟು ಬೋಧಿಸುವ ಗುರುಗಳು ಭೂಮಿಮೇಲೆ ಇದ್ದರೆ ಪರಮಾತ್ಮ ಹುಟ್ಟಬೇಕಾದ ಅವಶ್ಯಕತೆಯೇ ಇಲ್ಲ ತಾನೆ! ಹಾಗೆ ತನ್ನ ಧರ್ಮಗಳು ತಿಳಿದು ಬೋಧಿಸುವವರು ಇಲ್ಲದಿರುವು ದರಿಂದ ತಪ್ಪದೆ ಪರಮಾತ್ಮಯೇ ಸ್ವತಃ ಭೂಮಿಮೇಲೆ ಭಗವಂತನಾಗಿ ಹುಟ್ಟಿ ಬೋಧಿಸಬೇಕಾಗಿ ಬರುತ್ತಿದೆ. ಆದ್ದರಿಂದಲೇ ಧರ್ಮಗಳಿಗೆ ಗ್ಲಾನಿ ಏರ್ಪಟ್ಟಾಗ ನಾನು ಜನ್ಮಿಸಿ ನನ್ನ ಧರ್ಮಗಳನ್ನು ತಿಳಿಸುತ್ತೇನೆಂದು ಗೀತೆಯಲ್ಲಿ ದೇವರು ಹೇಳಿದ್ದಾನೆ.

ಧರ್ಮಗಳ ಪರವಾಗಿ ಪರಮಾತ್ಮನೇ ಸ್ವತಃ ಗುರುವಾಗಿ ಉದ್ಭವಿಸಿ, ತನ್ನ ದೈವ ಧರ್ಮಗಳನ್ನು ಪೂರ್ತಿಯಾಗಿ ತಿಳಿಸುವುದರಿಂದ ಮಾಯೆಗೆ ತೊಂದರೆ ಏರ್ಪಟ್ಟು, ಗುರುಗಳ ಮೇಲೆಯೇ ತನ್ನ ಪಟ್ಟು ತಪ್ಪಿಹೋಗುವ ಪರಿಸ್ಥಿತಿ ಏರ್ಪಡುತ್ತದೆ. ಆದ ಕಾರಣ ಅಂತಹ ಪರಿಸ್ಥಿತಿ ಬಾರದಂತೆ ಮಾಯೆಯೂ ಸಹ ಸ್ವತಃವಾಗಿ ಜನ್ಮ ಎತ್ತಿ, ಭಗವಂತನಿಗಿಂತ ದೊಡ್ಡದಾಗಿ ಕಾಣಿಸಿ, ತಾನೇ ಭಗವಂತನೆಂದು ಹೆಸರುವಾಸಿಯಾಗುತ್ತಿರುತ್ತದೆ. ಮಾಯೆ ಅವತಾರ ಭಗವಂತನ ಮುಂದೆ ಅಸಲಾದ ಪರಮಾತ್ಮ ಅವತಾರವು ಸಹ ಕಡಿಮೆಯಾಗಿರುತ್ತದೆ. ಆದ್ದರಿಂದ ನಿಜವಾದ ಭಗವಂತನ ಜ್ಞಾನಿಗಳು ಸಹಿತವು ಗುರುತಿಸಲಾರರು. ಆದರೆ ಮಾಯೆ ಭಗವಂತನನ್ನು ಅಜ್ಞಾನಿಗಳು ಸಹಿತವು ಗುರ್ತಿಸುತ್ತಾರೆ. ಭೂಮಿ ಮೇಲೆ ಧರ್ಮಗಳು ತಿಳಿಯದಿರುವಾಗ, ಅನೇಕ ಜನ್ಮ ಸಂಸ್ಕಾರಪರರಿಗೆ ಧರ್ಮಗಳು ಅವಶ್ಯಕವಾದಾಗ, ಸಾವಿರ ವರ್ಷಗಳಿಗೋ ಅಥವಾ ಲಕ್ಷಗಳ ವರ್ಷಗಳಿಗೋ ಪರಮಾತ್ಮ ಜನ್ಮ ಎತ್ತಬೇಕಾಗಿರುತ್ತದೆ. ಮಾಯೆ ಮಾತ್ರ ಪರಮಾತ್ಮ ಜನ್ಮಕ್ಕಿಂತ ಮುಂದೆ ಹಿಂದೆ ಅವತಾರ ಎತ್ತುವುದೇ ಅಲ್ಲದೆ, ಪರಮಾತ್ಮ ಭಗವಂತನಾಗಿ ಜನ್ಮಿಸಿದಾಗ ತಾನು ಸಹ ಮೂರು ನಾಲ್ಕುಕಡೆ ಜನ್ಮಿಸಿ, ಎಲ್ಲರನ್ನು ತನ್ನಕಡೆ ಆಕರ್ಷಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತದೆ. ಪರಮಾತ್ಮ ಭಗವಂತನಾಗಿ ಯಾವ ದೇಶದಲ್ಲಿ ಹುಟ್ಟುವನೊ, ಮಾಯೆ ಸಹ ಅದೇ ದೇಶದಲ್ಲಿ ಹುಟ್ಟುತ್ತಿದೆ. ಪರಮಾತ್ಮ ಯಾವ ಪ್ರದೇಶದಲ್ಲಿ ಹುಟ್ಟುತ್ತದೋ, ಆ ಪ್ರದೇಶಕ್ಕೆ ಸುತ್ತಮುತ್ತಲು ಮೂರು ಅಥವಾ ನಾಲ್ಕು ಜನ್ಮಗಳು ಹೊಂದಿರುತ್ತದೆ. ಪರಮಾತ್ಮ ಕೇವಲ ಜ್ಞಾನಧರ್ಮಗಳನ್ನೇ ಬೋಧಿಸಿದಾಗ, ಮಾಯೆಯೂ ಸಹ ಧರ್ಮಗಳು ಇಲ್ಲದ ಆಧ್ಯಾತ್ಮಿಕವನ್ನೆ ಆಕರ್ಷಣೀಯವಾಗಿ ಹೇಳುತ್ತಿರುತ್ತದೆ. ತಿನ್ನುವ ಆಹಾರ ರುಚಿಯಾಗಿದ್ದರು ಅದರಲ್ಲಿ ವಿಟಮಿನ್‌ಗಳು ಇಲ್ಲದ ಹಾಗೆ ಮಾಯೆ ಬೋಧಿಸುವುದು ನಿಜಜ್ಞಾನವೇ ಎನ್ನುವಂತಿರುತ್ತದೆ, ಆದರೆ ಅದರಲ್ಲಿ ಧರ್ಮಯುಕ್ತ ಜ್ಞಾನ ಇರುವುದಿಲ್ಲ. ಮಾಯೆ ಪ್ರಪಂಚಕ್ಕೆ ಅಧಿಪತಿಯಾಗಿದೆ. ಆದ್ದರಿಂದ ಪ್ರಪಂಚದಲ್ಲಿನ ಯಾವ ವಿಷಯವಾದರು ತಾನಂದುಕೊಂಡಂತೆ

ಮಾಡುತ್ತದೆ. ಪರಮಾತ್ಮ ಜನ್ಮ ಕೇವಲ ಧರ್ಮಗಳನ್ನೇ ಬೋಧಿಸುವಾಗ, ಮಾಯೆ ತನ್ನದು ನಿಜವಾದ ಜ್ಞಾನವೆನ್ನುವಂತೆ ಬೋಧಿಸುವುದಲ್ಲದೆ ಪ್ರಪಂಚದಲ್ಲಿನ ಯಾವ ಅದ್ಭುತವಾದರು ಮಾಡಿ, ಅದನ್ನು ದೈವಮಹಿಮೆ ಅಂದುಕೊಳ್ಳುವಂತೆ ಭ್ರಮಿಸುವಂತೆ ಮಾಡುತ್ತದೆ. ಬಂಗಾರವನ್ನು ಕಲ್ಲಾಗಿ, ಕಲ್ಲನ್ನು ಬಂಗಾರವಾಗಿ ತೋರಿಸಬಲ್ಲದು. ಇರುವ ವಸ್ತುವನ್ನು ಇಲ್ಲದೆಹೋಗುವಂತೆ, ಇಲ್ಲದ ವಸ್ತುವನ್ನು ಇರುವಂತೆ ಮಾಡುತ್ತದೆ. ರೋಗವನ್ನು ಸೃಷ್ಠಿಸುತ್ತದೆ. ಮತ್ತು ಇಲ್ಲದಂತೆ ಮಾಡುತ್ತದೆ. ಅಮೇರಿಕಾದಲ್ಲಿದ್ದು ಇಂಡಿಯಾದಲ್ಲಿ, ಇಂಡಿಯಾದಲ್ಲಿದ್ದು ಅಮೇರಿಕಾದಲ್ಲಿ ಕಾಣಿಸಬಲ್ಲದು. ಹೇಳುವುದು ಧರ್ಮಗಳು ಅಲ್ಲದಿದ್ದರು ಎಲ್ಲಾ ಧರ್ಮಪ್ರಚಾರವೇ ಮಾಡುವಂತೆ ತಿಳಿಯುತ್ತದೆ. ಎಲ್ಲದಕ್ಕೂ ಅಧಿಪತಿಯಾಗಿ ರುವುದರಿಂದ ಎಷ್ಟು ಕೋಟಿ ಹಣವಾದರು ಸೃಷ್ಠಿಸುತ್ತದೆ. ಎಂಥವರಿಂದಾದರೂ ಪಾದಾಭಿವಂದನೆ ಮಾಡಿಸುತ್ತದೆ. ತಾನೇ ನಿಜ ದೈವವಾಗಿ ಪ್ರತ್ಯಕ್ಷ ದೈವವಾಗಿ ಎಲ್ಲರಿಂದ ಅನಿಸುತ್ತದೆ.

ಪರಮಾತ್ಮ ಭೂಮಿ ಮೇಲೆ ಭಗವಂತನಾಗಿ (ಗುರುವಾಗಿ) ಹುಟ್ಟಿದರೆ ತನ್ನ ಧರ್ಮಗಳ ಪ್ರಕಾರ ತಾನು ನಡೆದುಕೊಳ್ಳುತ್ತಾ, ತನ್ನ ಧರ್ಮಗಳನ್ನೆ ಬೋಧಿಸುವುದು ತನ್ನ ಕೆಲಸವಾದ್ದರಿಂದ ಲಕ್ಷಗಳ ಸಂಖ್ಯೆಯಲ್ಲಿನ ಮನುಷ್ಯರಲ್ಲಿ ಆತನ ಬೋಧನೆಯನ್ನು ಒಬ್ಬರಾದರು ಗುರುತಿಸುತ್ತಾರೆಂಬ ನಂಬಿಕೆಯಿಲ್ಲ. ಯಾರಾದರೂ ಗುರುತಿಸಿ ಸ್ವಲ್ಪ ನಂಬಿಕೆ ಏರ್ಪಟ್ಟರೂ ಅವನ ತಲೆಯಲ್ಲಿನ ಮಾಯೆ ಯಾವುದೋ ಒಂದು ವಿಧವಾಗಿ ಅದನ್ನು ನಂಬಿಕೆ ಇಲ್ಲದಂತೆ ಮಾಡುತ್ತದೆ. ಮಾಯೆಯನ್ನು ಸೃಷ್ಠಿಸಿದ ಪರಮಾತ್ಮ ಮಾಯೆ ಮುಂದೆ ಕಡಿಮೆಯಾಗಿ ಕಾಣಿಸುವುದೇನೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಪರಮಾತ್ಮ ಮಾಯೆಗಿಂತ ಎಂದಿಗೂ ದೊಡ್ಡವನೇ. ಆದರೆ ಪರಮಾತ್ಮ ಭೂಮಿಮೇಲೆ ಜನ್ಮಿಸಿ ಭಗವಂತನಾದಾಗ ಮಾತ್ರ ಮಾಯೆಗಿಂತ ಬಲಹೀನನೇ! ಆದ್ದರಿಂದ ಪರಮಾತ್ಮನೇ ಸ್ವತಃವಾಗಿ ಶ್ರೀಕೃಷ್ಣನಾಗಿ ಹುಟ್ಟಿದ ಸಮಯದಲ್ಲಿ ಆತನಿಗೂ ಸಹ ಶತ್ರುಗಳನ್ನು ಏರ್ಪಡಿಸಿ ಕಂಸನಿಂದ ತೆಗಳಿಸುವುದೇ ಅಲ್ಲದೆ

ಅನೇಕ ಸಮಯಗಳಲ್ಲಿ ಅನೇಕ ತೊಂದರೆಗಳಿಗೆ ಪಾಲುಮಾಡಿದೆ. ಜಾರನಾಗಿ, ಚೋರನನ್ನಾಗಿ ತೋರಿಸಿದೆ. ಭೂಮಿ ಮೇಲೆ ಮಾಯೆಗಿಂತ ಭಗವಂತನು ಬಲಹೀನನಾಗಿ ಇದು ನನ್ನ ರಾಜ್ಯ ಅಲ್ಲ, ನನ್ನ ರಾಜ್ಯ ಬೇರೆ ಇದೆ. ನನ್ನ ರಾಜ್ಯಕ್ಕೆ ರಾಜನು ನಾನೇ ಭಗವಂತನು ಅಂದಿದ್ದಾನೆ. ಅಷ್ಟೇ ಅಲ್ಲದೇ ಇದು ಜನನ ಮರಣಗಳಿರುವ ಸ್ಥಳ, ಇದಕ್ಕೆ ಅಧಿಪತಿ ಮಾಯೆ. ಜನನ ಮರಣಗಳು ಇಲ್ಲದ ಮತ್ತೊಂದು ಸ್ಥಳ ಇದೆ, ಅಲ್ಲಿಗೆ ಸೇರಿರೆಂದು ಅಲ್ಲಿ ನಾನು ಹೊರತು ಯಾರು ಇಲ್ಲವೆಂದು ಸಹ ಹೇಳಿದ್ದಾನೆ.

ಮಾಯೆ ಸಹ ಭಗವಂತನಂತೆ ಜನ್ಮಿಸುತ್ತಿದೆ ಎನ್ನುತ್ತಿದ್ದಾರಲ್ಲವೆ! ಪರಮಾತ್ಮ ಭಗದಿಂದ ಸಜೀವವಾಗಿ ಹೊರಗೆ ಬರುತ್ತಿದ್ದಾನೆ ಆದ್ದರಿಂದ ಆತನನ್ನು ಭಗವಂತನು ಎನ್ನಬಹುದು. ಮಾಯೆ ಯಾವ ವಿಧವಾಗಿ ಜನ್ಮ ತೆಗೆದುಕೊಳ್ಳುತ್ತಿರುವುದು ಸಾಧಾರಣ ಮಾನವರಂತೆಯಾ ಅಥವಾ ಭಗದಿಂದ ಬರುವ ಭಗವಂತನಾಗಿಯಾ? ಎಂದು ಕೆಲವರು ಕೇಳಬಹುದು ಅದಕ್ಕೆ ನಮ್ಮ ವಿವರವೇನೆಂದರೆ! ಮಾಯೆ ಭಗವಂತನಂತೆ ಚಲಾವಣೆ ಆಗುತ್ತದೆ, ಆದರೆ ಭಗದಿಂದ ಸಜೀವವಾಗಿ ಹುಟ್ಟಲಿಲ್ಲ, ಆದ್ದರಿಂದ ಭಗವಂತನು ಅಲ್ಲ. ಹಾಗೆಂದು ಸಾಧಾರಣ ಮನುಜರಂತೆ ಸಹ ಹುಟ್ಟಲಿಲ್ಲ. ಮಾಯೆ ತಾಯಿಗರ್ಭ ದೊಳಗಿನಿಂದಾಗಲಿ, ಗರ್ಭದ ಹೊರಗಾಗಲಿ ಜನ್ಮಹೊಂದಲಿಲ್ಲ. ಹಾಗಲ್ಲದೆ ಈಗಲ್ಲದೆ ಯಾವ ವಿಧವಾಗಿ ಜನ್ಮಿಸುವುದೆಂದರು ಭೂಮಿಮೇಲೆ ಪರಮಾತ್ಮ ಜನ್ಮಿಸುವ ಅವಕಾಶವಿರುವ ಪ್ರಾಂತವನ್ನು ಮಾಯೆ ಮೊದಲೇ ಊಹಿಸಬಲ್ಲದು. ಅಂತಹ ಪ್ರಾಂತವನ್ನು ತಿಳಿದುಕೊಂಡ ಮಾಯೆ, ಆ ಪ್ರಾಂತದ ಸುತ್ತಮುತ್ತಲಿರುವ ಸಾಧಾರಣ ಮನುಷ್ಯರಲ್ಲಿ ಒಬ್ಬನನ್ನು ಗುರುತಿಸಿ ಆರಿಸಿಕೊಂಡು ಅವನಲ್ಲಿ ಸ್ವಲ್ಪ ಸ್ವಲ್ಪವಾಗಿ ಪ್ರವೇಶಿಸಿ ಪೂರ್ತಿಯಾಗಿ ತುಂಬಿಕೊಳ್ಳುತ್ತದೆ. ಹಾಗೆ ಅವನಲ್ಲಿ ಪೂರ್ತಿಯಾಗಿ ತುಂಬಿಕೊಳ್ಳುವುದಕ್ಕೆ ಆರು ತಿಂಗಳಿಂದ ವರ್ಷದ ಕಾಲವಾದರು ಆಗುತ್ತದೆ. ಹಾಗೆ ಪೂರ್ತಿ ಪ್ರವೇಶಿಸಿದ ಅವನಿಂದ ತನ್ನ ಪೂರ್ತಿ ಸ್ಥಾನದ ಕಾರ್ಯಗಳು ಪ್ರಾರಂಭಮಾಡುತ್ತದೆ. ಮಾಯೆ ಪ್ರವೇಶಿಸುವವನು ಬಡವನಾಗಬ ಹುದು, ಯುಕ್ತವಯಸ್ಕನಾಗಬಹುದು, ಅಥವಾ ಮುದುಕ ನಾಗಬಹುದು. ಯಾರಲ್ಲಿ

ಮಾಯೆ ಪ್ರವೇಶಿಸಿದರೂ ಅದನ್ನು ಮಾಯೆಯೊಂದರ ಜನ್ಮ ಅನ್ನಬಹುದು. ಮಾಯೆ ಪ್ರವೇಶಿಸಿದ ವ್ಯಕ್ತಿಗೆ ತನ್ನಲ್ಲಿ ಮಾಯೆ ಪೂರ್ತಿಸ್ಥಾನದಲ್ಲಿ ಇದೆಯೆಂದು ಸ್ವಲ್ಪವೂ ತಿಳಿಯುವುದಿಲ್ಲ. ಆದ್ದರಿಂದ ಮೊದಲು ತನ್ನ ಮೂಲಕ ನಡೆಯುವ ಕೆಲವು ಮಹಿಮೆಗಳು ಹೇಗೆ ನಡೆದಿವೆಯೋ ತನಗೇ ತಿಳಿಯದಂತಿರುತ್ತದೆ. ನಂತರ ತನಗೇನೋ ಮಹಿಮೆ ಇದೆಯೆಂದು, ತಾನು ಎಲ್ಲರಂತೆ ಸಾಮಾನ್ಯನು ಅಲ್ಲವೆಂದು, ತಾನು ಪ್ರತ್ಯೇಕವಾದ ಮನುಷ್ಯನೆಂದು ಅಂದುಕೊಳ್ಳುತ್ತಾನೆ. ಹೀಗೆ ಮಾಯೆ ಕೆಲವರಲ್ಲಿ ಪ್ರವೇಶಿಸುತ್ತಿದೆ, ಆದರೆ ಹೊಸ ಶರೀರದಲ್ಲಿ ಜನ್ಮಿಸಲೂ ಇಲ್ಲ, ಪರಮಾತ್ಮನಂತೆ ಹುಟ್ಟಲೂ ಇಲ್ಲ, ಆದ್ದರಿಂದ ಮಾಯೆ ಎಂದಿಗೂ ಭಗವಂತನು ಅಲ್ಲ. ಭಗವಂತನಂತೆ ಕಾಣಿಸಿದರೂ ನಿಜವಾಗಲು ಭಗವಂತನು ಅಲ್ಲವೆಂದು ತಿಳಿಯಬೇಕು.

ಇನ್ನೊಂದು ವಿಚಿತ್ರವೇನೆಂದರೆ ಮಾಯೆ ಜನ್ಮಿಸಿದರೆ ಎರಡು ಮೂರು ಕಡೆಯಾದರೂ ಅಥವಾ ಒಂದುಕಡೆಯಾದರೂ ಇದ್ದು, ತನ್ನ ಮಹಿಮೆಯನ್ನು ನೂರಕ್ಕೆ ನೂರುಪಾಲು ತೋರಿಸುತ್ತದೆ. ಆದರೆ ಪರಮಾತ್ಮ ಜನ್ಮಿಸಿ ಭೂಮಿಮೇಲೆ ಇರುವಾಗ ಶರೀರದಲ್ಲಿನ ಜೀವಾತ್ಮವಾಗಿ, ಆತ್ಮವಾಗಿ, ಪರಮಾತ್ಮನಾಗಿದ್ದು, ಕೆಲವು ಸಮಯಗಳಲ್ಲಿ ಕೇವಲ ಸಾಧಾರಣ ಜೀವಿಯಾಗಿ ಕಷ್ಟಸುಖಗಳನ್ನು ಅನುಭವಿಸುತ್ತಿದ್ದಾನೆ. ಕೆಲವು ಸಮಯಗಳಲ್ಲಿ ಮಾತ್ರ ಆತ್ಮವಾಗಿ ಅನುಭವಗಳಿಗೆ ಅತೀತವಾಗಿರುವನು. ಪ್ರತ್ಯೇಕಿಸಿ ಕೆಲವು ಸಮಯಗಳಲ್ಲಿ ಮಾತ್ರ ಆದಿಕರ್ತನಾದ ಪರಮಾತ್ಮನಾಗಿ ಇರಬಲ್ಲನು. **ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಜೀವಿಯಾಗಿ, ಆತ್ಮವಾಗಿ, ಪರಮಾತ್ಮವಾಗಿ ಮೂರುಸ್ಥಾನಗಳಲ್ಲಿ ಮಾತನಾಡಿದಂತೆ ಅರ್ಥವಾಗುತ್ತಿದೆ.**

ಪರಮಾತ್ಮ ಜನ್ಮದಲ್ಲಿರುವಾಗ ಜೀವಿಯಾಗಿರುವ ಸಮಯದಲ್ಲಿ ಮಾಯೆ ಹಿಂಸಿಸುತ್ತದೆ, ಆತ್ಮವಾಗಿರುವ ಸಮಯದಲ್ಲಿ ದ್ವೇಷಿಸುತ್ತದೆ ಮತ್ತು ದೂಷಿಸುತ್ತದೆ, ಪರಮಾತ್ಮನಾಗಿ ಇರುವಾಗಾದರೆ ಆತನ ಹತ್ತಿರ ಪೂರ್ತಿ ಭಕ್ತಿ ವಿನಯಹೊಂದಿ ಆತನ ಮಾತಿನ ಪ್ರಕಾರ ನಡೆದುಕೊಳ್ಳುತ್ತದೆ. ಶ್ರೀಕೃಷ್ಣ ಜನ್ಮದಲ್ಲಿ ತಾವರೆ ಎಲೆಯ

ಮೇಲೆ ನೀರಂಟದಂತೆ ಕರ್ಮ ಅಂಟದಂತೆ ಇದ್ದೇನೆಂದು ಜೀವಿಯಾಗಿ, ಶರೀರದಲ್ಲಿ ಅಗ್ನಿಯಾಗಿ ತಿಂದ ಆಹಾರವನ್ನು ಜೀರ್ಣ ಮಾಡುತ್ತಿದ್ದೇನೆಂದು ಆತ್ಮವಾಗಿ, ಕ್ಷಯವನ್ನು ವೃದ್ಧಿಯನ್ನು ಹೊಂದಿಸುವ ಕಾಲನು ನಾನೇ ಎಂದು, ಎಲ್ಲೆಗಳಿಲ್ಲದ ವಿಶ್ವರೂಪವನ್ನು ನನ್ನ ಅನುಗ್ರಹದಿಂದ ನಿನಗೆ ತೋರಿಸಿದ್ದೇನೆಂದು ಪರಮಾತ್ಮನಾಗಿ ಮಾತನಾಡಿದ ಸಂದರ್ಭಗಳು ಇವೆ. ಪರಮಾತ್ಮ ಅಧೀನದಲ್ಲಿರುವ ಮಾಯೆ ಪರಮಾತ್ಮ ಬಳಿ ಮಾತ್ರ ಪೂರ್ತಿ ಭಕ್ತಿಯಿಂದ ವಿನಯವಾಗಿ ಇದ್ದೂ, ಉಳಿದವರ ಬಳಿ ತನ್ನ ಕರ್ತವ್ಯವನ್ನು ತಾನು ನಿರ್ವರ್ತಿಸುತ್ತಿದೆ. ಅಷ್ಟೇ ಅಲ್ಲದೆ ಜ್ಞಾನ, ಯೋಗ, ಧರ್ಮಗಳಿಗಿಂತ ಅತೀತನಾಗಿರುವ ಪರಮಾತ್ಮನನ್ನು ಅಥವಾ ಭಗವಂತನನ್ನು ಪೂರ್ತಿ ವಿಶ್ವಾಸಿಸಿ ಆರಾಧಿಸುವವನನ್ನು ಮಾಯೆ ಏನು ಮಾಡುವುದಿಲ್ಲ. ಅವನು ಪೂರ್ತಿ ಅಧಿಪತಿಯಾದ ಪರಮಾತ್ಮನನ್ನೇ ನೇರವಾಗಿ ನಂಬಿದವನು, ಆದ್ದರಿಂದ ಮಾಯೆ ಅವನ ಬಗ್ಗೆ ಏನು ಮಾಡಲಾರದು. ಅಂತಹವನು ಆ ಜನ್ಮದಲ್ಲಿಯೇ ಮೋಕ್ಷ ಪಡೆಯಬಹುದು. ಆದ್ದರಿಂದಲೇ ಗೀತೆಯಲ್ಲಿ ಪರಮಾತ್ಮ **'ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿತೆ'** ಯಾರಾದರೆ ನನ್ನನ್ನು ಆರಾಧಿಸುತ್ತಿದ್ದಾರೋ ಅವರು ಮಾಯೆಯಿಂದ ಸುಲಭವಾಗಿ ದಾಟಿ ಹೋಗುತ್ತಾರೆ ಅಂದಿದ್ದಾನೆ. ಆದ್ದರಿಂದ ಮಾಯೆಯನ್ನು ತಯಾರು ಮಾಡಿಟ್ಟಿದ ಪರಮಾತ್ಮನನ್ನೇ ಆರಾಧಿಸಬೇಕು. ಹಾಗೆ ಆರಾಧಿಸದ ಪಕ್ಷದಲ್ಲಿ ಜಗತ್ತಿನ ಮೇಲೆ ಸರ್ವ ಹಕ್ಕುಗಳು ಹೊಂದಿದ ಮಾಯೆ, ಜಗತ್ತಿನಲ್ಲಿ ತಾನೇ ನಿಜವಾದ ದೈವವಾಗಿ ಸಹ ಕಾಣಿಸುತ್ತದೆ. ಪರಮಾತ್ಮ ವಿಭೂತಿಗಳು ಎಷ್ಟು ದೊಡ್ಡವೋ, ಅದಕ್ಕಿಂತ ದೊಡ್ಡವಾಗಿ ಭೂಮಿಮೇಲೆ ಮಾಯೆಯೊಂದರ ವಿಭೂತಿಗಳು ಕಾಣಿಸುತ್ತವೆ. ನಾವು ಎಷ್ಟು ಹೇಳಿದರೂ ಪರಮಾತ್ಮ ಜ್ಞಾನ ಅನೇಕ ಜನ್ಮಗಳ ಸಂಸ್ಕಾರ ಇರುವವರಿಗೆ ಅರ್ಥವಾಗುತ್ತದೆ. ಅವರಲ್ಲಿ ಇನ್ನೂ ಸಂಸ್ಕರಿಸಲ್ಪಟ್ಟವರಿಗೆ ಭಗವಂತನು ಅರ್ಥವಾಗುತ್ತಾನೆ. ಎಷ್ಟು ಅರ್ಥವಾದರೂ ನಾನೇ ದೊಡ್ಡದೆಂಬ ಮಾಯೆ ಮಾತುಗಳು ಕೇಳದವರು ಅಪರೂಪವಾಗಿರುತ್ತಾರೆ. ಗೀತೆಯ ಕೊನೆಯಲ್ಲಿ ಭಗವಂತನು 'ಮನ್ಮನಾಭವ ಮದ್ಭಕ್ತೋ ಮದ್ಯಾಜೀಮಾಂ ನಮಸ್ಕುರು' ನನ್ನನ್ನೇ ನಿನ್ನ ಮನಸ್ಸಿನಲ್ಲಿ ದೊಡ್ಡದಾಗಿ ಇಟ್ಟುಕೊ, ನನಗೆ

ಭಕ್ತಿಯಿಂದಿರು, ನನ್ನನ್ನೇ ನಮಸ್ಕರಿಸು, ನನ್ನಲ್ಲಿಯೇ ಬೆರೆತು ಹೋಗುತ್ತೀಯಾ ಎಂದಾಗ! ಮಾಯೆಯೂ ಸಹ ನನ್ನನ್ನೇ ದೊಡ್ಡದಾಗಿಟ್ಟುಕೋ, ನನಗೆ ಭಕ್ತಿಯಾಗಿರು, ನನ್ನನ್ನೇ ನಮಸ್ಕರಿಸು, ನಿನಗೆ ಯಾವ ಕಷ್ಟಗಳು ಬಾರದಂತೆ ಯಾವ ಲೋಪ ಇಲ್ಲದಂತೆ ನೋಡುತ್ತೇನನ್ನುತ್ತದೆ. ಯಾವುದು ಕೇಳುತ್ತೀರೋ ಯಾವಕಡೆ ಹೋಗುತ್ತೀರೋ ನಿಮ್ಮ ಇಷ್ಟ.

# ಮನಸ್ಸಿಗೆ ಆಕಾರವಿದೆಯಾ?

ನಮ್ಮ ಶರೀರದಲ್ಲಿ ಮನಸ್ಸು ಎಷ್ಟೋ ಪ್ರಾಮುಖ್ಯವಾದುದು. ಅದನ್ನು ವೇದಾಂತಿಗಳು ಎಷ್ಟೋ ವಿಧಗಳಾಗಿ ವರ್ಣಿಸಿದ್ದಾರೆ. ಮನಸ್ಸು ಸಿಗುವುದು ಅಲ್ಲವೆಂದು ಪಾದರಸಕ್ಕೆ ಕೆಲವರು ಹೋಲಿಸಿದಾಗ, ವಾಯುವೇಗ ಇರುವುದೆಂದು ರೆಕ್ಕೆಗಳಕುದುರೆಗೆ ಕೆಲವರು ಹೋಲಿಸಿದ್ದಾರೆ. ಮನಸ್ಸನ್ನು ಬಂಧಿಸಲಾರೆವೆಂದು, ವಾಯುವನ್ನು ಮೂಟೆ ಕಟ್ಟುವುದಕ್ಕೆ ಸಮಾನವಾಗಿ ಮನಸ್ಸನ್ನು ಬಂಧಿಸುವುದನ್ನು ಹೋಲಿಸಿದಾಗ, ನೀಚವಾದ ಯೋಚನೆಗಳು ಮಾಡುವುದೆಂದು ಹಂದಿಗೆ, ಚಂಚಲವಾದುದೆಂದು ನಾಯಿಯಾಗಿ, ಕೋತಿಯಾಗಿ, ಬಗ್ಗದಿರುವುದು ಬಲವಾದುದೆಂದು ಆನೆಯಾಗಿ ಎಷ್ಟೋ ಜನ ಹೋಲಿಸಿ ಹೇಳಿದ್ದಾರೆ. ಎಷ್ಟು ವಿಧಗಳು ಹೇಳಿದರು ಅವೆಲ್ಲವೂ ಹೋಲಿಕೆಗಳೇಯಾಗಲಿ ವಾಸ್ತವರೂಪಗಳು ಅಲ್ಲ. ಪ್ರಕೃತಿಯಿಂದ ಕೂಡಿದ ಆತ್ಮ ಜೀವಾತ್ಮಗಳಿಗೇ ರೂಪವಿರುವಾಗ ಪ್ರಕೃತಿಯಿಂದ ತಯಾರಾದ ಮನಸ್ಸಿಗೆ ಆಕಾರ ತಪ್ಪದೆ ಇರುತ್ತದೆ. ಮನೋ ರೂಪವನ್ನು ಕುರಿತು ತಿಳಿದುಕೊಳ್ಳುವುದು ಎಲ್ಲರಿಗೂ ಅವಶ್ಯಕವೇ. ಆಧ್ಯಾತ್ಮಿಕ ವಿದ್ಯೆಯಲ್ಲಿ ಎಷ್ಟೋ ಪ್ರಾಧಾನ್ಯತೆ ಇರುವ ಮನಸ್ಸನ್ನು ಕುರಿತು ಈಗ ತಿಳಿದುಕೊಳ್ಳೋಣ.

ನಮ್ಮ ಶರೀರದಲ್ಲಿನ ಮನಸ್ಸಿನ ಕೆಲಸ ಏನೆಂದರೆ! ಅಂತರೇಂದ್ರಿಯ ವಿಷಯಗಳನ್ನು ಹೊರಗಿನ ಇಂದ್ರಿಯಗಳಿಗೆ, ಬಾಹ್ಯೇಂದ್ರಿಯ ವಿಷಯಗಳನ್ನು

ಒಳಗಿನ ಇಂದ್ರಿಯಗಳಿಗೆ ತಿಳಿಸುವುದು. ಆಗಿರುವಾಗ ಮನಸ್ಸು ಒಳಗಿನ ಇಂದ್ರಿಯಗಳಿಂದ ಹೊರಗಿನ ಇಂದ್ರಿಯಗಳವರೆಗೂ, ಹೊರಗಿನ ಇಂದ್ರಿಯ ಗಳಿಂದ ಒಳಗಿನ ಇಂದ್ರಿಯಗಳವರೆಗೂ ವ್ಯಾಪಿಸಿದೆ. ಇದರಿಂದ ಹೊರಗಿನ ಇಂದ್ರಿಗಳ ವರೆಗೂ ಮನಸ್ಸಿನೊಂದರ ಚಿತ್ರವನ್ನು ಚಿತ್ರೀಕರಿಸಿಕೊಂಡು ನೋಡಿದಲ್ಲಿ ಶರೀರ ಆಕೃತಿಯೇ ಮನಸ್ಸು ಸಹ ಹೊಂದುತ್ತಿದೆ. ಶರೀರವೆಲ್ಲಾ ವ್ಯಾಪಿಸಿದ ಆತ್ಮ ಶರೀರ ಆಕೃತಿಯನ್ನು ಹೊಂದಿದಂತೆ, ಮನಸ್ಸು ಸಹ ಶರೀರ ಆಕೃತಿಯನ್ನು ಹೋಲಿದೆ. ಇದರಿಂದ ಶರೀರದಲ್ಲಿ ಆತ್ಮ ಮತ್ತು ಮನಸ್ಸು ಒಂದೇ ಆಕೃತಿಯನ್ನು ಹೋಲಿವೆ ಎಂದು ತಿಳಿಯುತ್ತಿದೆ.

ಶರೀರಕ್ಕೆ ನಿದ್ರೆ ಎಚ್ಚರಗಳೆಂಬ ಸ್ಥಿತಿಗಳು ಮನಸ್ಸನ್ನನುಸರಿಸಿ ಉಂಟಾಗುತ್ತಿರುತ್ತವೆ. ಶರೀರದಲ್ಲಿನ ಜೀವಿಗಾಗಲಿ, ಆತ್ಮಕ್ಕಾಗಲಿ ನಿದ್ರೆ ಎಚ್ಚರಗಳು ಇಲ್ಲ. ಆ ಎರಡು ಯಾವಾಗಲು ಒಂದೇ ಸ್ಥಿತಿಹೊಂದಿರುತ್ತವೆ. ಮನಸ್ಸು ಮಾತ್ರ ನಿದ್ರೆ ಎಚ್ಚರಗಳನ್ನು ಹೊಂದಿದೆ. ಮನಸ್ಸು ಎಚ್ಚರದಲ್ಲಿ ಶರೀರವೆಲ್ಲಾ ವ್ಯಾಪಿಸಿದ್ದು ಶರೀರ ಆಕೃತಿಯನ್ನು ಹೋಲಿರುತ್ತದೆ. ನಿದ್ರೆಯಲ್ಲಿ ಅದೇ ರೀತಿ ಇರುವುದಿಲ್ಲ. ಎಚ್ಚರದಲ್ಲಿ ಶರೀರ ಆಕೃತಿಹೊಂದಿ ಆತ್ಮನಂತೆ ಸಮಾನವಾಗಿರುವ ಮನಸ್ಸು, ನಿದ್ರೆಯಲ್ಲಿ ಆಕೃತಿಯನ್ನು ಕಳೆದುಕೊಂಡು ಒಂದು ಬಿಂದುವಾಗಿ ಏರ್ಪಡುತ್ತಿದೆ. ಎಚ್ಚರ ಬಂದ ತಕ್ಷಣ ಶರೀರವೆಲ್ಲ ವ್ಯಾಪಿಸಿ ಶರೀರ ಆಕೃತಿಯನ್ನು ಹೊಂದುತ್ತಿದೆ. ಎಚ್ಚರದಲ್ಲಿ ಶರೀರ ಆಕೃತಿಯನ್ನುಹೊಂದಿರುವ ಮನಸ್ಸು ಪುನಃ ನಿದ್ರೆಯಲ್ಲಿ ಬಿಂದುವಾಗಿ ಬದಲಾಗುತ್ತಿದೆ. ಗೋಧಿಹಿಟ್ಟನ್ನು ನೆನೆಸಿ ಮುದ್ದೆ ಮಾಡಿದಾಗ ಒಂದು ಉಂಡೆಯಾಗಿದ್ದು ಚಪಾತಿಯಾಗಿ ಉಜ್ಜಿದಾಗ ಅಗಲವಾಗಿ ಬದಲಾದಂತೆ ಪುನಃ ಚಪಾತಿಯಾಗಿ ಉಜ್ಜಿರುವುದನ್ನು ಮುದ್ದೆಯಾಗಿ ಕಲಿಸಿದರೆ ಉಂಡೆಯಾಗಿ ತಯಾರಾದಂತೆ, ಮನಸ್ಸು ಒಂದು ಬಿಂದುವಾಗಿ ನಿದ್ರೆಯಲ್ಲಿದ್ದು ಎಚ್ಚರದಲ್ಲಿ ಅಗಲವಾಗಿ ವಿಕಸಿಸಿಕೊಂಡು ಶರೀರವೆಲ್ಲಾ ವ್ಯಾಪಿಸಿ ಶರೀರಾಕೃತಿ ಯನ್ನು ಹೋಲುತ್ತಿದೆ.

ಎಚ್ಚರದಲ್ಲಿ ಶರೀರವೆಲ್ಲಾ ವ್ಯಾಪಿಸಿದ ಮನಸ್ಸು ನಿದ್ರೆಹೋಗುವಾಗ ಶರೀರ ಅವಯವಗಳಿಂದ ಮುದುರಿಕೊಳ್ಳುವುದಕ್ಕೆ ಪ್ರಾರಂಭಮಾಡುತ್ತದೆ. ಹಾಗೆ ಮನಸ್ಸು ಮುದುರಿಕೊಳ್ಳುವಾಗ ಕೈಯಲ್ಲಿನ ವಸ್ತುವು ಜಾರಿಹೋಗುವುದೋ, ಕುಳಿತುಕೊಂಡರೆ ಹಿಡಿತ ತಪ್ಪಿಹೋಗುವುದೋ ನಡೆಯುತ್ತಿರುತ್ತದೆ. ಆದ ಕಾರಣ ನಿದ್ರೆಬಂದವರು ಕುಳಿತುಕೊಂಡಾಗ ತೂಗುವುದು ನಡೆಯುತ್ತಿರುತ್ತದೆ. ಹಾಗೆಯೇ ಕೈ ಸ್ಪರ್ಶವನ್ನು ಗ್ರಹಿಸದೆ ಕೈವರೆಗಿರುವ ಮನಸ್ಸು ಮುದುರಿಕೊಳ್ಳುತ್ತಿರುತ್ತದೆ. ಆದ ಕಾರಣ ಕೈಯಲ್ಲಿ ಹಿಡಿದುಕೊಂಡ ವಸ್ತುವು ಕೈಜಾರಿಹೋಗುತ್ತದೆ. ಹಾಗೆಯೇ ನಿದ್ರೆ ಬಂದಾಗ ಡ್ರೈವಿಂಗ್ ಮಾಡುವವನೊಂದರ ನೋಟವನ್ನು ಗ್ರಹಿಸಿದರು, ಅಲ್ಲಿಂದ ಮನಸ್ಸು ಸಂಕುಚಿಸುವುದರಿಂದ ಮುಂದೇನು ಇರುವುದು ಬುದ್ಧಿಗೆ ತಿಳಿಯದೆ ಹೋಗುವುದರಿಂದ ಅಪಘಾತಗಳು ಸಹ ನಡೆಯುತ್ತಿರುತ್ತವೆ. ಹೀಗೆ ನಿದ್ರೆಹೋಗುವುದಕ್ಕೆ ಪ್ರಾರಂಭ ಮಾಡುವಾಗ ಶರೀರೇಂದ್ರಿಯಗಳಿಂದ ಮನಸ್ಸು ಸಂಕುಚಿಸಿ ತನ್ನ ಸ್ವಸ್ಥಾನವಾದ ಬ್ರಹ್ಮನಾಡಿಯಲ್ಲಿರುವ ಮೆದಳಿನಲ್ಲಿರುವ ಪಿಟ್ಯೂಟರಿ ಗ್ರಂಥಿ ಹತ್ತಿರ ಬಿಂದುವಾಗಿ (ಕುಪ್ಪೆಯಾಗಿ) ಬದಲಾಗುತ್ತಿದೆ. ಆದ್ದರಿಂದ ನಿದ್ರೆಹೋಗುವವರು ತಮ್ಮತಮ್ಮ ಕೆಲಸಗಳನ್ನು ಬಿಟ್ಟು ಮಲಗುತ್ತಾರೆ. ಹಾಗೆ ಆಗದೆಹೋದರೆ ಇಂದ್ರಿಯ ವಿಷಯಗಳು ಒಳಗೆ ಸೇರದೆ ಮಾಡುತ್ತಿರುವ ಕೆಲಸ ಕೆಟ್ಟುಹೋಗುವುದು, ಅಪಘಾತಗಳು ನಡೆಯುವುದು ಉಂಟಾಗುತ್ತದೆ. ನಿದ್ರೆಹೋದವರ ಅವಯವಗಳು ಕೆಲಸಮಾಡದೆ ಬಿದ್ದಿರುತ್ತವೆ. ಏಕೆಂದರೆ ಒಳಗಿನ ಆಜ್ಞೆಗಳು ಇಂದ್ರಿಯಗಳಿಗೆ ಇಲ್ಲ. ಹಾಗೆಯೇ ನಿದ್ರೆಯಲ್ಲಿ ಬುದ್ಧಿ ಯೋಚನೆಗಳು ಸಹ ಇರುವುದಿಲ್ಲ. ಏಕೆಂದರೆ ಹೊರಗಿನ ಇಂದ್ರಿಯ ವಿಷಯಗಳು ಒಳಗೆ ಬರುವುದಿಲ್ಲ. ಹೊರಗಿನ ಒಳಗಿನ ಅನುಬಂಧವಾಗಿ (ಕನೆಕ್ಷನ್) ಇರುವ ಮನಸ್ಸು ಇಲ್ಲದಿರುವಾಗ ಹೊರಗಿನ ಒಳಗಿನ ಇಂದ್ರಿಯಗಳಿಗೆ ಕೆಲಸವಿಲ್ಲದೆ ವಿಶ್ರಾಂತಿ ಇರುತ್ತದೆ. ಅದನ್ನೇ ನಿದ್ರೆ ಎನ್ನುತ್ತಾರೆ. ಎಚ್ಚರದಲ್ಲಿ ಮನಸ್ಸು ತನ್ನ ಕೇಂದ್ರದಿಂದ ವಿಕಸಿಸಿಕೊಂಡು ಎಲ್ಲಾ ಇಂದ್ರಿಯಗಳವರೆಗೂ ಹರಡಿದ್ದು, ಅವುಗಳ ವಿಷಯಗಳು ಒಳಗೂ, ಒಳಗಿನ ವಿಷಯಗಳು ಹೊರಗೆ ತಿಳಿಸುತ್ತಿರುತ್ತದೆ. ಎಲ್ಲಾ ಭಾಗಗಳಿಗೂ ಮನಸ್ಸಿನ ಮೂಲಕ ಕೆಲಸ ಉಂಟಾದ ಸ್ಥಿತಿಯನ್ನೇ ಎಚ್ಚರ ಎನ್ನುತ್ತಿದ್ದೇವೆ.

ಈಗ ಮನಸ್ಸಿಗೆ ಆಕಾರ ಇದೆಯೆಂದು ಅರ್ಥವಾಗಿದೆ ಅಂದುಕೊಳ್ಳುತ್ತೇವೆ. ಈಗಲೂ ಕೆಲವರು ಅಮೋದಿಸಿದರೂ, ಕೆಲವರು ಅರ್ಥವಾಗದೆ ಮನಸ್ಸಿಗೆ ಆಕಾರವಿಲ್ಲವೆಂದು ವಾದಿಸುತ್ತಿದ್ದಾರೆ. ಅಂಥವರ ಬುದ್ಧಿಯೊಂದರ ಆಕಾರ ಮಂದವಾಗಿ ಇದೆಯೆಂದು ಅಂದುಕೊಳ್ಳುತ್ತೇವೆ.

**ಗಮನಿಕೆ :–** ಕೆಲವರ ಮನಸ್ಸು ನಿದ್ರೆಯೊಳಗೆ ವೇಗವಾಗಿ ಹೋಗುತ್ತದೆ. ಆದರೆ ಎಚ್ಚರಿಕೆಯೊಳಗೆ ಅವರ ಮನಸ್ಸು ಆಲಸ್ಯವಾಗಿ ಬರುತ್ತದೆ. ಕೆಲವರಿಗೆ ಮನಸ್ಸು ನಿದ್ರೆಯೊಳಗೆ ಹೋಗುವಾಗ ಆಲಸ್ಯವಾಗಿ ಹೋಗುತ್ತದೆ. ಆದರೆ ಅಂಥವರಿಗೆ ಅವರ ಮನಸ್ಸು ವೇಗವಾಗಿ ಎಚ್ಚರಿಕೆಯೊಳಗೆ ಬರುತ್ತದೆ.

# ಆತ್ಮಕ್ಕೆ ಆಕಾರವಿದೆಯಾ?

ಪ್ರತಿ ಜೀವರಾಶಿ ಶರೀರದಲ್ಲಿಯೂ ಜೀವಿಯಜೊತೆ ಆತ್ಮ, ಪರಮಾತ್ಮಗಳು ಇವೆ. ಪರಮಾತ್ಮ ಶರೀರಗಳ ಒಳಗೆ ಹೊರಗೆ ಇರುವಾಗ, ಆತ್ಮ ಶರೀರಗಳ ಒಳಗೆ ಮಾತ್ರ ಇರುತ್ತದೆ. **ಶರೀರದಲ್ಲಿನ ಜೀವಾತ್ಮ, ಆತ್ಮಗಳು ಮಹಾಭೂತಗಳು ಆದಾಗ, ಪ್ರಕೃತಿಯಲ್ಲಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಪಂಚಭೂತಗಳಾಗಿ ಇವೆ.** ಪಂಚಭೂತಗಳಿಂದ ಏರ್ಪಟ್ಟಿರುವ ಶರೀರದಲ್ಲಿ ಮಹಾಭೂತಗಳು ಎರಡು ಬೆರೆತು ವಾಸಿಸುತ್ತಿವೆ. ಶರೀರದಲ್ಲಿ ಪರಮಾತ್ಮ ಸಂಬಂಧವಾದ ಜೀವಾತ್ಮ, ಆತ್ಮಗಳು (ಮಹಾಭೂತಗಳು) ಎರಡನ್ನು ಮತ್ತು ಪ್ರಕೃತಿ ಸಂಬಂಧವಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಐದು ಭೂತಗಳ ನಿಲಯವೇ ಸರ್ವಪ್ರಪಂಚವೆಲ್ಲ ತುಂಬಿರುವ ಸರ್ವಜೀವರಾಶಿಗಳೆಂದು ತಿಳಿಯುತ್ತಿದೆ.

ಪ್ರಪಂಚದಲ್ಲಿನ ಪಂಚಭೂತಗಳಿಗೆ ಆಕಾರವಿದೆ. ಹಾಗೆಯೇ ಶರೀರದೊಳಗಿರುವ ಪಂಚಭೂತಗಳ ಭಾಗಗಳಿಗೆ ಆಕಾರವಿದೆ. ಪ್ರಪಂಚದಲ್ಲಿನ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ, ನಮ್ಮೆಲ್ಲರ ದೃಷ್ಟಿಗೆ ತಿಳಿಯುವವೇ.

ಹಾಗೆಯೇ ಶರೀರದೊಳಗಿರುವ ಹತ್ತು ಬಾಹ್ಯೇಂದ್ರಿಯಗಳಾದ ವಿಷಯಜ್ಞಾನವನ್ನು ತಿಳಿಸುವ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ, ಐದೂ, ಕೆಲಸಗಳು ಮಾಡುವ ಕಾಲುಗಳು, ಕೈಗಳು, ಬಾಯಿ, ಗುದ, ಲಿಂಗ ಐದು ಸೇರಿ ಒಟ್ಟು ಹತ್ತು ಭಾಗಗಳು ಮೇಲೆ ಕಣ್ಣಿಗೆ ಕಾಣಿಸುವವಾಗಿವೆ. ಶರೀರ ಶಕ್ತಿಗಳಿಗೆ, ಪಂಚವಾಯುಗಳಿಗೆ ಪ್ರಧಾನ ಪಾತ್ರಗಳು ನಿರ್ವಹಿಸುವ **ಮನಸ್ಸು, ಬುದ್ಧಿ, ಚಿತ್ತ, ಅಹಮ್‌ಗೂ ಸಹ ಆಕಾರಗಳಿವೆ**. ಇವು ಜ್ಞಾನದೃಷ್ಟಿಗೆ ಗೋಚರಿಸುವವಾಗಿವೆ. ಹೀಗೆ ಶರೀರದಲ್ಲಿನ 24 ಭಾಗಗಳಲ್ಲಿ ಸ್ಥೂಲವಾದವು ಕಣ್ಣಿನದೃಷ್ಟಿಗೆ, ಸೂಕ್ಷ್ಮವಾದವು ಜ್ಞಾನದೃಷ್ಟಿಗೆ ತಿಳಿಯುತ್ತಿವೆ. ಈ ವಿಧವಾಗಿ ಪಂಚಭೂತಗಳಿಗೆ ಆಕಾರಗಳಿವೆ ಎಂದು ತಿಳಿಯುತ್ತಿದೆ.

ಮಹಾಭೂತಗಳಾದ ಜೀವಾತ್ಮ, ಆತ್ಮಗಳಿಗೂ ಸಹ ಸೂಕ್ಷ್ಮ ಆಕಾರಗಳು ಇವೆಯೆಂದು ಜ್ಞಾನದೃಷ್ಟಿಗೆ ತಿಳಿಯುತ್ತಿದೆ. ಒಂದು ವಿಧವಾಗಿ ಜೀವಾತ್ಮ ಆತ್ಮಗಳಿಗೆ ಆಕಾರವಿದೆ ಎಂಬುವುದು ಕೆಲವರಿಗೆ ಬಹಳ ವಿಚಿತ್ರವಾಗಿ, ಶುದ್ಧ ಅಸತ್ಯವಾಗಿ ತೋಚಿದರೂ ಇದು ನೂರಕ್ಕೆ ನೂರುಪಾಲು ಸತ್ಯ. ಈಗ ಶರೀರದಲ್ಲಿ ಅಗ್ರಗಾಮಿಯಾದ ಆತ್ಮಕ್ಕೆ ಆಕಾರ ಹೇಗಿದೆಯೋ ತಿಳಿದುಕೊಳ್ಳೋಣ. ಶರೀರಕ್ಕೆ ಚೈತನ್ಯಕೊಡುವುದು ಆತ್ಮ. ಶರೀರ ಕದಲುತ್ತಿದೆ ಎಂದರೆ ಅದು ಆತ್ಮಶಕ್ತಿಯಿಂದಲೇ ನಡೆಯುತ್ತಿದೆ. ಅಷ್ಟೇ ಅಲ್ಲದೆ ಮನಸ್ಸು ತಿಳಿಸಿದ ಆಜ್ಞೆಪ್ರಕಾರ ಕದಲುವ ಇಚ್ಛಾದೀನ ಕಂಡರಗಳಾದ ಕೈ ಕಾಲುಗಳಾಗಲಿ, ತಿಳಿಯದೆಯೇ ಕದಲುವ ಅನಿಚ್ಛಾದೀನ ಕಂಡರಗಳಾದ ಗುಂಡಿಗೆ, ಊಸಿರಾಟಚೀಲಗಳು, ಕಣ್ಣರೆಪ್ಪೆಗಳು ಮೊದಲಾದವಾಗಲಿ ಆತ್ಮದ ಚೈತನ್ಯದಿಂದಲೇ ಕದಲುತ್ತಿವೆ. ಅಸತ್ತು ಆದ ಶರೀರದಲ್ಲಿ ಸತ್ತು ಎನ್ನುವ ಪದಾರ್ಥವಾಗಿ ಶರೀರಕ್ಕೆ ಸತ್ತುಕೊಡುವುದಾಗಿ ಆತ್ಮ ಇದೆ. ಶರೀರದಲ್ಲಿ ಎಲ್ಲಿಯವರೆಗೂ ಆತ್ಮ ವ್ಯಾಪಿಸಿದ್ದು ಚೈತನ್ಯವಾಗಿದೆ ಎಂದು ತಿಳಿದುಕೊಂಡರು ಆತ್ಮ ಶರೀರವೆಲ್ಲಾ ವ್ಯಾಪಿಸಿದೆ ಎಂದು ತಿಳಿಯುತ್ತಿದೆ. ಶರೀರವೆಲ್ಲಾ ಅಂದರೆ ಕೊನೆಯ ಅಂಚಾದ ಚರ್ಮ ಅದರಮೇಲೆ ರೋಮಗಳ ವರೆಗೂ ವ್ಯಾಪಿಸಿದೆ. ಅಷ್ಟೇ ಅಲ್ಲದೆ ಕೈ ಕಾಲುಗಳ ಬೆರಳುಗಳಿಗಿರುವ ಗಟ್ಟಿ ಚರ್ಮವಾದ ಉಗುರುಗಳ

ವರೆಗೂ ಸಹ ವ್ಯಾಪಿಸಿದೆ. ಉಗುರುಗಳು ಕೂದಲುಗಳವರೆಗೂ ವ್ಯಾಪಿಸಿರುವು ದರಿಂದಲೇ ಅವುಗಳವರೆಗು ಸ್ಪರ್ಶ ಬೆಳೆವಣಿಗೆ ಇದೆ. ಆತ್ಮ ಶರೀರದ ಒಳಗೆಲ್ಲವೂ ಮತ್ತು ಹೊರಗೆ ಶರೀರದ ಅಂಚಿನವರೆಗೂ ವ್ಯಾಪಿಸಿರುವುದರಿಂದ, ಶರೀರವೆಲ್ಲ ವನ್ನು ಚಿತ್ರಿಸಿ ಆತ್ಮ ಸ್ವರೂಪವನ್ನು ತಿಳಿದುಕೊಳ್ಳಬಹುದು.

ಮನುಷ್ಯನಲ್ಲಾಗಲಿ, ಪ್ರಾಣಿಯಲ್ಲಾಗಲಿ ಯಾವುದರಲ್ಲಾದರೂ ಅದರ ಶರೀರದ ಆಕೃತಿಯೇ ಅದರಲ್ಲಿನ ಆತ್ಮ ಹೊಂದಿ ಇದೆಯೆಂದು ತಿಳಿಯುತ್ತಿದೆ. ಇದರ ಪ್ರಕಾರ ನೋಡಿದಂತಾದರೆ, ಯಾವ ಪಾತ್ರೆಯಲ್ಲಿರುವ ನೀರಿಗೆ ಆ ಪಾತ್ರೆಯ ಆಕಾರವೇ ಬರುವಂತೆ ಯಾವ ಶರೀರದಲ್ಲಿರುವ ಆತ್ಮಕ್ಕೆ ಆ ಶರೀರ ಆಕೃತಿಯೇ ಇದೆ. ಈ ಸೂತ್ರದ ಪ್ರಕಾರ ಉದ್ದವಾದ ಶರೀರದಲ್ಲಿ ಉದ್ದವಾದ ಆತ್ಮ, ಕುಳ್ಳನ ಶರೀರದಲ್ಲಿ ಕುಳ್ಳ ಆತ್ಮ ಇದೆಯೆಂದು ಹೇಳಬಹುದು. ಶರೀರದ ಅಂಚಿನವರೆಗೂ ವ್ಯಾಪಿಸಿರುವುದರಿಂದ ಅಂದವಾದ ಶರೀರದಲ್ಲಿ ಅಂದವಾದ ಆಕೃತಿ ಇರುವ ಆತ್ಮ, ಅಂದಹೀನ ಶರೀರದಲ್ಲಿ ಅಂದಹೀನವಾದ ಆತ್ಮ ಇದೆಯೆಂದು ಹೇಳಬಹುದು.

ಆತ್ಮಕ್ಕೆ ಆಕಾರ ಇಲ್ಲ ಅನ್ನುವವರು ಬಹಳಜನ ಇದ್ದಾರೆ. ಹಾಗೆ ಆಕಾರ ಇದ್ದರೆ ವೇದಾಂತ ಬರೆದ ಪೂರ್ವಕಾಲದ ಹಿರಿಯರು ಯಾವಾಗಲೋ ಬರೆದಿರುತ್ತಿದ್ದರಲ್ಲವೆ! ಅವರಿಗೆ ತಿಳಿಯದಿರುವುದು ಇವರಿಗೆ ತಿಳಿದಿದೆಯಾ ಎಂದು ಕೇಳುವವರು ಸಹ ಇರಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಪೂರ್ವಕಾಲದಲ್ಲಿ ಹಿರಿಯರು ಕಂಡುಹಿಡಿಯದ ರೈಲುಗಳು, ಬಸ್ಸುಗಳು, ಟೀವಿಗಳು, ರೇಡಿಯೋಗಳು, ಕಂಪ್ಯೂಟರ್‌ಗಳು ಈ ಕಾಲದವರೆ ಕಂಡುಹಿಡಿ ದಿದ್ದಾರಲ್ಲವೆ! ಹಾಗೆಯೇ ಅವರಿಗೆ ತಿಳಿಯದ ಜ್ಞಾನವನ್ನು ಈದಿನ ತಿಳಿಯಬಾರ ದೆಂಬ ಸಿದ್ಧಾಂತ ಇಲ್ಲ ತಾನೆ! ಈಗಲೂ ಸಂಶಯ ಇರುವವರಿಗೆ ನಾನು ಕೇಳುವ ಪ್ರಶ್ನೆಗಳಿಗೆ ಉತ್ತರಗಳು ಹುಡುಕಿರಿ. ನಮ್ಮ ಪ್ರಶ್ನೆಗಳೆ ನಿಮ್ಮ ಸಂಶಯಗಳಿಗೆ ಉತ್ತರಗಳಾಗುತ್ತವೆ.

1. ಆತ್ಮ ಶರೀರವೆಲ್ಲಾ ವ್ಯಾಪಿಸಿ ಇದೆಯಾ? ಇಲ್ಲವಾ?

2. ಪಾತ್ರೆಯಲ್ಲಿರುವ ನೀರು ಪಾತ್ರೆ ರೂಪ ಧರಿಸುತ್ತದಾ ಇಲ್ಲವಾ? ಹಾಗೆ ಶರೀರದಲ್ಲಿರುವ ಆತ್ಮ ಶರೀರ ರೂಪ ಧರಿಸುತ್ತಿದೆಯಾ ಇಲ್ಲವಾ?

3. ಪಾತ್ರೆಯನ್ನನುಸರಿಸಿ ನೀರಿನ ರೂಪವಿರುವಂತೆ, ಶರೀರವನ್ನನುಸರಿಸಿ ಆತ್ಮಕ್ಕೆ ರೂಪ ಇದೆಯಾ ಇಲ್ಲವಾ?

ಚೈತನ್ಯ (ಸತ್ತು) ಆಗಿರುವ ಆತ್ಮ ಶರೀರವೆಲ್ಲಾ ವ್ಯಾಪಿಸಿ ಚಲನೆಕೊಡುವುದಾಗಿರುತ್ತದೆ. ಆದರೆ ಕೆಲವರಲ್ಲಿ ಪೂರ್ತಿ ಶರೀರವೆಲ್ಲ ವ್ಯಾಪಿಸದೆ, ಒಂದು ಕೈ ಭುಜದ ವರೆಗು ಮಾತ್ರ ವ್ಯಾಪಿಸಿದ್ದು, ಅವನ ಕೈಯಿಗೆ ಚಲನೆ ಕೊಡುವುದಿಲ್ಲ. ಆಗ ಅವನು ಕೈಯಿದ್ದು ಕುಂಟನಂತೆ ಇರುತ್ತಾನೆ. ಅವನ ಕೈಯನ್ನು ಅವನು ಕದಲಿಸಲಾರನು. ಅವನನ್ನು ಕೇಳಿದರು ನನ್ನ ಕೈ ಸತ್ತುಬಿದ್ದುಹೋಗಿದೆ (ಬಲಹೀನವಾಗಿದೆ) ಎನ್ನುತ್ತಾನೆ. ಪೂರ್ವದಲ್ಲಾದರೆ ಸತ್ತು ಬಿದ್ದುಹೋಗಿದೆಯೆಂದು ಅನ್ನುತ್ತಿದ್ದರು. ಕಾಲಕ್ರಮವಾಗಿ ಸಹ **ಸತ್ತು** ಬದಲಾಗದೆ ಉಳಿದಿದೆ ಎಂದು ತಿಳಿಯಬೇಕು. ಸತ್ತು ಎನ್ನುವುದೇ ಆತ್ಮ ಎಂದು ಸಹ ತಿಳಿಯಬೇಕು. ಕೈಯಿ ಇದ್ದು ಕೈಯಲ್ಲಿ ಚೈತನ್ಯ ಇಲ್ಲದವನೊಂದರ ಆತ್ಮಸ್ವರೂಪ ಕೈಯಿಲ್ಲದವನ ಆಕಾರವನ್ನು ಹೋಲಿರುತ್ತದೆ.' ಶರೀರಕ್ಕೆ ಕೈ ಇದ್ದರು ಆತ್ಮ ಆಕಾರಕ್ಕೆ ಕೈ ಇಲ್ಲ.

ಒಂದು ಶರೀರದಲ್ಲಿನ ಎಲ್ಲಾ ಭಾಗಗಳಿಗೆ ಚಲನೆಗಳಿವೆ. ಆದರೆ ಕೈಯಿಗೆ ಮಾತ್ರ ಸ್ಪರ್ಶ ಇಲ್ಲ, ಆತನು ಯಾವ ವಸ್ತುವನ್ನು ತಾಕಿರುವುದು ಆ ಕೈಯಿಗೆ ತಿಳಿದಿಲ್ಲ. ಹಾಗೆ ಸ್ಪರ್ಶ ಇಲ್ಲದಿರುವಾಗ ಆ ಶರೀರದಲ್ಲಿನ ಆತ್ಮ ಆಕಾರ ಹೇಗಿದೆಯೆಂದು ನೋಡಿದರು ಅದು ಶರೀರವನ್ನು ಹೋಲಿದ ಸಂಪೂರ್ಣಾಕಾರ ಹೊಂದಿರುತ್ತದೆ ಆ ಕೈಯಿಗೆ ಕುಂಟು ಇರುವುದಿಲ್ಲ. ಏಕೆಂದರೆ ಆತ್ಮ ಕೈವರೆಗೂ ವ್ಯಾಪಿಸಿ ಕದಲಿಸುತ್ತಿದೆ. ಅದರಲ್ಲಿ ಇಲ್ಲದಿರುವುದು ಸ್ಪರ್ಶ ಅನ್ನುವ ತನ್ಮಾತ್ರವಾಗಲಿ ಆತ್ಮವಲ್ಲ. ಆದ್ದರಿಂದ ಸ್ಪರ್ಶವಿಲ್ಲದ ಕೈ ಇರುವ ಶರೀರದಲ್ಲಿಯಾದರೂ ಅವುಗಳ ಶರೀರಭಾಗಗಳು ಅವವುಗಳ ಕೆಲಸಮಾಡದಿದ್ದರೂ, ಆತ್ಮ ಅಲ್ಲಿಯವರೆಗು

ವ್ಯಾಪಿಸಿದ ಪಕ್ಷದಲ್ಲಿ ಆತ್ಮ ಕುಂಟಿಯಲ್ಲ. ಬುದ್ಧಿ ಅದರೊಂದರ ಕೆಲಸಮಾಡದವನನ್ನು ಹುಚ್ಚ ಅನ್ನಬಹುದು. ಕಣ್ಣು ಅದರೊಂದರ ಕೆಲಸಮಾಡದವನನ್ನು ಕುರುಡನನ್ನಬಹುದು. ಕಿವಿ ಕೆಲಸಮಾಡದವನನ್ನು ಕಿವುಡನನ್ನಬಹುದು. ಹುಚ್ಚನಲ್ಲಿಯೂ, ಕಿವುಡನಲ್ಲಿಯೂ, ಕುರುಡನಲ್ಲಿಯೂ ಶರೀರದಲ್ಲಿನ ಆತ್ಮ ಎಲ್ಲಾಕಡೆ ವ್ಯಾಪಿಸಿದೆ. ಆದ್ದರಿಂದ ಆತ್ಮ ಕುರುಡ, ಕಿವುಡ, ಹುಚ್ಚ ಅಲ್ಲ, ಅದಕ್ಕೆ ಅಂಗಲೋಪ ಇಲ್ಲ. ಆತ್ಮ ವ್ಯಾಪಿಸದ ಶರೀರಭಾಗದಲ್ಲಿ ಮಾತ್ರವೇ ಆತ್ಮ ಆಕೃತಿ ಇಲ್ಲ. ಅಲ್ಲಿ ಅದು ಅಂಗವಿಕಲ ಆಗುತ್ತದೆ. ಪ್ರಪಂಚದಲ್ಲಿ ಪರಮಾತ್ಮಕ್ಕೆ ಮಾತ್ರ ಆಕಾರ ಇಲ್ಲ. ಶರೀರದಲ್ಲಿ ಚೈತನ್ಯವಾಗಿದ್ದು, ಜೀವಿಯನ್ನು ಕದಲಿಸುವ ದೈವಸ್ವರೂಪವಾದ ಆತ್ಮಕ್ಕು ಸಹ ಆಕಾರವಿದೆಯೆಂದು, ಅದರಲ್ಲಿಯು ಕೆಲವು ಶರೀರಗಳಲ್ಲಿ ಶರೀರವನ್ನು ಹೋಲುವ ಅಂಗವೈಕಲ್ಯವಾದ ಆಕಾರವನ್ನು ಆತ್ಮ ಹೊಂದಿದೆ ಎಂದು, ತಿಳಿಯುವುದರಿಂದ ಆತ್ಮ ವಿವರವನ್ನು ತಿಳಿದಂತಾಗುತ್ತದೆ.

ಶಿಶು ಶರೀರ ಹುಟ್ಟಿದಾಗ ಅದರಲ್ಲಿನ ಆತ್ಮ ಆ ಶರೀರ ಆಕೃತಿಯನ್ನೆ ಹೋಲಿದ್ದು, ಅದು ಬೆಳೆದಂತೆಲ್ಲ ಆತ್ಮವು ಬೆಳೆದು ದೊಡ್ಡದಾಗುತ್ತದೆ. ಹಾಗೆಯೇ ಶರೀರದಲ್ಲಿನ ಎಲ್ಲವುಗಳ ಪರಿಮಾಣ ಬೆಳೆಯುತ್ತದೆ. ಒಂದೇ ಜನ್ಮದಲ್ಲಿ ಶರೀರದಲ್ಲಿನ ಮನಸ್ಸು ಪರಿಮಾಣ ಸಂದರ್ಭಾನುಸಾರವಾಗಿ ಬದಲಾಗುತ್ತಿರುತ್ತದೆ. ಆದರೆ ಆತ್ಮ ಪರಿಮಾಣ ಸಂದರ್ಭಾನುಸಾರವಾಗಿ ಬದಲಾಗುವುದಿಲ್ಲ. ಒಂದು ಶರೀರದಲ್ಲಿ ಇರುವಾಗ ಅದರ ಆಕಾರವನ್ನೇ ಆತ್ಮ ಹೊಂದಿರುತ್ತದೆ. ಜೀವಿಯು ಶರೀರವನ್ನು ಬದಲಾಯಿಸಿದಾಗ ಜೀವಿಯ ಜೊತೆ ಆತ್ಮ ಶರೀರವನ್ನು ಬದಲಾಯಿಸಿ, ಜೀವಿಯು ಧರಿಸಿದ ಶರೀರವನ್ನು ಸೇರಿ, ಅಲ್ಲಿನ ಶರೀರಾಕೃತಿ ಯನ್ನು ಹೊಂದುತ್ತಿದೆ. ಇದರಿಂದ ಆತ್ಮಗೆ ಸ್ಥಿರವಾಗಿ ಒಂದೇ ರೂಪ ಇರುವುದಿಲ್ಲವೆಂದು, ಜೀವಿಯು ಜನ್ಮಗಳು ಬದಲಾಯಿಸಿದಾಗ ಅವನಜೊತೆ ಆತ್ಮ ಶರೀರಾಕೃತಿಯನ್ನು ಹೊಂದುತ್ತಿರುತ್ತದೆಂದು ತಿಳಿಯುತ್ತಿದೆ. ಶರೀರದಲ್ಲಿನ ಜೀವಾತ್ಮವೊಂದರ ಪರಿಮಾಣ, ಅಳತೆ ಶರೀರ ಬೆಳೆದಂತೆಲ್ಲ ಬೆಳೆಯುತ್ತಿರುತ್ತದೆ. ಆದರೆ ಅದರ ಆಕೃತಿ ಬದಲಾಗುವುದಿಲ್ಲ. ಮೊದಲು ಯಾವ ಆಕೃತಿ ಇರುತ್ತ

ದೆಯೋ ಅದೇ ಆಕೃತಿ ಎಲ್ಲಾ ಜನ್ಮಗಳಲ್ಲಿ ಇರುತ್ತದೆ. ಆತ್ಮ ಮಾತ್ರ ಹಾಗಲ್ಲದೆ ಒಂದೊಂದು ಜನ್ಮದಲ್ಲಿ ಒಂದೊಂದು ಆಕೃತಿಯನ್ನು ಹೊಂದುತ್ತಾ ಜೀವಿಯು ಧರಿಸುವ ಶರೀರವನ್ನನುಸರಿಸಿ ಬದಲಾಗುತ್ತಿರುತ್ತದೆ.

# ಚಂದಮಾಮ

ಚಂದ್ರನನ್ನು ಚಂದಮಾಮ ಎಂದು ಕೆಲವರು ಅನ್ನುತ್ತಿರುತ್ತಾರೆ. ತಾಯಿ ಚಿಕ್ಕಮಗುವಿಗೆ ಅನ್ನ ಇಡುವ ಸಮಯದಲ್ಲಿ, ಹಠಾಮಾಡುವ ಸಮಯದಲ್ಲಿ ಸಂಧ್ಯವೇಳೆಯಲ್ಲಿ ಅಗೋ ಚಂದಮಾಮ ಎಂದು ತೋರಿಸಿ ಆಡಿಸುತ್ತಿರುತ್ತಾಳೆ. ಆದ್ದರಿಂದ ಚಿಕ್ಕಂದಿನಿಂದ ಚಂದ್ರನನ್ನು ಎಲ್ಲರೂ ಚಂದಮಾಮ ಎಂದೇ ಕರೆಯುತ್ತಾರೆ. **'ಚಂದಮಾಮ ಬಾರೋ ಚಕ್ಕುಲಿ ಮಾಮ ಬಾರೋ'** ಎಂದು ಮಕ್ಕಳನ್ನು ಸುಮ್ಮನಿರಿಸುವ ಹಾಡು ಸಹ ಇದೆ. ಮಕ್ಕಳೇ ಅಲ್ಲ ಹಿರಿಯರು ಸಹ ಚಂದಮಾಮ ಎಂದೇ ಕರೆಯುತ್ತಾರೆ. **'ಎಲ್ಲರಿಗೂ ಮಾಮ ಚಂದಮಾಮ'** ಅನ್ನುವ ನಾಣ್ಣುಡಿ ಸಹ ಇದೆ. ಹೀಗೆ ಚಂದ್ರನು ಚಂದಮಾಮನಾಗಿ ಎಲ್ಲರ ಮನಸ್ಸಿನಲ್ಲಿ ನಿಂತುಹೋಗುವಂತೆ ನಮ್ಮ ಹಿರಿಯರು ಅಭ್ಯಾಸ ಮಾಡಿದ್ದಾರೆ.

ಚಂದ್ರನು ನನಗೇನೊ **'ಮಾಮ'** ಆದಾಗ ನನ್ನ ಹೆಂಡತಿಗೆ ಚಿಕ್ಕಪ್ಪನೊ, ದೊಡ್ಡಪ್ಪನೊ ಆಗಬೇಕಲ್ಲವೆ! ಹಾಗೆ ಮಗನಿಗೆ ಮಾಮ ಆದಾಗ ಅಮ್ಮನಿಗೆ ತಮ್ಮನೋ, ಅಣ್ಣನೋ ಆಗಬೇಕು ತಾನೆ! ಹಾಗೆ ಯಾರು ವರಸೆ ಪ್ರಕಾರ ಕರೆಯದೆ ಅಮ್ಮ, ಮಗ, ಪತ್ನಿ, ಪತಿ ಎಲ್ಲರೂ ಚಂದ್ರನನ್ನು **'ಮಾಮ'** ಅನ್ನುವುದರಲ್ಲಿ ಆಂತರ್ಯವೇನು! ಅನ್ನುವುದು ಪ್ರಶ್ನೆ. ನಮ್ಮ ಹಿರಿಯರು ಏನೋ ರಹಸ್ಯ ವಿಲ್ಲದೆ ಚಂದ್ರನನ್ನು ಎಲ್ಲರಿಗೂ ಮಾಮನು ಮಾಡಿರುವುದಿಲ್ಲ. ಆ **'ಚಂದಮಾಮ'** ರಹಸ್ಯವೇನೋ ತಿಳಿದುಕೊಳ್ಳೋಣ.

ಸಕಲ ಜೀವರಾಶಿಗಳಿಗು ಚಲಿಸುವವುಗಳಿಗೂ, ಚಲಿಸದವುಗಳಿಗೂ, ಯಾವ ರೂಪ ಧರಿಸಿರುವವುಗಳಿಗಾದರೂ ಶರೀರವನ್ನು ತಯಾರು ಮಾಡುವ

ಪಂಚ ಭೂತಗಳಾದ ಪ್ರಕೃತಿಯೇ ತಾಯಿ. ಆ ಶರೀರಗಳಲ್ಲಿ ಸೂತ್ರಧಾರಿಯಾಗಿ, ಚಲಿಸುವಶಕ್ತಿಯಾಗಿ ಶರೀರಗಳನ್ನು ಕದಲಿಸಿ ಆಡಿಸುವ ಪರಮಾತ್ಮನೇ ತಂದೆ. ಈ ವಿಷಯ ಭಗವದ್ಗೀತೆ ಗುಣತ್ರಯವಿಭಾಗ ಯೋಗವೆಂಬ ಅಧ್ಯಾಯದಲ್ಲಿ ಮೊದಲೇ ಹೇಳಲಾಗಿದೆ. ಒಂದು ಶರೀರಕ್ಕೆ ತಾಯಿ ತಂದೆ ಮೇಲಿನ ನೋಟಕ್ಕೆ ಕಾಣಿಸುವವರಿದ್ದರೂ ಒಟ್ಟಾರೆ ಪ್ರಪಂಚದಲ್ಲಿನ ಶರೀರಗಳಿಗೆಲ್ಲಾ ಕಾಣಿಸದ ತಾಯಿತಂದೆಯರಿದ್ದಾರೆ. ಅವರೆ ಪ್ರಕೃತಿ, ಪರಮಾತ್ಮರೆಂದು ತಿಳಿಯಬೇಕು.

ಮಾನವನಿಗೆ ಬೇರೆಬೇರೆ ಜನ್ಮಗಳಲ್ಲಿ ಕಾಣಿಸುವ ಬೇರೆಬೇರೆ ತಾಯಿತಂದೆಯರು ಇರಬಹುದು, ಆದರೆ ಎಲ್ಲಾ ಜನ್ಮಗಳಿಗು ಶಾಶ್ವತವಾದ ತಾಯಿತಂದೆಯರು ಪ್ರಕೃತಿ ಪರಮಾತ್ಮರೆಂದು ತಿಳಿಯಬೇಕು.

ಸರ್ವರಿಗೂ ತಂದೆಯಾದ ಪರಮಾತ್ಮ ಕಾಣಿಸದಂತಿದ್ದಾನೆ. ತಾಯಿಯಾದ ಪ್ರಕೃತಿ ಪಂಚಭೂತಗಳಾಗಿ ಕಾಣಿಸುತ್ತಲೇ ಇದೆ. ಪ್ರಕೃತಿ, ಪುರುಷರ ವಿಷಯವಾಗಿ ವಿವರ ತಿಳಿಯಬೇಕೆಂದರೆ ದೇವರಜ್ಞಾನ ಅವಶ್ಯಕ. ಜ್ಞಾನದಿಂದಲೇ ಪ್ರಕೃತಿಯನ್ನಾಗಲಿ, ಪುರುಷನಾದ ಪರಮಾತ್ಮನನ್ನಾಗಲಿ ತಿಳಿಯುವುದಕ್ಕೆ ಸಾಧ್ಯವಾಗುತ್ತದೆ. ಜ್ಞಾನ ಗುರುಗಳಿಂದ ಲಭಿಸುತ್ತದೆ. ಗುರುಗಳು ಬೋಧಿ ಸುವುದರಿಂದ ಅವರ ಮಾತುಗಳ ಮೂಲಕ ಜ್ಞಾನ ಶಬ್ಧರೂಪದಲ್ಲಿ ಶಿಷ್ಯನ ಕಿವಿಗಳ ಮೂಲಕ ಒಳಗೆ ಸೇರುತ್ತಿದೆ. ಶಬ್ಧರೂಪವಾದ ಜ್ಞಾನ ದೇವರನ್ನು ತಿಳಿದುಕೊಳ್ಳುವುದಕ್ಕೆ ಆಧಾರವಾದರೂ ಅದು ಶಬ್ಧರೂಪವಾಗಿ ನಿನ್ನವರೆಗೂ ಸೇರುತ್ತಿದೆ. ಶಬ್ಧ ಪ್ರಕೃತಿಯಲ್ಲಿರುವುದೇ ಆದ್ದರಿಂದ ದೇವರನ್ನು ತಿಳಿಸುವ ಜ್ಞಾನ ಸಹ ಪ್ರಕೃತಿಯನ್ನು ಅನುಸರಿಸಿ ಹುಟ್ಟಿದೆಯೆಂದು ತಿಳಿಯಬೇಕು.

ಪರಮಾತ್ಮ, ಪ್ರಕೃತಿ ಆ ನಂತರವಾದದು ಜ್ಞಾನ. ಪ್ರಕೃತಿಯನ್ನು ಅನುಸರಿಸಿ ಹುಟ್ಟಿರುವುದು ಜ್ಞಾನ. ಅನುಜನು ಅಂದರೆ ಅನುಸರಿಸಿ ಹುಟ್ಟಿದವನು ಅಥವಾ ಸೋದರನೆಂದು ಅರ್ಥ. ಪ್ರಕೃತಿಯನ್ನು ಅನುಸರಿಸಿ ಹುಟ್ಟಿದ ಜ್ಞಾನಕ್ಕೆ ಪ್ರಕೃತಿಯಲ್ಲಿ ಸೋದರಸ್ಥಾನ ಬಂದಿದೆ ಎಂದು ಹೇಳಬಹುದು. ಜ್ಞಾನಕ್ಕೆ ಚಿಹ್ನೆಯಾಗಿ ಚಂದ್ರನನ್ನು ಬ್ರಹ್ಮವಿದ್ಯೆಯಲ್ಲಿಯೂ, ಜ್ಯೋತಿಷ್ಯಶಾಸ್ತ್ರದಲ್ಲಿಯೂ ಹೇಳಿದ್ದಾರೆ.

ಆದ್ದರಿಂದ ಜ್ಞಾನ, ಚಂದ್ರನು ಒಂದೇ ಎಂದು ತಿಳಿಯಬೇಕು. ಮನುಷ್ಯನ ಜಾತಕಚಕ್ರದಲ್ಲಿ ಚಂದ್ರನು ಅನುಕೂಲವಾಗಿ ಇರುವಾಗಲೇ ಜ್ಞಾನವೂ ಸಹ ಲಭಿಸುತ್ತದೆಂದು ಹೇಳುವುದು ಇದೆ.

ಜ್ಞಾನಕ್ಕೆ ಗುರುತಾಗಿ ಗುರುತಿಸಲ್ಪಟ್ಟ ಚಂದ್ರನನ್ನು ಜ್ಞಾನವೊಂದರ ಬೆಲೆಯಿಂದಲೇ ಹೋಲಿಸಿಕೊಳ್ಳಬೇಕು. ಜ್ಞಾನ ಪ್ರಕೃತಿಯನ್ನನುಸರಿಸಿ ಶಬ್ದದ ಮೂಲಕ ಹುಟ್ಟಿದೆ ಎಂದು ಹೇಳಿಕೊಂಡಿದ್ದೇವಲ್ಲವೆ! ಪ್ರಕೃತಿಗೆ, ಜ್ಞಾನ ಅನುಜನಾದಾಗ ಜ್ಞಾನಚಿಹ್ನೆಯಾದ ಚಂದ್ರನು ಸಹ ಅನುಜನೊಂದಿಗೆ (ಸಹೋದರನೊಂದಿಗೆ) ಸಮಾನವೆ. ಅಂದರೆ ಚಂದ್ರನು ಪ್ರಕೃತಿಗೆ ಸೋದರ ಸಮಾನನೆಂದು ತಿಳಿಯಬೇಕು.

ಭಗವದ್ಗೀತೆಯಲ್ಲಿ **'ಸರ್ವಜೀವಿಗಳಿಗೂ ಪ್ರಕೃತಿ ಮಾತೆ, ನಾನು ತಂದೆ' ಎಂದು** ದೇವರು ತಿಳಿಸಿದ್ದಾನೆ. ಆ ಲೆಕ್ಕಪ್ರಕಾರ ನಮಗೆ ಮತ್ತು ಇತರರಿಗೆ ಶಾಶ್ವತ ತಂದೆ ಪರಮಾತ್ಮ, ಶಾಶ್ವತ ತಾಯಿ ಪ್ರಕೃತಿಯಾಗುತ್ತದೆ. ಆ ಲೆಕ್ಕಪ್ರಕಾರವೇ ನಿನ್ನ ಪತ್ನಿಗೂ ಸಹ ತಂದೆ ಪರಮಾತ್ಮ, ತಾಯಿ ಪ್ರಕೃತಿಯೆ. ಇಲ್ಲಿ ನಿನಗೆ ನಿನ್ನ ಪತ್ನಿಗೇ ಅಲ್ಲದೆ ಎಲ್ಲರಿಗೂ ಒಂದೇ ವರಸೆ ಬಂದಿದೆ. ಪ್ರಕೃತಿ ಎಲ್ಲರಿಗೂ ತಾಯಿ ಆಗಿದೆ. ಆದರೆ ನಿನ್ನ ಪತ್ನಿಗೆ ತಾಯಿ ಆದಾಗ ನಿನಗೆ ಅತ್ತೆ ಆಗಲಿಲ್ಲ. ಹಾಗೆ ನಿನಗೆ ತಾಯಿ ಆದಾಗ ನಿನ್ನ ಪತ್ನಿಗೆ ಅತ್ತೆ ಆಗಲಿಲ್ಲ. ಇಬ್ಬರಿಗೂ ಒಬ್ಬಳೇ ತಾಯಿ ವರಸೆಯಾಗಿಯೇ ಬಂದಿದೆ.

ಇಲ್ಲಿ ಅಸಲು ವಿಷಯಕ್ಕೆ ಬರೋಣ. ಜ್ಞಾನಚಿಹ್ನೆಯಾದ ಚಂದ್ರನು ಪ್ರಕೃತಿಗೆ ಸೋದರನಾದಾಗ ವರಸೆ ಪ್ರಕಾರ ಅಮ್ಮನ ಸೋದರನು(ತಮ್ಮ) ಸೋದರಮಾಮ ಆದಂತೆ, ಪ್ರಕೃತಿಗೆ ಸೋದರನಾದ ಚಂದ್ರನು ವರಸೆ ಪ್ರಕಾರ ನಮಗೆ **'ಸೋದರಮಾಮ'** ಆಗುತ್ತಾನೆ. ಸರ್ವಜೀವಿಗಳಿಗೆ ಚಂದ್ರನು **'ಸೋದರ ಮಾಮ'** ಆಗುತ್ತಾನೆ. ಸರ್ವಜೀವಿಗಳಿಗೆ ಪ್ರಕೃತಿ ತಾಯಿ ಆದಾಗ ಸರ್ವಜೀ ವಿಗಳಿಗೂ **'ಚಂದ್ರನು'** ಸೋದರಮಾವನೇ ಆಗುತ್ತಾನೆ. ನಿನಗೆ ಚಂದ್ರನು **'ಚಂದಮಾಮ'** ಆದರೆ ನಿನ್ನ ಪತ್ನಿಗೆ ದೊಡ್ಡಪ್ಪನಾಗಲಿ, ಚಿಕ್ಕಪ್ಪನಾಗಲಿ ಆಗುವುದಿಲ್ಲ.

ನಿನ್ನ ಪತ್ನಿಗೂ ಸಹ ಚಂದಮಾಮನೇ ಆಗುತ್ತಾನೆ. ಈ ಪ್ರಕಾರ ಎಲ್ಲಾ ವರಸೆಗಳು ಇರುವವರು ಒಂದೇ ವರಸೆಯಾಗಿ ಚಂದ್ರನನ್ನು **'ಚಂದಮಾಮ'** ಅನ್ನುತ್ತಾರೆ.

ಸಾಧಾರಣವಾಗಿ ನಾವು ಹೇಳುತ್ತಿರುವ **'ಚಂದಮಾಮ'** ಅನ್ನುವ ಮಾತಿನ ಹಿಂದೆ ಎಷ್ಟೋ ಜ್ಞಾನವಿವರ ಅಡಗಿದೆ ಎಂದು ಈಗ ತಿಳಿದಿದೆ ಅಲ್ಲವೆ!

# ಮಾಮ

ಮಾಮ ಅನ್ನುವ ಎರಡಕ್ಷರಗಳ ಪದ ಎಲ್ಲರಿಗೂ ಸುಪರಿಚಿತವಾದುದು. ಮಾಮ ಅನ್ನುವ ಪದ ಚಂದ್ರನಿಗೆ ಜೋಡಿಸಿ ಚಂದಮಾಮ ಅನ್ನುತ್ತಿದ್ದೇವೆಂದು, ಹಾಗೆ ಚಂದ್ರನನ್ನು ಎಲ್ಲರೂ ಮಾಮ ಎಂದು ಕರೆಯಬೇಕಾದ ವಿಧಾನವನ್ನು ವಿವರವಾಗಿ ತಿಳಿದುಕೊಂಡಿದ್ದೇವೆ. ಹಾಗೆ ಚಂದ್ರನನ್ನು ಮಾಮ ಎಂದು ಕರೆಯುವುದೇ ಅಲ್ಲದೆ ಮನೆಯಲ್ಲಿನ ಅಮ್ಮನ ತಮ್ಮನನ್ನೋ, ಅಮ್ಮನ ಅಣ್ಣನನ್ನೋ ಮಾಮ ಎಂದು ಕರೆಯುವುದು ಸಹ ನಡೆಯುತ್ತಿದೆ. ಕೆಲವು ಸಂದರ್ಭಗಳಲ್ಲಿ ಒಂದು ಗಾದೆಯನ್ನು ಸಹ ಅಲ್ಲಲ್ಲಿ ಕೆಲವರನ್ನುವುದು ಕೇಳಿಯೇ ಇರುತ್ತೇವೆ. ಆ ಗಾದೆ ಏನೆಂದರೆ! "ಅಮ್ಮ ಹೋದರು ಸೋದರ ಮಾಮ ಇರಬೇಕು" ಇದನ್ನು ಪ್ರಪಂಚವಿವರವಾಗಿ ಹೇಳಿಕೊಂಡರೆ, ಮನುಷ್ಯನ ಮೇಲೆ ಅತ್ಯಧಿಕವಾಗಿ ಪ್ರೇಮಹೊಂದಿರುವವಳು ತಾಯಿ ಎಂದು, ನಂತರ ಸೋದರಮಾವ ಎಂದು, ಮಾಮನ ನಂತರ ತಂದೆ ಎಂದು ಹೇಳುತ್ತಿರುತ್ತಾರೆ. ಇದು ಪ್ರಪಂಚವಿಧಾನದಲ್ಲಿನ ಭಾವವಾಗಿದ್ದು, ಆಧ್ಯಾತ್ಮಿಕ ವಿಧಾನದಲ್ಲಿ ಮತ್ತೊಂದು ಭಾವವಿದೆ. ಅದೇನೆಂದರೆ! ತಾಯಿ ಎಂದರೆ ಪ್ರಕೃತಿ ಎಂದು, ಮಾಮ ಎಂದರೆ ಆತ್ಮ ಎಂದು, ತಂದೆ ಎಂದರೆ ಪರಮಾತ್ಮ ಎಂದು (ದೇವರೆಂದು) ಬ್ರಹ್ಮವಿದ್ಯೆಯಲ್ಲಿ ಭಾವವಿದೆ. ಈ ಭಾವದ ಪ್ರಕಾರ ಯಾರಾದರು ದೇವರನ್ನು ಸೇರಬೇಕೆಂದರೆ ಪ್ರಕೃತಿ (ಮಾಯೆ) ಮಾತೆಯನ್ನು ಬಿಟ್ಟು, ಆತ್ಮ ಮೂಲಕ ಪ್ರಯಾಣಿಸಿ ಪರಮಾತ್ಮನನ್ನು (ದೇವರನ್ನು)

ಸೇರಬೇಕಾಗಿರುತ್ತದೆ. ಇನ್ನೂ ವಿವರವಾಗಿ ಹೇಳಿಕೊಂಡರೆ ಪ್ರಕೃತಿಯಿಂದ ತಯಾರಾದ ಶರೀರವನ್ನು ಬಿಟ್ಟು ಪುನಃ ಅದನ್ನು ಆಶ್ರಯಿಸದೆ ಹೋಗುವುದನ್ನು ಪ್ರಕೃತಿ ಮಾತೆಯನ್ನು ಬಿಟ್ಟುಹೋದಂತಾಗುತ್ತದೆ. ಹಾಗೆಯೇ ಆತ್ಮವನ್ನು ವಿವರವಾಗಿ ತಿಳಿದುಕೊಳ್ಳುವುದರಿಂದ ಆತ್ಮಜ್ಞಾನವೆಂಬ ಮಾರ್ಗದ ಮೂಲಕ ಪ್ರಯಾಣಿಸಿದಂತಾಗುತ್ತದೆ. ಕೊನೆಗೆ ಜನನಮರಣ ಸ್ಥಿತಿಗಳನ್ನು ಜೀವಾತ್ಮ ಹೊಂದದೆ ಮೋಕ್ಷವನ್ನು ಹೊಂದುವುದೇ ದೇವರನ್ನು ಸೇರಿದಂತಾಗುತ್ತದೆ. ಇಲ್ಲಿ ಆತ್ಮಜ್ಞಾನ ಎಂದರೂ, ಆತ್ಮವನ್ನು ತಿಳಿದುಕೊಳ್ಳುವುದೆಂದರೂ ಆತ್ಮದ ಮುಖಾಂತರ ಎಂದರೂ, ಒಂದೇ ಎಂದು ಗುರುತಿಸಿಕೊಳ್ಳಬೇಕು.

ಪ್ರಕೃತಿ, ಆತ್ಮ, ಪರಮಾತ್ಮ ಎನ್ನುವ ಮೂವರನ್ನು ಜೀವಿಗೆ ಮಾತೆ, ಮಾಮ, ಪಿತರರಾಗಿ ಪ್ರಪಂಚದಲ್ಲಿ ಲೆಕ್ಕಿಸಿಕೊಳ್ಳುತ್ತಿದ್ದೇವೆ. ಹೊರಗಿನ ಪ್ರಪಂಚದಲ್ಲಿ ಒಬ್ಬ ಮನುಷ್ಯನಿಗೆ ಬಾಹ್ಯವಾಗಿ ತಾಯಿ ಇದ್ದಾಳೆ, ಮಾಮ ಇದ್ದಾನೆ, ತಂದೆ ಇದ್ದಾನೆ. ಬಾಹ್ಯವಾಗಿ ಅಲ್ಲದೆ ಅಂತರ್ಮುಖವಾಗಿ ಒಬ್ಬ ಜೀವಿಗೆ ಶರೀರರೂಪ ದಲ್ಲಿ 10 ಭಾಗಗಳು ಕಾಣಿಸುವವಾಗಿ 15 ಭಾಗಗಳು ಕಾಣಿಸದಿರುವ ವಾಗಿ ಮಾತೆಯಾದ ಪ್ರಕೃತಿ ಇರುವಾಗ, ಶರೀರದಲ್ಲಿ ಚೈತನ್ಯಶಕ್ತಿಯಾಗಿ ಮಾಮ ವರಸೆಯಲ್ಲಿರುವ ಆತ್ಮ ಇದ್ದಾನೆ. ಶರೀರದ ಹೊರಗೆ ಶರೀರದೊಳಗೆ ಸಾಕ್ಷಿಯಾಗಿ ಯಾರಿಗೂ ತಿಳಿಯದಂತೆ ಅಣುಅಣುವಿನಲ್ಲಿ ವ್ಯಾಪಿಸಿ ತಂದೆಯಾದ ಪರಮಾತ್ಮ ಇದ್ದಾನೆ. ಒಬ್ಬ ಜೀವಿಯು ಶರೀರದಲ್ಲಿ ನಿವಾಸಿಸುತ್ತಿರುವಾಗ ಪ್ರಕೃತಿಯಾದ ಮಾತೆಯನ್ನು ಬಿಡಬೇಕೆಂದು, ಮಾತೆಯಾದ ಪ್ರಕೃತಿ ಜೀವಿಯದು ಅಲ್ಲವೆಂದು, ತಾಯಿಯಾದ ಪ್ರಕೃತಿ ಶರೀರವನ್ನು ಸ್ವಲ್ಪಕಾಲ ಬೆಳೆಸಿ ನಂತರ ಜೀವಿಯು ತನ್ನವನು ಅಲ್ಲವೆನ್ನುವಂತೆ ಶರೀರವನ್ನು ಬೆಳೆಸುವುದನ್ನು ಬಿಟ್ಟುಹಾಕುತ್ತಿದೆ ಎಂದು ತಿಳಿಯುತ್ತಿದೆ. ಇದೇ ವಿಧವಾಗಿ ಮರಿ ಪಕ್ಷಿಗಳು ಸ್ವಲ್ಪ ಬೆಳೆದ ನಂತರ ತಾಯಿ ಪಕ್ಷಿ ಅವುಗಳನ್ನು ಬಿಟ್ಟುಹಾಕುತ್ತಿದೆ. ಇದರಿಂದ ತನ್ನದು ಅಲ್ಲದಿರುವುದು ತಾಯಿ (ಪ್ರಕೃತಿ) ಎನ್ನುವ ವಿವರವು ಜೀವಿಯು ತಿಳಿಯಬೇಕು. ಇದೇ ಅರ್ಥ ದಿಂದಲೇ ತಾಯಿಯನ್ನು ಅಮ್ಮ ಎನ್ನುತ್ತಿದ್ದೇವೆ. ಗೌರವ ಅಂದರೆ ಮರ್ಯಾದೆ

ಎಂದು ಅರ್ಥ ತಾನೆ! ಗೌರವ ಎಂಬ ಪದಕ್ಕೆ "ಅ" ಎಂಬ ಅಕ್ಷರವನ್ನು ಸೇರಿಸಿ ಅಗೌರವ ಎಂದರೆ ಗೌರವ ಇಲ್ಲದಿರುವುದೆಂದು ಅರ್ಥತಾನೆ! ಅದೇ ವಿಧವಾಗಿ "ಮಾ" ಎಂದರೆ ನನ್ನ ಎಂದು ಅರ್ಥ. ಮಾ ಮುಂದೆ "ಅ" ಇಟ್ಟು ಅಮಾ ಎಂದರೆ ನನ್ನದು ಅಲ್ಲದಿರುವುದೆಂದು ಅರ್ಥಬರುತ್ತದಲ್ಲವೆ! ಇದರಿಂದ ನಿನ್ನದಲ್ಲದಿರುವುದು ಅಮಾ ಎಂದು ತಿಳಿಯುತ್ತಿದೆ. ಬರೆಯುವುದರಲ್ಲಿ ಅಮ್ಮಾ ಎಂದು ಬರೆದರೂ ವಾಸ್ತವ ಪದ ಅಮಾನೇ ಎಂದು ತಿಳಿಯಬೇಕು. ಬಹಳಜನ ಕರೆಯುವುದು ಸಹ ಅಮಾ ಎಂದೇ ಕರೆಯುತ್ತಿದ್ದಾರೆ ಎಂದು ಜ್ಞಾಪಕ ಇಟ್ಟುಕೊಳ್ಳಬೇಕು. ಅಮ್ಮಾ ಎಂದು ಪ್ರತಿನಿತ್ಯ ನಾವು ಮಾತನಾಡುತ್ತಿದ್ದರೂ, ಅದರಲ್ಲಿನ ಅರ್ಥ ನಮಗೆ ತಿಳಿದಿಲ್ಲ. ಅಮ್ಮಾ ಎನ್ನುವ ಪದವೊಂದರ ಅರ್ಥದ ಪ್ರಕಾರ ಜೀವಿಗೆ ತಾಯಿಯಾದ ಪ್ರಕೃತಿ (ಮಾಯೆ) ಕೊನೆಗೆ ನಿನ್ನದು ಅಲ್ಲವೆಂದು ತಿಳಿಯುತ್ತಿದೆ. ಶರೀರದಲ್ಲಿ ವಾಸಿಸುತ್ತಿರುವ ಜೀವಿಗೆ ಶರೀರದಲ್ಲಿಯೇ ಇರುವ ಪ್ರಕೃತಿ ತನ್ನದು ಅಲ್ಲವೆಂದು ತಿಳಿದಾಗ ತನ್ನದು ಏನೊ ಎಂದು ಜೀವಿಯು ತಿಳಿದುಕೊಳ್ಳಬೇಕಾದ ಅವಶ್ಯಕತೆ ಇದೆ.

ಶರೀರದಲ್ಲಿ ಪ್ರಕೃತಿ, ಆತ್ಮ ಎರಡೇ ಇವೆ. ಪರಮಾತ್ಮ ಶರೀರದೊಳಗೆ ಶರೀರದ ಹೊರಗೆ ವಿಶಾಲವಾಗಿ ಇದ್ದಾನೆ. ಪರಮಾತ್ಮ ಶರೀರದಲ್ಲಿ ಸ್ವಲ್ಪ ಇದ್ದರೂ ಶರೀರದ ಹೊರಗೆ ಹೆಚ್ಚಾಗಿದ್ದಾನೆ, ಆದ್ದರಿಂದ ಆತನನ್ನು ಶರೀರದಲ್ಲಿರುವವನಾಗಿ ಲೆಕ್ಕಿಸಿಕೊಳ್ಳಬಾರದು. ಇನ್ನುಹೋದರೆ ಶರೀರದಲ್ಲಿ ಜೀವಿಯಜೊತೆ ಇರುವುದು ಆತ್ಮ ಒಬ್ಬನೇ ಎಂದು ತಿಳಿಯುತ್ತಿದೆ. ಶರೀರದಲ್ಲಿ ಜೀವಿಯಜೊತೆ ಇತ್ತ ಪ್ರಕೃತಿ, ಅತ್ತ ಆತ್ಮ ಎರಡೇ ಇವೆಯೆಂದು ಅರ್ಥವಾಗುತ್ತಿದೆ. ಅದರಲ್ಲಿ ಆಧ್ಯಾತ್ಮಿಕರೀತ್ಯಾ ಪ್ರಕೃತಿ ನಿನ್ನದು ಅಲ್ಲವೆಂದು ತಿಳಿದುಹೋಗಿದೆ. ಪ್ರಕೃತಿ ನಂತರ ಇರುವ ಆತ್ಮ ಯಾವಾಗಲೂ ಜೀವಿಯಜೊತೆ ಇರುತ್ತಿದ್ದಾನೆ. ಆದ್ದರಿಂದ ಜೀವಿಯು ನನ್ನ ಆತ್ಮವೆಂದು ಮಾತುಗಳ ಸಂದರ್ಭದಲ್ಲಿ ಹೇಳುತ್ತಿದ್ದಾನೆ. ಆತ್ಮ ಜೀವಿಗೆ ಸಂಬಂಧಿಸಿರುವುದೇ ಎಂದು ತಿಳಿಯುವಂತೆ ಆತ್ಮವನ್ನು ಮಾಮ ಅನ್ನುವ ಪದದಿಂದ ಕರೆಯುತ್ತಿದ್ದೇವೆ. ಮಾಮ ಅನ್ನುವ

ಪದವು ಮೊದಲು "ಮಮ" ಅನ್ನುವ ಪದವಾಗಿ ಇರುತ್ತಿತ್ತು. ಕಾಲಕ್ರಮವಾಗಿ "ಮಮ" ಅನ್ನುವ ಎರಡಕ್ಷರಗಳಲ್ಲಿ ಮುಂದಿರುವ ಅಕ್ಷರಕ್ಕೆ ದೀರ್ಘ ಏರ್ಪಟ್ಟು "ಮಾಮ" ಆಗಿದೆ. "ಮಮ" ಅನ್ನುವ ಎರಡಕ್ಷರಗಳ ಪದವೊಂದರ ಅರ್ಥ ಏನೆಂದರೆ ಮ ಅಂದರೆ "ನನ್ನ" ಎಂದು ಮಮ ಎಂದರೆ ನನ್ನೊಂದರ ಎಂದು ಅರ್ಥಬರುತ್ತದೆ. ಮಮ ಎಂದರೂ ಮಾಮ ಎಂದರೂ ಎರಡು ನನ್ನದು ಎಂದು ಅಥವಾ ನನ್ನೊಂದರ ಎಂದು ಅರ್ಥ ಬರುತ್ತದೆ. ಮಾಮ ಎಂದರೆ ನನ್ನದು ಅನ್ನುವ ಅರ್ಥವನ್ನು ತಿಳಿಸುತ್ತಿದೆ ಅಲ್ಲವೆ! ಜೀವಿಗೆ ನನ್ನ ಅನ್ನುವವನು ಯಾರಿದ್ದಾನೆಂದು ನೋಡಿದರೆ ಶರೀರದಲ್ಲಿನ ಆತ್ಮ ಹೊರತು ಯಾರು ಇಲ್ಲ. ಜೀವಿಯು ಮರಣಿಸಿದಾಗಾಗಲಿ, ಹುಟ್ಟಿದಾಗಾಗಲಿ ಅವನ ಹಿಂದೆ ಬರುವವನು ಒಂದೇ ಒಂದು ಆತ್ಮವೇ. ಆದ್ದರಿಂದ ಆತ್ಮಕ್ಕೆ ಅರ್ಥದಿಂದ ಕೂಡಿಕೊಂಡಂತೆ ಮಾಮ ಎಂದು ಹೆಸರಿಡುವುದು ನಡೆದಿದೆ. ಮಮ ಅನ್ನುವ ಪದ ಒಂದು ಸಂಸ್ಕೃತ ಭಾಷಯಲ್ಲಿಯೇ ಅಲ್ಲದೆ ಎಲ್ಲಾ ಭಾಷೆಗಳಲ್ಲಿಯೂ ಅದೇ ಪದ ಇರುವಂತೆ ತಿಳಿಯುತ್ತಿದೆ. ಜೀವಿಯಿಂದ ಮಾಮ ಎಂದು ಕರೆಸಿಕೊಳ್ಳುವ ಯೋಗ್ಯತೆ ಒಂದು ಆತ್ಮಕ್ಕೆ ಮಾತ್ರ ಇದೆಯೆಂದು ತಿಳಿದುಕೊಳ್ಳ ಬಹುದು. ಜ್ಞಾನ ತಿಳಿಯದ ಅಜ್ಞಾನಿಗಳಾದರು ಮಾಮ ಎನ್ನುವ ಪದವನ್ನು ಬಳಸುತ್ತಿದ್ದಾರೆ, ಆದರೆ ಆ ಪದದಲ್ಲಿನ ಅಂತರಾರ್ಥ ತಿಳಿದಿಲ್ಲ. ಈಗಲಾದರೂ ಅಮ್ಮಾ ಎಂದರೆ ನನ್ನದು ಅಲ್ಲದಿರುವುದೆಂದು, ಮಾಮ ಎಂದರೆ ನನ್ನದು ಎಂದು ತಿಳಿದುಕೊಂಡರೆ, ನಿನ್ನ ಮಾಮನಾದ ಆತ್ಮದ ಮೂಲಕ ನಿನ್ನ ತಂದೆಯಾದ ಪರಮಾತ್ಮನನ್ನು ಸುಲಭವಾಗಿ ತಿಳಿದುಕೊಳ್ಳುತ್ತೀಯಾ. ಜೀವಿಯು ಪುರುಷನು, ಪ್ರಕೃತಿ ಸ್ತ್ರೀ ಎಂದು ಮೊದಲೇ ತಿಳಿದುಕೊಂಡಿದ್ದೇವೆ. ಪುರುಷನಾದ ಜೀವಿಗೆ ಪುರುಷರಾದ ಆತ್ಮ, ಪರಮಾತ್ಮರು ಯಾವಾಗಲು ಜೊತೆ ಇರುತ್ತಾರೆಂದು ತಿಳಿಯುವಂತೆ "ಮಾ" ಪಕ್ಕದಲ್ಲಿ "ಮ" ಇಟ್ಟು "ಮಾಮ" ಎಂದು, "ನಾ" ಪಕ್ಕದಲ್ಲಿ "ನ" ಇಟ್ಟು "ನಾನ" ಎಂದು "ತಾ" ಪಕ್ಕದಲ್ಲಿ "ತ" ಇಟ್ಟು "ತಾತ" ಎಂದು ಪುರುಷರನ್ನು ಕರೆಯುತ್ತಿದ್ದೇವೆ. ಇಲ್ಲ ಅಲ್ಲ ಅನ್ನುವುದಕ್ಕೆ "ಅ" ಅಕ್ಷರ ಉಪಯೋಗಿಸುತ್ತೇವೆಂದು ತಿಳಿದುಕೊಂಡಿದ್ದೇವೆ. ಪ್ರಕೃತಿ (ಮಾಯೆ) ನಿನ್ನದು

ಅಲ್ಲವೆನ್ನುವಂತೆ ಸ್ತ್ರೀಯನ್ನು ಕರೆಯುವಾಗ "ಅ" ಅನ್ನುವ ಅಕ್ಷರವನ್ನು ಉಪಯೋಗಿಸಿ "ಅಮ್ಮಾ" "ಅತ್ತೆ" "ಅವ್ವ" ಎಂದು ಕರೆಯುತ್ತಿದ್ದೇವೆ. ತಂದೆಗೆ ಅಮ್ಮ, ಮಾಮನಿಗೆ ಅತ್ತೆ, ತಾತನಿಗೆ ಅವ್ವ ಎಂದು ಪ್ರತ್ಯೇಕ ಪದಗಳಾಗಿ ಹೊಂದಿವೆಂದು ತಿಳಿಯಬೇಕು. ಪುರುಷನಾದ ಆತ್ಮ, ಪರಮಾತ್ಮ ವಿಷಯದಲ್ಲಿ ಮೊದಲಿರುವ ಅಕ್ಷರವೇ ಎರಡನೇ ಅಕ್ಷರವಾಗಿ ಇದೆ. ಅಪ್ಪ (ನಾನ), ಮಾಮ, ತಾತ ಎಂದು ಇರುವುದರಿಂದ ಜೀವಾತ್ಮಹಿಂದೆಯೇ ಸ್ವಲ್ಪ ವ್ಯತ್ಯಾಸದಿಂದ ಆತ್ಮ ಇದೆಯೆಂದು ತಿಳಿಯುತ್ತಿದೆ. ಸ್ತ್ರೀತತ್ತ್ವವನ್ನು ತಿಳಿಸುವ ಪ್ರಕೃತಿ ವಿಷಯದಲ್ಲಿ ಉಚ್ಚರಿಸಲ್ಪಡುವ ಪದದಲ್ಲಿ "ಅ" ಎಂದು ಮೊದಲೇ ಹೇಳಲಾಗುತ್ತಿದೆ. ಅಮ್ಮ, ಅತ್ತೆ, ಅಜ್ಜಿ (ಅವ್ವ) ಎಂದು ಇರುವುದರಿಂದ, ಆ ನಂತರ ಇರುವ ಅಕ್ಷರಕ್ಕೆ ಮ ಗೆ ಮ ವತ್ತು, ತ ಗೆ ತ ವತ್ತು, ವ ಗೆ ವ ವತ್ತು ಇರುವುದರಿಂದ, ವತ್ತಿ ಹೇಳುತ್ತಿರುವುದರಿಂದ ಕಾಣಿಸುವುದು ಪ್ರಕೃತಿ ಎಂದು, ಪ್ರಕೃತಿ ಜೀವಿದು ಅಲ್ಲವೆಂದು ಅ ಕಾರದಿಂದ ತಿಳಿಯುತ್ತಿದೆ. ಮುಖ್ಯವಾಗಿ ನಾವು ತಿಳಿದುಕೊಳ್ಳಬೇಕಾಗಿರುವುದು ಮಾಮನನ್ನು ಕುರಿತು, ಆದ್ದರಿಂದ ಶರೀರದಲ್ಲಿನ ಆತ್ಮವನ್ನು ಕುರಿತು ಜೀವಾತ್ಮ ತಿಳಿದುಕೊಂಡಾಗಲೇ ಆಧ್ಯಾತ್ಮಿಕ ಎಂದರೆ ಏನೋ ತಿಳಿಯುತ್ತದೆ.

# ರಾತ್ರಿ – ಹಗಲು

ಕಾಲವನ್ನು ಎರಡು ವಿಧಗಳ ಹೆಸರುಗಳಾಗಿ ವಿಭಜಿಸಲಾಗಿದೆ. ಒಂದು ರಾತ್ರಿ, ಎರಡನೆಯದು ಹಗಲು ಎಂದು ಕರೆಯುವುದು ಎಲ್ಲರಿಗೂ ತಿಳಿದಿರುವುದೇ. ಈ ಎರಡು ವಿಧಗಳ ರಾತ್ರಿ ಹಗಲನ್ನುವ ಕಾಲವನ್ನು ಪರಮಾತ್ಮ ಪರವಾದ ರಾತ್ರಿ ಹಗಲುಗಳಾಗಿ, ಹಾಗೆ ಪ್ರಕೃತಿ ಪರವಾದ ರಾತ್ರಿ ಹಗಲಾಗಿಯೂ ಎರಡು ವಿಧಗಳಾಗಿ ಸಹ ವಿಭಜಿಸಲಾಗಿದೆ. ಪರಮಾತ್ಮ ಪರವಾದ ಹಗಲು ಸಾವಿರ ಯುಗಗಳು, ರಾತ್ರಿ ಸಾವಿರ ಯುಗಗಳು ಎಂದು ಭಗವದ್ಗೀತೆಯಲ್ಲಿ ಹೇಳಿದ್ದಾರೆ. ಪರಮಾತ್ಮ ಹಗಲಾದ ಸಾವಿರ ಯುಗಗಳ ಕಾಲದಲ್ಲಿ ಈ ಪ್ರಪಂಚವೆಲ್ಲಾ ಇದೆ. ಜೀವರಾಶಿಗಳು ಹುಟ್ಟುವುದು, ಜೀವನ ಸಾಗಿಸುವುದು ಕೊನೆಗೆ ಗಿಟ್ಟುವುದು

(ಸಾಯುವುದು) ಸಹಜವಾಗಿ ನಡೆಯುತ್ತಿದೆ. ಪರಮಾತ್ಮ ರಾತ್ರಿಯಾದ ಸಾವಿರ ಯುಗಗಳ ಕಾಲದಲ್ಲಿ ಪ್ರಪಂಚ ಇಲ್ಲ, ಜೀವರಾಶಿಗಳು ಇಲ್ಲ. ಅಗ್ನಿ, ನೀರು, ಭೂಮಿ, ಆಕಾಶ, ಗಾಳಿ ಯಾವುದೂ ಇಲ್ಲ. ಅದು ಶೂನ್ಯವು ಸಹ ಅಲ್ಲ. ಅದು ಏನೋ ಊಹಿಸಿ ಸಹ ಹೇಳದಿರುವುದು. ಯಾವ ಶಾಸ್ತ್ರಜ್ಞನ ಪರಿಶೋಧನೆಗೂ ಸಹ ಸಿಗದಿರುವುದು. ಭಗವದ್ಗೀತೆಯಲ್ಲಿ ವ್ಯಕ್ತವಾಗದಿರುವುದೆಂದು ಸಹ ಹೇಳಿದ್ದಾರೆ.

ಎರಡನೆಯದಾದ ನಮಗೆ ತಿಳಿದ ಪ್ರಕೃತಿ ಪರವಾದ ರಾತ್ರಿಹಗಲು ವಿಷಯಕ್ಕೆ ಬಂದರೆ ರಾತ್ರಿ 12 ಗಂಟೆಗಳ ಕಾಲ, ಹಗಲು 12 ಗಂಟೆಗಳ ಕಾಲ ಎಲ್ಲರಿಗೂ ತಿಳಿದಿರುವುದೇ. ಹಗಲು ಪ್ರತಿಯೊಬ್ಬರು ಯಾವುದೋ ಒಂದು ಕೆಲಸದಲ್ಲಿ ನಿಮಗ್ನವಾಗುವುದು ವಿಧವಿಧಗಳ ಕಾರ್ಯಾಚರಣೆಗಳಿಂದ ಪ್ರಪಂಚವೆಲ್ಲ ತುಂಬಿಹೋಗುವುದು ನಡೆಯುತ್ತಿದೆ. ರಾತ್ರಿಕಾಲದಲ್ಲಿ ಕಾರ್ಯಾಚರಣೆಗಳನ್ನು ಬಿಟ್ಟು ನಿದ್ರೆಯೊಳಗೆ ಹೋಗಿ ಏನು ತಿಳಿಯದ ಸ್ಥಿತಿಯಲ್ಲಿ ಇರುವುದು ನಡೆಯುತ್ತಿದೆ. ಪರಮಾತ್ಮ ವೊಂದರ ಹಗಲು ರಾತ್ರಿಗೆ, ಜೀವರಾಶಿಗಳೊಂದರ ಹಗಲು ರಾತ್ರಿಗೆ ಹತ್ತಿರ ಸಂಬಂಧ ಹೋಲಿಕೆಗಳಿವೆ. ಪರಮಾತ್ಮ ಒಂದರ ಹಗಲಿನಲ್ಲಿ ಪ್ರಪಂಚ ಕಾಣಿಸುತ್ತಿದೆ. ಜೀವರಾಶಿಗಳೊಂದರ ಪರಿವರ್ತನೆ ಪರಿಣಾಮಗಳು ನಡೆಯುತ್ತಿವೆ. ಹಾಗೆ ಜೀವರಾಶಿಗಳ ಹಗಲಿನಲ್ಲಿ ಜೀವಿಗೆ ಪ್ರಪಂಚ ಕಾಣಿಸುತ್ತಿದೆ. ಉಳಿದ ಜೀವಿಗಳ ಸ್ಥಿತಿಗತಿಗಳು ಕಾಣಿಸುತ್ತಿವೆ. ತನ್ನೊಂದರ ಸ್ಥಿತಿಗತಿಗಳು ಸಹ ತಿಳಿಯುತ್ತಿವೆ. ಈ ವಿಧವಾಗಿಯೇ ಪರಮಾತ್ಮ ರಾತ್ರಿಯಲ್ಲಿ ಪ್ರಪಂಚ ಇಲ್ಲ. ಜೀವರಾಶಿಗಳು ಇಲ್ಲ. ಹಾಗೆ ಜೀವರಾಶಿಗಳ ರಾತ್ರಿ (ನಿದ್ರೆ) ಯಲ್ಲಿ ಪ್ರಪಂಚ ಇದ್ದರೂ ಕಾಣಿಸುವುದಿಲ್ಲ. ಇಲ್ಲೊಂದು ಪ್ರಶ್ನೆ ಉದ್ಭವಿಸಬಹುದು. ಅದೇನೆಂದರೆ! ರಾತ್ರಿಯಲ್ಲಿ ಏನು ತಿಳಿಯುವುದಿಲ್ಲವೆಂದಿದ್ದಾರಲ್ಲವೆ! ನಾವು ರಾತ್ರಿ ಸಮಯ ಎಚ್ಚರಗೊಂಡಾಗ ಎಲ್ಲಾ ತಿಳಿಯುತ್ತಿದೆ ತಾನೆ! ಅಂಥದರಲ್ಲಿ ರಾತ್ರಿಸಮಯ ಏನು ಇಲ್ಲ ಎಂಬುವುದು ಹೇಗೆ? ಇದಕ್ಕೆ ನಮ್ಮ ಸಮಾಧಾನ.

ರಾತ್ರಿ ಹಗಲು ಅನ್ನುವಮಾತು ಜೀವರಾಶಿಗಳ ಮೊತ್ತಕ್ಕೆ ತಿಳಿಸಿರುವುದು. ಸಹಜವಾಗಿ ರಾತ್ರಿ ನಿದ್ರೆಮಾಡುವುದು, ಹಗಲು ಎಚ್ಚರವಾಗಿರುವುದು ನಡೆಯುತ್ತಿದೆ. ಆದ್ದರಿಂದ ಜೀವಸಮುದಾಯಕ್ಕೆ ಹೇಳಿರುವುದೆಂದು ತಿಳಿಯಬೇಕು. ರಾತ್ರಿ ಸಹ ಪ್ರಪಂಚವಿದೆ ನಿದ್ರೆಮಾಡುವಾಗ ಮಾತ್ರ ತಿಳಿಯುವುದಿಲ್ಲ. ಆದ್ದರಿಂದಲೇ ಇದ್ದರೂ ತಿಳಿಯುವುದಿಲ್ಲ ಎಂದು ಹೇಳಿದ್ದೇವೆ. ನಿದ್ರೆಯಿಂದ ಎಚ್ಚರಗೊಂಡಾಗ ಮಾತ್ರ ತಿಳಿಯುತ್ತದೆ. ನಿದ್ರಾವಸ್ಥೆಯಲ್ಲಿ ಏನೂ ತಿಳಿಯುವುದಿಲ್ಲ. ಹಾಗೆ ಬ್ರಹ್ಮ ಹಗಲಿನಲ್ಲಿರುವ ಪ್ರಪಂಚ ಬ್ರಹ್ಮರಾತ್ರಿಯಲ್ಲಿ ಇಲ್ಲ ಎಂದಿದ್ದಾರೆ. ಅಲ್ಲಿ ನಾವು ಇಲ್ಲ ಎಲ್ಲಾ ಅವ್ಯಕ್ತ ಎಂದಿದ್ದಾರೆ. ಆದರೆ ಮುಕ್ತಿಹೊಂದಿದವನಿಗೆ ನಮಗೆ ತಿಳಿಯದಿರುವದೇನೊ ಅವನಿಗೆ ತಿಳಿಯುತ್ತಿದೆ. ಬ್ರಹ್ಮರಾತ್ರಿಯಲ್ಲಿ ಜಗತ್ತೆ ಇಲ್ಲವೆಂದಿದ್ದಾರೆ. ಆದರೆ ಏನೊ ಒಂದು ಉಳಿದಿದೆ. ಸರ್ವಕ್ಕು ಕಾರಣವಾದ ಅದು ಏನೊ, ಆ ಉಳಿದಿರುವುದೇನೊ, ಅವ್ಯಕ್ತದಲ್ಲಿ ಸಹಾ ವ್ಯಕ್ತವಾಗಿ ಇರುವುದೇನೊ, ಮುಕ್ತಿಹೊಂದಿದವನಿಗೆ ಮಾತ್ರ ತಿಳಿಯುತ್ತದೆ. ಹಾಗೆ ನಮ್ಮ ರಾತ್ರಿಕಾಲದಲ್ಲಿ ನಿದ್ರೆಯಲ್ಲಿ ಏನು ತಿಳಿಯದಂತಿದೆ. ರಾತ್ರಿ ಎಚ್ಚರಗೊಂಡವನು ಉಳಿದವರು ನೋಡದಿದ್ದರೂ ತಾನು ಪ್ರಪಂಚವನ್ನು ಹೇಗೆ ನೋಡುತ್ತಿದ್ದಾನೋ, ಹಾಗೆ ಪ್ರಳಯದಲ್ಲಿ ಜೀವರಾಶಿಗಳೆಲ್ಲ ತಿಳಿಯದ ಸ್ಥಿತಿಯೊಳಗೆ ಹೋದಾಗ ಸಹ ಇರುವುದನ್ನು ನೋಡುವವನು ಮುಕ್ತಿಹೊಂದಿದವನೆಂದು ತಿಳಿಯಬೇಕು.

ಹಗಲು ರಾತ್ರಿಯೊಂದರ ವಿಶಿಷ್ಠತೆ ತಿಳಿದುಕೊಂಡಂತೆ ಆ ಹೆಸರುಗಳನ್ನು ನಮ್ಮ ಹಿರಿಯರು ಕಾಲಕ್ಕೆ ನಾಮಕರಣ ಮಾಡಿದ್ದಾರೆ. **ರಾತ್ರಿ, ಹಗಲು** ಎಂದು ಹೆಸರು ಹೊಂದಿದವುಗಳಲ್ಲಿ ವಿಶೇಷಾರ್ಥ ಅಳವಡಿಸಿದ್ದಾರೆ. ಆ ವಿಶೇಷಾರ್ಥವೇನೋ ಕೆಳಗೆ ನೋಡೋಣ.

ಕಾಲವನ್ನು ಭೂತಕಾಲ, ವರ್ತಮಾನಕಾಲ ಮತ್ತು ಭವಿಷ್ಯತ್ತು ಕಾಲಗಳೆಂದು ಮೂರು ಭಾಗಗಳಾಗಿ ಹೇಳಿಕೊಳ್ಳುತ್ತಿರುವುದು ಸಹಜ. ನಡೆದ ಕಾಲವನ್ನು ಭೂತಕಾಲವೆಂದು, ನಡೆಯುತ್ತಿರುವ ಕಾಲವನ್ನು ವರ್ತಮಾನ ಕಾಲವೆಂದು, ನಡೆಯುವಂತಹ ಕಾಲವನ್ನು ಭವಿಷ್ಯತ್ತು ಕಾಲವೆಂದು, ಹಿರಿಯರು

ತಿಳಿಸಿದ್ದಾರೆ. ಈ ಮೂರು ಕಾಲಗಳನ್ನು ತ್ರಿಕಾಲಗಳೆನ್ನುತ್ತಿದ್ದರು. ನಾವು ಎಚ್ಚರವಾಗಿರುವಾಗ ನಮಗೆ ನಡೆದಿರುವುದು ತಿಳಿದಿದೆ, ನಡೆಯುತ್ತಿರುವುದು ಸಹ ಗೊತ್ತು, ನಂತರ ಏನೊ ಒಂದು ನಡೆಯುತ್ತದೆಂದು ಸಹ ಗೊತ್ತು. ಅದೇ ನಿದ್ರೆಹೋದಾಗ ನಡೆದಿರುವುದು, ನಡೆಯುತ್ತಿರುವುದು. ಮುಂಬರುವುದು ಏನು ಗೊತ್ತಿಲ್ಲ. ನಿದ್ರಾಸ್ಥಿತಿ ಅಗಮ್ಯಗೋಚರವಾದುದು. ಬ್ರಹ್ಮರಾತ್ರಿಯಾದ ಪ್ರಳಯಕಾಲದಲ್ಲಿ ಏನೂ ತಿಳಿಯದಂತೆ ನಿದ್ರೆ ಸ್ಥಿತಿಯಲ್ಲಿ ಏನೂ ತಿಳಿಯುವುದಿಲ್ಲ. ನಿದ್ರೆ ಎಲ್ಲವನ್ನು ಸ್ತಂಭಿಸುವಂತೆ ಮಾಡುವುದು. ಸಹಜವಾಗಿ ಇಂತಹ ನಿದ್ರೆ ರಾತ್ರಿಸಮಯದಲ್ಲಿಯೇ ಬರುತ್ತದೆ. ಆದ ಕಾರಣ ಅದನ್ನು ನಾವು ಅರ್ಥ ಮಾಡಿಕೊಳ್ಳುವಂತೆ ಆ ಕಾಲಕ್ಕೆ ರಾತ್ರಿ ಎಂದು ಹೆಸರಿಡುವುದು ನಡೆದಿದೆ. ಭೂತ, ಭವಿಷ್ಯತ್, ವರ್ತಮಾನಗಳಾದ ಮೂರುಕಾಲಗಳನ್ನು **'ತ್ರಿ'** ಎಂದು ಆ ಮೂರು ಸಹಜವಾಗಿ ಜೀವರಾಶಿಗಳಿಗೆ ಇಲ್ಲದ ಸಮಯವನ್ನು **ರಾತ್ರಿ** ಎನ್ನುವುದು ನಡೆಯುತ್ತಿದೆ. **ತ್ರಿ** ಎಂದರೆ ಮೂರು, **ರಾ** ಎಂದರೆ ರಹಿತ, ರಹಿತವೆಂದರೆ ಇಲ್ಲದೆಂದು ಅರ್ಥ. **'ರಾತ್ರಿ'** ಎಂದರೆ ಮೂರು ಕಾಲಗಳು ಇಲ್ಲದೆಂದು ಅರ್ಥ. ತ್ರಿ ಕಾಲಗಳು ಇಲ್ಲದ್ದು **ರಾತ್ರಿ**. ತ್ರಿ ಗುಣಗಳು ಇಲ್ಲದಿರುವುದು **'ರಾತ್ರಿ'**. **ತ್ರಿ** ಅವಸ್ಥೆಗಳು ಇಲ್ಲದಿರುವುದು **'ರಾತ್ರಿ'**. ಇಂತಹ ವಿಶಿಷ್ಠಾರ್ಥವನ್ನು ಕೊಡುವ ರಾತ್ರಿ ಎನ್ನುವ ಪದ ಮುಖ್ಯವಾದ ಸಂಸ್ಕೃತ ಭಾಷೆಯಲ್ಲಿ, ಹಿಂದಿ, ತೆಲುಗು ಮತ್ತೆ ಕೆಲವು ಭಾಷೆಗಳಲ್ಲಿಯೂ ಭಾಷಾಭೇದ ಇಲ್ಲದಂತೆ **ರಾತ್ರಿ** ಎಂದೇ ಉಚ್ಚರಿಸಲ್ಪಡುತ್ತಿದೆ ಎಂದು ತಿಳಿಯಬೇಕು. ತ್ರಿಗುಣ, ತ್ರಿಕಾಲ, ತ್ರಿ ಅವಸ್ಥೆಗಳು ಇಲ್ಲದ ರಾತ್ರಿ ಹಾಗೆ ಎಲ್ಲಾ ಇರುವ ಹಗಲೂ ಎಲ್ಲರಿಗೂ ತಿಳಿದಿರುವವೆ.

ರಾತ್ರಿ ಮುಗಿದ ತಕ್ಷಣ ಹಗಲು ಪ್ರಾರಂಭವಾಗುತ್ತಿದೆ. ಆ ಎಚ್ಚರಿಕೆಯ ಕಾಲದಲ್ಲಿ ಆರು ಗುಣಗಳಲ್ಲಿನ ಮೊದಲನೆಯದಾದ **'ಆಸೆ'**, ಕೊನೆಯದಾದ **ಅಸೂಯೆ (ಮತ್ಸರ)** ಹೆಚ್ಚಾಗಿ ಕೆಲಸಮಾಡುತ್ತಿವೆ.

ಷಟ್ ಗುಣವರ್ಗವಾದ ಕಾಮ, ಕ್ರೋಧ, ಲೋಭ, ಮೋಹ, ಮಧ, ಮತ್ಸರ ಅನ್ನುವ ಆರು ಗುಣಗಳಲ್ಲಿ ಪ್ರತಿಯೊಬ್ಬರ ಜೀವನ ವಿಧಾನ ಆಸೆ

ಇಲ್ಲದ್ದು ಇಲ್ಲವೇ ಇಲ್ಲವೆಂದು ಹೇಳಬಹುದು. ಭಗವದ್ಗೀತೆಯಲ್ಲಿ **“ಕಾಮತ್ ಕ್ರೋಧೋಭಿ ಜಾಯತೇ’** ಎನ್ನುವಂತೆ ಆಸೆಯಿಂದ ಕೋಪ ಹುಟ್ಟುವುದು ಸಹಜ. ಮಾನವನ ಜೀವನದಲ್ಲಿ ಮೊದಲನೆಯದಾದ ಕಾಮ ಅದಕ್ಕೆ ಜೊತೆಯಾಗಿ ಕೋಪ ಹಾಗೆ ಕೊನೆಯದಾದ ಅಸೂಯೆ ತಪ್ಪದೆ ಇವೆ. ಕಾಮ, ಕ್ರೋಧ, ಅಸೂಯೆ ಮೂರು ಒಂದು ಭಾಗವಾಗಿ ಉಳಿದ ಲೋಭ, ಮೋಹ, ಮಧಗಳು ಮೂರು ಮತ್ತೊಂದು ಭಾಗವಾಗಿ ಹೇಳಬಹುದು. ಲೋಭ, ಮೋಹ, ಮಧಗಳು ಅಷ್ಟು ಪ್ರಭಾವವಾದವು ಅಲ್ಲ, ಆದ್ದರಿಂದ ಅವು ಕೆಲವರಲ್ಲಿ ಕೆಲಸಮಾಡುತ್ತಿರುತ್ತವೆ. ಕೆಲವರಲ್ಲಿ ಅವುಗಳ ಪ್ರಭಾವ ಅಷ್ಟಾಗಿ ಇರುವುದಿಲ್ಲ. ಲೋಭ, ಮೋಹ, ಮಧಗಳು ಇಲ್ಲದವರಲ್ಲಿ ಸಹ ಆಸೆ, ಕೋಪ, ಅಸೂಯೆಯನ್ನು ನಾವು ನೋಡಬಹುದು. ಇದರಿಂದ ಆರು ಗುಣಗಳಲ್ಲಿ ಸಹಾ ಮೂರು ಹೆಚ್ಚಾಗಿ ಪ್ರಭಾವವಾದವು, ಮೂರು ಅಷ್ಟಾಗಿ ಪ್ರಭಾವ ಇಲ್ಲದವಾಗಿ ತಿಳಿಯಬೇಕು.

ಪ್ರಭಾವವಾದ ಕಾಮ, ಕ್ರೋಧ, ಅಸೂಯ ಗುಣಗಳೇ ಪ್ರತಿ ಮಾನವನಲ್ಲಿ ಕೆಲಸಮಾಡುತ್ತಿವೆ. ಕಾಮದಿಂದಲೇ ಕ್ರೋಧ, ಕ್ರೋಧದಿಂದಲೇ ಅಸೂಯ ಏರ್ಪಡುತ್ತಿವೆ. ಆಸೆಯಿಂದ ಕೊನೆಯ ಪರ್ಯವಸಾನವಾಗಿ ಶತೃತ್ವ ಏರ್ಪಡುತ್ತಿದೆ. ಇವುಗಳ ಪ್ರಭಾವವಿರುವ ಪ್ರತಿಯೊಬ್ಬರಿಗೂ ಚಿಕ್ಕ ದೊಡ್ಡ ಶತ್ರುಗಳು ಇದ್ದೇ ಇರುತ್ತಾರೆ. ನಿನಗೆ ಶತ್ರುಗಳು ಇಲ್ಲದಿದ್ದರೂ, ನೀನು ಅಜಾತ ಶತ್ರುವಾದರೂ, ನೀನು ಬೇರೆಯವರಿಗೆ ಶತ್ರುವಾಗಿರಬಹುದು. ಧರ್ಮರಾಜನಿಗೆ ಶತ್ರುಗಳು ಇಲ್ಲದಿದ್ದರೂ ದುರ್ಯೋಧನನಿಗೆ ಧರ್ಮರಾಜನು ಶತ್ರುವಾದಂತೆ, ಗುಣಗಳ ಪ್ರಭಾವದಿಂದ ನೀನು ಅವರಿಗೊ, ಅವರು ನಿನಗೊ ಶತ್ರುಗಳಾಗುವುದು ಸಹಜ. ಕಾಮ, ಕ್ರೋಧ, ಮತ್ಸರ ಅನ್ನುವ ಗುಣಗಳಿಂದ ಪ್ರತಿ ಜೀವನದಲ್ಲಿಯೂ ಶತ್ರುತ್ವ (ಹಗಲು) ಇದ್ದೇ ಇವೆ.  ಆದ್ದರಿಂದ ಗುಣಗಳ ಪ್ರಭಾವದಿಂದ ಪ್ರಾರಂಭಿಸಲ್ಪಡುವ ಎಚ್ಚರಿಕೆಯ ಕಾಲವನ್ನು **‘ಹಗಲು’** ಎಂದು ಹಿರಿಯರು ಹೆಸರಿಟ್ಟಿದ್ದಾರೆ. ಹಗ ಎಂದರೆ ಶತ್ರುತ್ವ ಪ್ರತಿ ಜೀವನವು ಶತ್ರುತ್ವದಿಂದ ಕೂಡಿಕೊಂಡಿದೆ. ಆದ್ದರಿಂದ ಜೀವನಕಾಲ ಜಾರಿಗೆಯಾಗುವ ಎಚ್ಚರಿಕೆಯ 12

ಗಂಟೆಗಳಕಾಲವನ್ನು **'ಹಗಲು'** ಎಂದಿದ್ದಾರೆ. ಹಗಲಿನಿಂದ ಕೂಡಿಕೊಂಡ ನಮ್ಮ ಜೀವನಗಳು ದೈವಚಿಂತನೆ ಉಂಟಾಗಬೇಕೆಂದರೆ, ಗುಣಗಳ ಪ್ರಭಾವ ಸ್ಥಗಿತಮಾಡಿಕೊಳ್ಳಬೇಕೆಂದು ಗುರುತು ಮಾಡಿಕೊಳ್ಳುವಂತೆ **'ಹಗಲು'** ಎನ್ನುವ ಪದದಿಂದ ನಾಮಕರಣ ಮಾಡಿದ್ದಾರೆ. ಗುಣಗಳಿಂದಲೇ ಹಗಲು ಏರ್ಪಡುತ್ತಿದೆ ಎಂದು ಎಚ್ಚರಿಕೆಯಾದ 12 ಗಂಟೆಗಳಕಾಲ ಗುಣಗಳಿಗೆ ಸರಿಹೋಗುತ್ತಿದೆ ಎಂದು ತಿಳಿಸುವುದಕ್ಕೋಸ್ಕರ **'ಹಗಲು'** ಎಂಬ ಹೆಸರಿಟ್ಟಿದ್ದಾರೆ. ಹಗಲಿನಲ್ಲಿ ತುಂಬಿದ ಗುಣಗಳು ರಾತ್ರಿಯಲ್ಲಿ ಇಲ್ಲ. ಆದ್ದರಿಂದ ಹಗಲು ಅಜ್ಞಾನ ಸಂಬಂಧವಾದುದೆಂದು, ರಾತ್ರಿ ಜ್ಞಾನ ಸಂಬಂಧವಾದುದೆಂದು, ಹಾಗೆ ರಾತ್ರಿ ಪರಮಾತ್ಮ ಸ್ವರೂಪವಾದುದೆಂದು, ಹಗಲು ಮಾಯ ಸ್ವರೂಪವಾದುದೆಂದು ಹಿರಿಯರು ತಿಳಿಸಿದ್ದಾರೆ. ರಾತ್ರಿಯಲ್ಲಿ ಇಲ್ಲದಿರುವವು ಹಗಲಿನಲ್ಲಿ ಇವೆ. ಕಾಣಿಸುವುದು ಮಾಯೆ, ಕಾಣಿಸದಿರುವುದು ದೈವ. ಈ ವಿವರಣೆಯಿಂದ ತಿಳಿಯದ ರಾತ್ರಿ–ದೇವರು, ತಿಳಿಯುವ ಹಗಲು–ಮಾಯೆ. ಜೀವಾತ್ಮನಾದ ನಾವು ತಿಳಿಯದ ಪರಮಾತ್ಮನಲ್ಲಿ ಎಚ್ಚರಿಕೆ ಇಲ್ಲದವರಾಗಿ, ತಿಳಿಯಲ್ಪಡುತ್ತಿರುವ ಮಾಯೆಯಲ್ಲಿ ಎಚ್ಚರ ಇರುವವರಾಗಿ ಇದ್ದೇವೆ. ಹಾಗಲ್ಲದೆ ತಿಳಿಯದಿರುವ ದೇವರಲ್ಲಿ ಸಹ ಎಚ್ಚರ ಇರುವವರಾಗಿ ದೈವತ್ವವೇನೋ ಅದರ ಅನುಭೂತಿ ಏನೊ ತಿಳಿದುಕೊಳ್ಳಬೇಕು. ಜ್ಞಾನ ಇರುವ ದೊಡ್ಡವರು ಎಷ್ಟೋ ಅನುಭವದಿಂದ ಯೋಚಿಸಿ ನಾವು ಜ್ಞಾನ ತಿಳಿದುಕೊಂಡು ದೈವಮಾರ್ಗದಲ್ಲಿ ನಡೆಯಬೇಕೆಂದು ವಿಶೇಷಾರ್ಥ ಕೊಡುವಂತೆ ಕಾಲಕ್ಕೆ **'ರಾತ್ರಿ', 'ಹಗಲು'** ಎಂದು ಹೆಸರಿಡುವುದು ನಡೆದಿದೆ. ಅವುಗಳನ್ನು ಕುರಿತು ಯೋಚಿಸಿದರೆ ಹಗಲು ಬಿಟ್ಟು ರಾತ್ರಿಯನ್ನು ಸೇರುವುದಕ್ಕೆ ಪ್ರಯತ್ನಿಸುತ್ತಾರೆ. ಹಗಲು ರಾತ್ರಿವೊಂದರ ತಾರತಮ್ಯ ಏನೊ ತಿಳಿಯುತ್ತಾರೆ.

ಪರಮಾತ್ಮನಿಂದ ಸಮಸ್ತವು ಹುಟ್ಟಿದೆ, ಮತ್ತು ಮಾಯೆ ಅಥವಾ ಗುಣಗಳು ಎಲ್ಲವೂ ಹುಟ್ಟಿವೆ. ಪ್ರಪಂಚದಿಂದ ಪರಮಾತ್ಮ ಹುಟ್ಟಲಿಲ್ಲ. ಪರಮಾತ್ಮನಿಂದಲೇ ಪ್ರಪಂಚ ಹುಟ್ಟಿದೆ. ಮಾಯೆಗೆ ಹೆಸರಾದ ಹಗಲು, ಪರಮಾತ್ಮಕ್ಕೆ ಬದಲಿಹೆಸರಾದ ರಾತ್ರಿಯಿಂದಲೇ ಹುಟ್ಟಿದೆ. ದೇವರಿಂದ

ಹುಟ್ಟಿರುವುದೇ ಮಾಯೆ. ಮಾಯೆಯಿಂದ ದೇವರು ಹುಟ್ಟಲಿಲ್ಲ. ದೈವಸ್ವರೂಪವಾದ ರಾತ್ರಿಯಿಂದ ಮಾಯಸ್ವರೂಪವಾದ ಹಗಲು ಹುಟ್ಟಿದೆ. ಆದ್ದರಿಂದ ದೊಡ್ಡವರು ವರಸೆಕ್ರಮದಲ್ಲಿ **'ರಾತ್ರಿ ಹಗಲು'** ಎಂದಿದ್ದಾರೆ. **'ರಾತ್ರಿಹಗಲುಗಳು'** ಎನ್ನುವುದು ಸಹ ಇದೆ, ಆದರೆ **'ಹಗಲು ರಾತ್ರಿಗಳು'** ಎನ್ನುವುದು ಇಲ್ಲ. ದೈವದಿಂದ ಹುಟ್ಟಿದ ನಾವು ಹಗಲೆಷ್ಟುಕಾಲ ಕಳೆದರೂ ಮತ್ತೆ ರಾತ್ರಿಯನ್ನು ಸೇರಬೇಕಾಗಿದ್ದೆ. ನೀನು ಎಂತಹವನಾದರೂ, ಎಷ್ಟು ಧನಿಕನಾದರೂ, ದೊಡ್ಡ ಪೊಲೀಸ್ ಆಫೀಸರ್ ಆದರೂ, ರಾಜಕೀಯನಾಯಕನಾದರೂ ಪುನಃ ಪುನಃ ನನ್ನ ಹತ್ತಿರಕ್ಕೆ ಬರಬೇಕಾಗಿದೆಯೆಂಬ ದೈವ ಸೂಚನೆ ಪ್ರಕಾರ ಪ್ರತಿಯೊಬ್ಬನು ಯಾವ ಕೆಲಸಮಾಡುವವನಾದರು ಕೊನೆಗೆ ನಿದ್ರೆಯೊಳಗೆ ಜಾರಿಕೊಳ್ಳುತ್ತಿದ್ದಾನೆ. ಎಷ್ಟು ಹುಷಾರು ಹೊಂದಿದವನಾದರೂ ನಿದ್ರೆಯೊಳಗೆ ಜಾರಿಹೋಗಬೇಕಾಗಿದ್ದೆ. ಅಂದರೆ ಯಾರಾದರೂ ನನ್ನ ಹತ್ತಿರಕ್ಕೆ ಬರಬೇಕಾಗಿದೆಯೆಂಬ ಸೂಚನೆ. ಮತ್ತೆ ಬೆಳಗ್ಗೆ ಎಚ್ಚರಗೊಂಡರು ನಿದ್ರೆಯಪರಿಸ್ಥಿತಿ ಯಾರಿಗೂ ತಿಳಿಯುವುದಿಲ್ಲ. ನಿದ್ರೆಯನ್ನು ತಿಳಿಯದವನು ಪ್ರಪಂಚಪರವಾಗಿ ಎಷ್ಟು ತಿಳಿದವನಾದರೂ ಏನು ತಿಳಿಯದವನೆಂದೇ ಹೇಳಲಾಗುತ್ತದೆ.

ಗುಣಗಳ ಪ್ರಭಾವ ತಿಳಿದು, ಅವುಗಳಲ್ಲಿ ಮೂರು ಪ್ರಭಾವವಾದವೆಂದು ತಿಳಿದು, ಅವುಗಳ ಹಗಲು ತಿಳಿದು, ಹಾಗೆ ತ್ರಿರಹಿತವಾದ ರಾತ್ರಿಯನ್ನು ತಿಳಿದು, ಅದರಲ್ಲಿನ ನಿದ್ರೆಯನ್ನು ತಿಳಿದು, ನಿದ್ರೆಯಲ್ಲಿ ಎಚ್ಚರ ಇರುವವನಾಗಿ ರಾತ್ರಿ ಸಾರಾಂಶವನ್ನು ತಿಳಿದವನು ತಾನೇ ದೈವವಾಗಿ ಬದಲಾಗಿ ಮೋಕ್ಷವನ್ನು ಹೊಂದುತ್ತಾನೆ.

# ಜಗದ್ಗುರು

ಜಗದ್ಗುರುವೆಂಬ ಮಾತನ್ನು ಬಹಳಜನ ಕೇಳಿಯೇ ಇರುತ್ತಾರೆಂದು ಕೊಳ್ಳುತ್ತೇವೆ. ಏಕೆಂದರೆ ಇತರ ದೇಶಗಳಿಗಿಂತ ನಮ್ಮ ದೇಶದಲ್ಲಿಯೇ ಜಗದ್ಗುರು

ಎನ್ನುವವರು ಬಹಳ ಮಂದಿ ಇದ್ದಾರೆ. “ಜಗತ್ತು” ಎಂದು ಅಂದರೆ ಪ್ರಪಂಚದಲ್ಲಿನ ಜೀವಸಮುದಾಯವೆಂದು ಎಲ್ಲರಿಗೂ ತಿಳಿದ ಮಾತೆ. ಪ್ರಪಂಚದಲ್ಲಿನ ಕೇವಲ ಒಂದುದೇಶವನ್ನು ಮಾತ್ರ ಜಗತ್ತೆಂದು ಅನ್ನುವುದಿಲ್ಲ. ಆದರೆ ಗುರುಗಳ ಹತ್ತಿರಕ್ಕೆ ಬರುವಷ್ಟರಲ್ಲಿ ಕೇವಲ ಒಂದು ದೇಶದಲ್ಲಿನ ಗುರುವನ್ನು ಸಹ ಜಗತ್‌ಗುರು ಎನ್ನುತ್ತಿದ್ದೇವೆ. ಜಗತ್ತೆಂದರೆ ಪ್ರಪಂಚದಲ್ಲಿನ ಜೀವಿಗಳೆಲ್ಲರೂ ಆಗಿರುವಾಗ ಜಗದ್ಗುರು ಎಂದರೆ ಪ್ರಪಂಚದಲ್ಲಿನ ಎಲ್ಲರಿಗೂ ಗುರುವಾಗಿರಬೇಕು. ಹಾಗಲ್ಲದೆ ಇತರ ದೇಶಗಳೆಲ್ಲವುಗಳಿಗೂ ಸಂಬಂಧವಲ್ಲದೆ ಕೇವಲ ಒಂದು ದೇಶದಲ್ಲಿನ ಗುರುವನ್ನು ಜಗದ್ಗುರು ಎನ್ನುವುದರಲ್ಲಿ ಎಷ್ಟೋ ಆಶ್ಚರ್ಯವಿದೆ. ಈ ದಿನ ಒಂದು ದೇಶದಲ್ಲಿಯೇ ಹೆಚ್ಚಿನ ಜನರು ಶಿಷ್ಯರನ್ನು ಹೊಂದಿದ ಗುರುಗಳನ್ನು ಮಾತ್ರವೇ ಜಗದ್ಗುರುಗಳು ಎನ್ನುತ್ತಿದ್ದಾರೆ. ಕಡಿಮೆ ಶಿಷ್ಯರಿರುವ ಗುರುಗಳಿಗೆ ಜಗದ್ಗುರುಗಳೆಂಬ ಹೆಸರಿಲ್ಲ. ಅಂದರೆ ಶಿಷ್ಯರ ಸಂಖ್ಯೆ ಎಷ್ಟು ಹೆಚ್ಚಾಗಿದ್ದರೆ ಅಷ್ಟು ಬೇಗನೆ ಜಗದ್ಗುರುವಾಗಬಹುದೆಂಬ ಮಾತು. ಆದ್ದರಿಂದ ಕೆಲವರು ಗುರುಗಳು ಅದೇ ಕೆಲಸವಾಗಿ ಊರು ಊರು ತಿರುಗುತ್ತಾ, ಕರೆದು ಕರೆದು ಉಪದೇಶಕೊಡುತ್ತಾ, ಶಿಷ್ಯರನ್ನು ಹೆಚ್ಚಾಗಿ ಸೇರಿಸಿಕೊಳ್ಳುವುದರಲ್ಲಿ ಪೋಟಿಬೀಳುತ್ತಿದ್ದಾರೆ. ಗುರುಗಳೆನಿಸಿಕೊಂಡು ಸಹ ಜ್ಞಾನ ಹೇಳುವುದು ನಮ್ಮಕೆಲಸ ಅಲ್ಲ ಶಿಷ್ಯರನ್ನು ಸೇರಿಸಿಕೊಳ್ಳುವುದೇ ನಮ್ಮ ಕೆಲಸ ಎನ್ನುವಂತೆ ಉಪದೇಶ ಕೊಡುವುದೇ ಅವರ ಕೆಲಸವಾಗಿಹೋಗಿದೆ. ಗುರುಗಳೆಂದರೆ ಜ್ಞಾನ ಹೇಳುವವರಾ ಅಥವಾ ಉಪದೇಶಕೊಡುವವರಾ ಅಥವಾ ಜ್ಞಾನಹೇಳಿ ಉಪದೇಶ ಕೊಡುವವರಾ ಯಾರು ಗುರುಗಳೆಂಬ ಅನುಮಾನ ಯೋಚಿಸುವವರಿಗೆ ಬಾರದೆ ಇರುವುದಿಲ್ಲ. ಈ ಅನುಮಾನಗಳಿಗೆ ಸಮಾಧಾನಗಳು ದೊರೆತಾಗ ಗುರು ಗಳ್ಯಾರೋ, ಜಗದ್ಗುರುಗಳು ಯಾರೋ ತಿಳಿದು ಯಾರನ್ನು ಆಶ್ರಯಿಸಬೇಕೋ ತಿಳಿಯುತ್ತದೆ. ಮೋಕ್ಷ ಹೊಂದಬೇಕೆಂದರೆ ಮಾನವನ ಬಳಿ ಗುರು ಪಾತ್ರ ಬಹಳ ಮುಖ್ಯವಾದುದು. ಅವರಿಗೆ ಲಭಿಸಿದ ಗುರುವನ್ನನುಸರಿಸಿಯೇ ಅವನ ಮಾರ್ಗವಿರುತ್ತದೆ. ಆದ್ದರಿಂದ ಗುರುಗಳನ್ನು ಕುರಿತು ಪೂರ್ತಿ ತಿಳಿದುಕೊಂಡಾಗ

ಮಾರ್ಗವೂ ಸಹ ಸರಿಯಾದುದೇ ಲಭಿಸುತ್ತದೆ. ಆದ್ದರಿಂದ ಈಗ ಗುರು ಗಳೆಂದವರೆಲ್ಲರನ್ನು ಪರಿಶೀಲಿಸೋಣ.

ನಮ್ಮ ದೇಶದಲ್ಲಿ ಎಷ್ಟೋ ಗುರುಗಳು ಇದ್ದಾರೆ. ಅವರಲ್ಲಿ ಕೆಲವರು ಯಾವುದೋ ಒಂದು ಕೆಲಸವನ್ನು ಕಲ್ಪಿಸಿಕೊಂಡು ಅಂದರೆ ಯಾವುದೋ ಒಂದು ಕಟ್ಟಡ ಕಟ್ಟಿಸುವುದು ಪ್ರಾರಂಭಿಸಿ, ಅದಕ್ಕೋಸ್ಕರ ಊರೂರುಗಳು ತಿರುಗಿ ಉಚಿತ ಚಂದಗಳು ವಸೂಲು ಮಾಡುವುದರಲ್ಲಿಯೇ ಲಗ್ನವಾಗಿರುತ್ತಾರೆ. ಆ ಕಟ್ಟಡ ಪೂರ್ತಿಯಾದ ಕೂಡಲೇ ಮತ್ಯಾವುದೋ ಒಂದು ಇಟ್ಟುಕೊಳ್ಳುವುದು ಅಥವಾ ಇಂತಹ ಪೂಜೆ, ಇಂತಹ ಯಜ್ಞ, ಇಂತಹ ಕೆಲಸವೆಂದು ಬೆಳಗ್ಗೆ ಎದ್ದಾಗಿನಿಂದ ಸಾಯಂಕಾಲದವರೆಗು, ಆ ಕೆಲಸಕ್ಕೋಸ್ಕರ ವಸೂಲಿಗೋಸ್ಕರ ಊರುಗಳು ತಿರುಗುವುದೇ ಅವರಿಗೆ ಮುಖ್ಯಕಾರ್ಯವಾಗಿ ಇರುತ್ತದೆ.

ಮತ್ತೆ ಕೆಲವರು ಡ್ರಾಮಾ ಯಾಕ್ಟರ್ಸ್ ರೇಟುಗಳು ಇಟ್ಟುಕೊಂಡಂತೆ, ನನ್ನ ಉಪನ್ಯಾಸಕ್ಕೆ ಇಷ್ಟುರೇಟೆಂದು ಇಟ್ಟುಕೊಂಡು, ಆ ರೇಟಿನ ಪ್ರಕಾರ ಉಪನ್ಯಾಸಗಳು ಮಾಡುವುದೇ ಅವರ ಕೆಲಸ. ಡ್ರಾಮಾಯಾಕ್ಟರ್ಸ್ ತನ್ನ ಡೈಲಾಗುಗಳೆಲ್ಲ ಕ್ರಮವಾಗಿ ಕಲಿತುಕೊಂಡು ಡ್ರಾಮಾದಲ್ಲಿ ಹೇಳಿದಂತೆ, ಕೆಲವರು ಗುರುಗಳನ್ನುವವರು ಕೆಲವು ಪುಸ್ತಕಗಳನ್ನೇ ಪೂರ್ತಿ ಕಂಠಾಪಾಟ ಮಾಡಿಕೊಂಡು, ಅವುಗಳ ಪ್ರಕಾರ ಉಪನ್ಯಾಸಗಳು ಗಡಗಡ ಹೇಳಿ ಅವರ ಹಣ ಅವರು ತೆಗೆದುಕೊಂಡುಬರುವುದು, ಬಂದ ತಕ್ಷಣ ಇನ್ನೊಂದು ಉಪನ್ಯಾಸಕ್ಕೆ ಹೋಗುವುದು ಇವರ ಮುಖ್ಯವಾದ ಕೆಲಸ. ನಟನು ಡ್ರಾಮಾದಲ್ಲಿ ಹೇಳಿದ ನೀತಿ ಪ್ರಕಾರ ತನ್ನ ನಿಜಜೀವನದಲ್ಲಿ ನಡೆದುಕೊಳ್ಳದಂತೆ, ಇವರ ಉಪನ್ಯಾಸಗಳು ನಟನ ಡೈಲಾಗಿನಂತೆ ತಮ್ಮ ಜೀವನದಲ್ಲಿ ಇರುವುದಿಲ್ಲ. ಉಪನ್ಯಾಸಗಳೇ ನನ್ನ ಮುಖ್ಯಕಾರ್ಯವೆಂದು ಅನೇಕ ಉಪನ್ಯಾಸಗಳು ಮಾಡಿದ ಒಬ್ಬ ಗುರುವನ್ನು ನಂದ್ಯಾಲ ಹತ್ತಿರ ನಾವು ಭೇಟಿಯಾಗಿ ನೀವು ಉಪನ್ಯಾಸದಲ್ಲಿ ಹೇಳುವ ಮಾತುಗಳಿಗೂ ನಿಮ್ಮ ನಿಜ ಭಾವನೆಗೂ ಎಷ್ಟೋ ವ್ಯತ್ಯಾಸವಿದೆ. ನೀವು "ದೇವರು ಇಲ್ಲ ದೆವ್ವ ಇಲ್ಲ" ಅನ್ನುತ್ತಿದ್ದೀರೇನು? ದೇವರೆ ಇಲ್ಲ ಎಂದಾಗ ಗೀತಾಯಜ್ಞಗ

ಳೆಂದು ಹೆಸರಿಟ್ಟು ಗೀತೆಯನ್ನು ಕುರಿತು ಉಪನ್ಯಾಸಿಸುತ್ತಿದ್ದೀರಲ್ಲ! ದೇವರು ಇಲ್ಲ ಎನ್ನುತ್ತಿರುವ ನೀವು ನಿಮ್ಮ ಉಪನ್ಯಾಸಗಳಲ್ಲಿ ದೇವರಿದ್ದಾನೆಂದು ದೇವರ ಬಗ್ಗೆ ಹೇಳುತ್ತಿದ್ದೀರಲ್ಲವೆ! ಎಂದು ಕೇಳಿದರೆ ಅದಕ್ಕೆ ಉತ್ತರವಾಗಿ "ನನಗೆ ಮಾತ್ರ ದೇವರ ಮೇಲೆ ನಂಬಿಕೆ ಇಲ್ಲ. ಜ್ಞಾನ ಬೇಕೆಂದು ಪ್ರಜೆಗಳು ಕೋರಿ ಕೊಳ್ಳುತ್ತಿದ್ದಾರೆ. ಅದಕ್ಕೆ ಹಣ ತೆಗೆದುಕೊಂಡು ಅವರಿಗೆ ಇಷ್ಟವಾಗುವಂತೆ ಸರಿಹೋಗುವಂತೆ ಹೇಳಿದ್ದೇನೆ. ಅವರಿಗೆ ಜ್ಞಾನಬೇಕು, ನನಗೆ ಹಣ ಬೇಕು. ಕೇಳುವವರಿದ್ದಾರೆ ಆದ್ದರಿಂದ ನಾನು ಹಾಗೆ ಹೇಳುತ್ತಿದ್ದೇನೆ" ಎಂದನು. ಇವರು ಸಹ ಕೆಲವರ ದೃಷ್ಠಿಯಲ್ಲಿ ಗುರುಗಳೇ.

ಇನ್ನೂ ಬದುಕಲಾರದೆ ಸನ್ಯಾಸಿಗಳಾದವರು ಕೆಲವರಿದ್ದಾರೆ. ಅವರ ದೃಷ್ಠಿಯಲ್ಲಿ ಸನ್ಯಾಸತ್ವವೇ ದೊಡ್ಡ ಗುರುತ್ವವೆಂದುಕೊಂಡಿದ್ದಾರೆ. ಬೆಳ್ಳಗಿರುವವೆಲ್ಲಾ ಹಾಲು ಕಪ್ಪನೆವೆಲ್ಲಾ ಇದ್ದಿಲೆಂದು ನಂಬುವ ಪ್ರಜೆಗಳು ಬಿಳಿಯ ಸುಣ್ಣದನೀರನ್ನು ಹಾಲಾಗಿ, ಕಪ್ಪನೆಯ ಕಬ್ಬಿಣದತುಂಡುಗಳನ್ನು ಇದ್ದಿಲಾಗಿ ನಂಬಿ, ಕಾಷಾಯ ವಸ್ತ್ರಗಳು ಧರಿಸಿಕೊಂಡವರೆಲ್ಲ ಗುರುಗಳೇ ಎಂದು ಮೋಸ ಹೋಗುತ್ತಿದ್ದಾರೆ. ಆದ್ದರಿಂದ ಕಾಷಾಯವಸ್ತ್ರಗಳ ಮರೆಯಲ್ಲಿ ಎಷ್ಟೋಜನ ಕಳ್ಳರು, ಎಷ್ಟೋಜನ ಮೋಸಗಾರರು, ಎಷ್ಟೋಜನ ಹತ್ಯೆಗಳು ಮಾಡಿ ಓಡಿಹೋಗಿ ಬಂದವರು ಇದ್ದಾರೆಂದು ತಿಳಿದುಕೊಳ್ಳದೆಹೋಗಿದ್ದಾರೆ. ಜ್ಞಾನ ಹೊಂದಿದ ನಿಜವಾದ ಸನ್ಯಾಸಿಗಳು ಕೆಲವರಿರುವಾಗ, ಅನುಕೂಲವನ್ನು ಅವಕಾಶವನ್ನು ನೋಡಿ ಕಾಷಾಯವಸ್ತ್ರಗಳು ಹಾಕಿಕೊಳ್ಳುವವರು ಎಷ್ಟೋಜನ ಇದ್ದಾರೆ.

ಹೀಗೆ ಎಷ್ಟೋ ಜನ ಗುರುಗಳಾಗಿ ಚಲಾವಣೆ ಆಗುತ್ತಿರುವಾಗ, ಈಗಿನ ಮಾನವರು ಸಹ ನಾವು ಶಿಷ್ಯರೆನಿಸಿಕೊಂಡರೆ ಸಾಕೆಂದು, ನಮಗೆ ಒಬ್ಬಗುರು ಇದ್ದಾನೆಂದರೆ ಸಾಕೆಂದು, ಯಾವುದೋ ಒಬ್ಬ ಗುರುವನ್ನು ಆಶ್ರಯಿಸಿ ಉಪದೇಶ ಬೇಕೆನ್ನುತ್ತಿದ್ದಾರೆ. ನಮಗೆ ಶಿಷ್ಯರೆನ್ನುವವರಿದ್ದರೆ ಸಾಕೆಂದುಕೊಳ್ಳುವ ಗುರುಗಳು ಸಹ ತಕ್ಷಣ ಉಪದೇಶಕೊಟ್ಟು ಇಂದಿನಿಂದ ನನ್ನ ಹತ್ತಿರಕ್ಕೆ ಹೊರತು ಇನ್ನು ಯಾವ ಗುರು ಹತ್ತಿರಕ್ಕೆ ಹೋಗಬೇಡ, ನನ್ನ ಬೋಧನೆಗಳು ಹೊರತು ಇನ್ನು

ಯಾವ ಬೋಧನೆಗಳು ಕೇಳಬೇಡ, ನನ್ನ ಪುಸ್ತಕಗಳು ಬಿಟ್ಟರೆ ಯಾವ ಪುಸ್ತಕಗಳು ಓದಬೇಡವೆಂದು ಹೇಳಿ ಕಳುಹಿಸುತ್ತಿದ್ದಾರೆ. ಇವರಿಗೆ ಬೇಕಾಗಿರುವುದು ಶಿಷ್ಯರು, ಅವರಿಗೆ ಬೇಕಾಗಿರುವುದು ಉಪದೇಶ ಅನ್ನುವ ಭಾವ ಹೊರತು ಜ್ಞಾನವೆಂದಾಗಲಿ, ಧರ್ಮವೆಂದಾಗಲಿ, ದೈವವೆಂದಾಗಲಿ ಅವರಿಗೆ ಏನು ತಿಳಿದಿಲ್ಲ.

ಇನ್ನು ಜಗದ್ಗುರುಗಳೆಂಬ ವಿಷಯಕ್ಕೆ ಬಂದರೆ, ಒಂದು ಮನೆಯಲ್ಲಿ ಹುಟ್ಟಿದವನಿಗೆ ಆ ಮನೆಯಹೆಸರು ಪರಂಪರೆಯಾಗಿ ಬರುವಂತೆ, ಒಂದು ಪೀಠದಲ್ಲಿರುವ ಚಿಕ್ಕವಯಸ್ಸಿರುವವನನ್ನು ಸಹ ಜಗದ್ಗುರುವೆಂದು ಹೆಸರಿಟ್ಟು ಕರೆಯುವುದು ನಡೆಯುತ್ತಿದೆ. ಒಂದು ಪೀಠದಲ್ಲಿರುವ ಗುರುಗಳನ್ನು ಜಗದ್ಗುರುಗಳೆನ್ನುವುದು, ಆ ಪೀಠದಲ್ಲಿರುವ ಜಗದ್ಗುರು ಮರಣಿಸಿದರೆ ಇನ್ನೊಬ್ಬ ಗುರುವನ್ನು ನಿರ್ಣಯಿಸಿದರೆ ಆತನನ್ನು ಜಗದ್ಗುರು ಅನ್ನುವುದು ನಡೆಯುತ್ತಿದೆಯೆಂದರೆ, ಜಗದ್ಗುರು ಅನ್ನುವುದು ಮನೆಹೆಸರಿರುವಂತೆ ಕೆಲವು ಗುರುಗಳಿಗೂ ಸಹ ಇದೆ. ಮನುಷ್ಯರಲ್ಲಿ ಯಾರಿಗೆ ಹುಟ್ಟಿದರೆ ಅವರ ಮನೆಹೆಸರು (ವಂಶದ ಹೆಸರು) ಹುಟ್ಟಿದವನು ಹೇಳಿಕೊಂಡಂತೆ, ಗುರುಗಳಲ್ಲಿ ಸಹ ಮನೆಹೆಸರಿನಂತೆ ಜಗದ್ಗುರು ಎನ್ನುವ ಹೆಸರು ಬರುತ್ತಿದೆ ಎಂದರೆ, ತುಪಾಕಿಗಳು ಹಿಡಿಯದಿದ್ದರೂ ತುಪಾಕಿನವರೆಂದು ಮನೆಹೆಸರಿರುವಂತೆ ಜಗತ್ತಿಗೆ ಗುರುಗಳು ಅಲ್ಲದಿದ್ದರೂ ಆ ಹೆಸರು ನಂತರ ಗುರುಗಳಿಗೆ ಬರುತ್ತಿದೆ. ಜಗದ್ಗುರುಗಳೆಂದರೆ ಅರ್ಥವೇನು? ಮನೆಹೆಸರಿನಂತಲ್ಲದೆ ನಿಜ ಜಗದ್ಗುರುಗಳ್ಯಾರಾದರೂ ಇದ್ದಾರಾ? ಎಂದು ಯೋಚಿಸಿದರೆ ವಿವರ ಹೀಗಿದೆ.

ಏನಾದರೂ ತಿಳಿಯದಿರುವುದನ್ನು ರಹಸ್ಯ ಎನ್ನುತ್ತೇವೆ. ರಹಸ್ಯವೆನ್ನುವ ಮಾತನ್ನು ಪೂರ್ವದಲ್ಲಿ ಆಡು ಭಾಷೆಯಲ್ಲಿ ಹೆಚ್ಚಾಗಿ **ಗುಹ್ಯ** ಎನ್ನುತ್ತಿದ್ದರು. ಗುಹ್ಯವೆಂದರೆ ರಹಸ್ಯವೆಂದು ಆದಿನ ಈದಿನ ಅರ್ಥ ಇದೆ. ಮಾನವನಿಗೆ ತಿಳಿಯದಿರುವುದೆಲ್ಲ ರಹಸ್ಯವೇ ತಾನೇ! ಮಾನವನು ಹುಟ್ಟಿದಾಗ ತನಗೆ ಏನು ತಿಳಿದಿಲ್ಲ. ತಿಳಿಯದ ವಿಷಯಗಳನ್ನು ವಯಸ್ಸು ಬಂದಂತೆಲ್ಲ ಇತರರಿಂದ ತಿಳಿದುಕೊಳ್ಳುತ್ತಿದ್ದಾನೆ ಒಂದು ಶಾಲೆಗೆ ಹೋಗುತ್ತೇವೆ, ಅಲ್ಲಿ ನಮಗೆ ತಿಳಿಯದ

ಅಂಕೆಗಳನ್ನು ಅಕ್ಷರಗಳನ್ನು ತಿಳಿದುಕೊಳ್ಳುತ್ತೇವೆ. ಹಾಗೆ ತಿಳಿದುಕೊಳ್ಳುವವರೆಗೂ ಅವು ಏನೋ ಯಾವೋ ನಮಗೆ ತಿಳಿಯುವುದಿಲ್ಲ. ಆ ತಿಳಿಯದ ರಹಸ್ಯಗಳನ್ನು ಶಾಲೆಯಲ್ಲಿ ತಿಳಿಸಿದ ವ್ಯಕ್ತಿಯನ್ನು ಗುರು ಅನ್ನುತ್ತಿದ್ದೇವೆ. ಗುರು ಅನ್ನುವಪದ ಪೂರ್ವದಲ್ಲಿ ಹೇಗೆ ಬಂದಿದೆ ಎಂದರೆ! ತಿಳಿಯದಿರುವುದು ಗುಹ್ಯ ಅಂದಿದ್ದೇ ವಲ್ಲವೆ! **ಗುಹ್ಯವನ್ನು ತಿಳಿಸುವವನಾದ್ದರಿಂದ ಗುರುವೆಂಬ ಪದ ಬಂದಿದೆ**. ಗುಹ್ಯವಿರುವ ಪ್ರತಿಕಡೆಯೂ ಗುರು ಇದ್ದೇ ಇರಬೇಕು ಇಲ್ಲದಿದ್ದರೆ ಆ ವಿಷಯ ನಮಗೆ ತಿಳಿಯುವುದಿಲ್ಲ. ತಿಳಿಯದ ಪ್ರತಿ ವಿಷಯಕ್ಕು ಗುರು ಎಂಬುವವನು ಅವಶ್ಯಕ. ಆದ್ದರಿಂದ ಓದಿಗೊಬ್ಬ ಗುರು, ಮೆಕಾನಿಕ್ ಕೆಲಸಕ್ಕೊಬ್ಬ ಗುರು, ವೈದ್ಯಕ್ಕೊಬ್ಬ ಗುರು ಹೀಗೆ ಎಷ್ಟೋವಿಧಗಳ ಪ್ರಪಂಚ ವಿಷಯಗಳಲ್ಲಿ ಎಷ್ಟೋ ವಿಧಗಳ ಪ್ರಪಂಚ ಗುರುಗಳು ಮಾನವ ಜೀವನದಲ್ಲಿದ್ದಾರೆ.

**ಮಾನವಜೀವನದಲ್ಲಿ ಭಗವದ್ಗೀತೆಯಲ್ಲಿ ಹೇಳಿದಂತೆ ಗುಹ್ಯಗಳಿಗೆಲ್ಲಾ ಗುಹ್ಯವಾದುದು ಬ್ರಹ್ಮವಿದ್ಯೆ**. ಪ್ರಪಂಚ ವಿದ್ಯೆಗಳಲ್ಲಿ ತಿಳಿಯದ ರಹಸ್ಯಗಳನ್ನು ತಿಳಿಯಪಡಿಸುವ ಗುರುಗಳಿರುವಂತೆ, ಬ್ರಹ್ಮವಿದ್ಯೆಯಲ್ಲಿ ಸಹ ತಪ್ಪದೆ ಗುರು ಇರಬೇಕು. ಇಲ್ಲದಿದ್ದರೆ ಬಹಳ ಗುಹ್ಯವಾದ ಬ್ರಹ್ಮವಿದ್ಯೆ ಏನೋ ತಿಳಿಯದೆ ಗುಹ್ಯವಾಗಿಯೇ ಇರುತ್ತದೆ. ಇತ್ತ ಪ್ರಪಂಚವಿದ್ಯೆಯುಲ್ಲಿಯೂ ಅತ್ತ ಬ್ರಹ್ಮವಿದ್ಯೆಯಲ್ಲಿಯೂ ಗುಹ್ಯವನ್ನು ತಿಳಿಸುವವನು (ಗುರುತು ಮಾಡುವವನು) ಅಂದರೆ ಜ್ಞಾಪಕ ಮಾಡುವವನನ್ನು ಪೂರ್ವದಲ್ಲಿ **'ಗುರುತು'** ಎಂದು ಹೆಸರಿಟ್ಟು ಕರೆಯುತ್ತಿದ್ದರು. ಬ್ರಹ್ಮವಿದ್ಯೆ ಗುರುತು ತಿಳಿಸುವವನು, ಬ್ರಹ್ಮವಿದ್ಯೆಯ ಗುಟ್ಟು ರಟ್ಟು ಮಾಡುವವನು ಗುರುವೆಂಬ ಮಾತು ಎಲ್ಲಿಯಾದರೂ ಕೇಳುವುದೊ ಓದುವುದೊ ಇರುತ್ತದೆ.

ಮುಖ್ಯ ವಿಷಯ ಏನೆಂದರೆ! **'ಗುರ್ತು'** ಎನ್ನುವ ಎರಡಕ್ಷರಗಳ ಪದ ಸ್ವಲ್ಪಕಾಲಕ್ಕೆ **'ರು'** ಕೆಳಗೆ ತಾ ವತ್ತು ಹೋಗಿ 'ಗುರು' ಎನ್ನುವ ಪದವಾಗಿ ಉಳಿದುಹೋಗಿದೆ. ಗುರುತು ಎಂದು ಒತ್ತಿ ಹೇಳದಂತೆ **'ಗುರು'** ಎಂದು ಸುಲಭವಾಗಿ ಹೇಳುವುದು ರೂಢಿಯಾಗಿಹೋಗಿದೆ. ಆದಿಯಲ್ಲಿ ಗುರ್ತು ಎಂದು

ಗುರುತಿಸಲ್ಪಟ್ಟ ಪದ ಈ ದಿನ ಗುರು ಎನ್ನುವ ಪದವಾಗಿ ಗುರುತಿಸಲ್ಪಟ್ಟು (ತಿಳಿಯಲ್ಪಟ್ಟು) ಇದೆಯೆಂದು ಗ್ರಹಿಸಬೇಕು. ಗುರುವೆಂಬ ಪದ ಹೀಗೆ ಬಂದಿದೆ ಯೆಂದು ಈಗಿನ ಗುರುಗಳಿಗೇ ತಿಳಿದಿಲ್ಲ. ಆದ್ದರಿಂದ ಉಳಿದ ಪ್ರಜೆಗಳಿಗೇನು ತಿಳಿಯುತ್ತದೆ. ಆದ ಕಾರಣ ಈ ವಿಷಯ ನಿಮಗೆ ಹೊಸದಾದರೂ ಅಸತ್ಯ ವೆಂದುಕೊಳ್ಳಬೇಡಿ. ನಮಗೆ ಅರ್ಥವಾಗದಿರುವವೆಲ್ಲ ಅಸತ್ಯಗಳೆಂದು ಕೊಳ್ಳಬಾರದು. ಒಂದುಕಾಲದಲ್ಲಿನ ದೃಷ್ಠಿ ಆಗಿದೆಯೆಂಬಮಾತು ಈ ದಿನ ಜಿಷ್ಠಿ ಆಗಿದೆಂದು ಹೇಗೆ ಎನ್ನುತ್ತಿದ್ದೇವೊ ಹಾಗೆ ಗುರ್ತು ಎನ್ನುವ ಮಾತು ಗುರು ಎನ್ನುವಮಾತಾಗಿ ಉಳಿದಿದೆ ಎಂದು ತಿಳಿಯಬೇಕು. ಇದನ್ನನುಸರಿಸಿ ನೋಡಿದರೆ ಈ ದಿನ ಜಗದ್ಗುರು ಎನ್ನುವ ಪದ ಆದಿಯಲ್ಲಿ **'ಜಗದ್ಗುರ್ತು'** ಎನ್ನುವ ಪದವಾಗಿ ಇತ್ತೆಂದು ತಿಳಿಯಬೇಕು. ಈ ವಿಷಯದಲ್ಲಿ ನಮಗೆ ತಿಳಿಯದಿರುವುದು ನಿನಗೇಗೆ ತಿಳಿದಿದೆ ಎಂದು ಪ್ರಶ್ನಿಸಬೇಡಿ. ಕಣ್ಣಿನ್ನನುಸರಿಸಿ ದೃಷ್ಟಿ ಇರುತ್ತದೆಂದುಕೊಳ್ಳಿ.

ಬಹಳಜನ ಶಿಷ್ಯರಿರುವವರನ್ನೋ ಅಥವಾ ಪರಂಪರೆಯಾಗಿಯೋ ಜಗದ್ಗುರು ಎನ್ನುವುದು ಆದಿಯಲ್ಲಿ ಇಲ್ಲ. **ಜಗತ್ತಿನಲ್ಲಿನ ಸರ್ವಜೀವರಾಶಿಗಳಿಗು ವರ್ತಿಸುವ ದೈವಜ್ಞಾನ ಯಾರು ತಿಳಿಸುತ್ತಿದ್ದಾರೋ ಅವರನ್ನೇ ಜಗದ್ಗುರು ಅನ್ನುತ್ತಿದ್ದರು**. ಹಾಗೆ ತಿಳಿಸುವವರಿಗೆ ಶಿಷ್ಯರಿರಬಹುದು ಇಲ್ಲದಿರಬಹುದು. ಅವರಿಗೆ ಶಿಷ್ಯರನ್ನನುಸರಿಸಿ ಅಥವಾ ಪೀಠವನ್ನನುಸರಿಸಿ ಆ ಹೆಸರು ಬರಲಿಲ್ಲ. ಅವರು ತಿಳಿಸುತ್ತಿರುವ ಬೋಧನೆಗಳನ್ನನುಸರಿಸಿ ಅವರಿಗೆ ಆ ಹೆಸರು ಬಂದಿದೆ. ಆ ವಿಧವಾಗಿ ಹೇಳಿದರೆ ಶ್ರೀಕೃಷ್ಣನು ಜಗದ್ಗುರುವೇ. ಶ್ರೀಕೃಷ್ಣನನ್ನು ಜಗದ್ಗುರು ಎಂದು ಎಷ್ಟೋಜನ ಮಹರ್ಷಿಗಳು ಸಹ ಅಂದಿದ್ದಾರೆ. ಆದಿನ ಆತನಿಗೆ ಶಿಷ್ಯರೇ ಇಲ್ಲ. ಆದರೆ ಆತನು ಹೇಳಿದ ಜ್ಞಾನ ಜಗತ್ತಿನಲ್ಲಿನ ಸರ್ವಜೀವರಾಶಿಗಳಿಗು ಅನ್ವಯಿಸುವುದು. ಆದ್ದರಿಂದ ಆತನು ಜಗದ್ಗುರುವಾಗಿದ್ದಾನೆ. ಈಗಿನ ಜಗದ್ಗುರುಗಳು ಮಾನವರನ್ನು ಎಲ್ಲರನ್ನು ಸಮಾನವಾಗಿ ನೋಡದೆ ಒಂದು ಮತ, ಒಂದು ಕುಲ ಎಂದು ಗುಂಪುಗಳು ಮಾಡಿ ಅವರಿಗೆ ಆ ಬೋಧನೆ,

ಇವರಿಗೆ ಈ ಬೋಧನೆ, ಅವರಿಗೆ ಆ ನಿಯಮ, ಇವರಿಗೆ ಈ ನಿಯಮವೆಂದು ಮನುಜ ರಲ್ಲಿಯೇ ಎಷ್ಟೋ ಸೀಳಿಕೆಗಳನ್ನು ಇಟ್ಟು, ಕುಲಮತವೆಂಬ ವರ್ಗಗಳ ವ್ಯತ್ಯಾಸವನ್ನಿಟ್ಟು, ಕೆಲವರನ್ನು ತಾಕಿ ಮುಗಿಯಿಸಿಕೊಳ್ಳುತ್ತಿದ್ದಾರೆ, ಕೆಲವರನ್ನು ತಾಕದಂತೆ ದೂರವಾಗಿದ್ದು ಮುಗಿಯುವಂತೆ ಹೇಳುತ್ತಿದ್ದಾರೆ. ಅವರ ದೃಷ್ಠಿಯಲ್ಲಿ ಕಡಿಮೆ ಕುಲದವರು ಭಕ್ತಿಯಿಂದ ಹಾಲು ತೆಗೆದುಕೊಂಡು ಹೋದರು ಪಾತ್ರೆ ಮೇಲೆ ನೀರು ಚಲ್ಲಿ ತೆಗೆದುಕೊಳ್ಳುತ್ತಿದ್ದಾರೆ. ಅವರ ಬೋಧನೆಗಳು ಸಕಲ ಜೀವರಾಶಿಗಳಿಗೆ ಅನ್ವಯಿಸುವವಾಗಿ ಯಾವಮಾತ್ರ ಇಲ್ಲ. ಆದರೂ ಅಂಥವರು ಜಗದ್ಗುರುಗಳಾಗಿ ಹೆಸರುವಾಸಿಯಾಗುವುದು, ನಮಗೆ ಜಗದ್ಗುರು ಒಂದರ ಅರ್ಥ ತಿಳಿಯದಿರುವುದೆ ಎಂದು ತಿಳಿಯುತ್ತಿದೆ. ಚೈತನ್ಯಹೊಂದಿದ ಪ್ರತಿ ಜೀವರಾಶಿಗು ಸಂಬಂಧವಿರುವ ಬೋಧನೆ ಯಾರು ತಿಳಿಸುತ್ತಿದ್ದಾನೋ, ಆತ್ಮ ನಿವಾಸವಿರುವ ಪ್ರತಿ ಜೀವರಾಶಿ ಗಿರುವ ಕಷ್ಟಸುಖ, ಪಾಪಪುಣ್ಯ, ಸುಗುಣದುರ್ಗುಣ ವ್ಯತ್ಯಾಸಗಳ ಸ್ಥಿತಿಯನ್ನು ಯಾರು ತಿಳಿಸುತ್ತಿದ್ದಾನೋ, ಜೀವಮಯವಾದ ಜಗತ್ತಿಗೆಲ್ಲ ಅನ್ವಯಿಸುವ ಸೂತ್ರಗಳು ಯಾರು ತಿಳಿಸುತ್ತಿದ್ದಾನೋ, ಅವನೇ ಜಗದ್ಗುರುವೆಂದು ತಿಳಿಯಬೇಕು. ಉದಾಹರಣೆಗೆ ಜೀವಿಗೆ ಶರೀರವೇ ನಿವಾಸ ಅಂದಾಗ, ಅದು ಮಾನವರಿಗೆ ಅಲ್ಲದೆ ಜಗತ್ತಿನಲ್ಲಿನ ಸರ್ವಜೀವಿಗಳಿಗೂ ಅನ್ವಯಿಸುತ್ತದೆ. ಅಂತಹ ಬೋಧನೆ ಕೃಷ್ಣನು ಬೋಧಿಸಿದ ಭಗವದ್ಗೀತೆಯಲ್ಲಿ ಸಂಪೂರ್ಣವಾಗಿ ಇದೆ, ಆದ್ದರಿಂದ ಶ್ರೀಕೃಷ್ಣನು ಜಗದ್ಗುರು ಆಗಿದ್ದಾನೆ. ಜಗತ್ತಿನ ಗುಹ್ಯವನ್ನು ಗುರುತು ಮಾಡಿದವನು ಜಗದ್ಗುರ್ತು. ಎಲ್ಲರ ಭಾಷೆಯಲ್ಲಿ ಜಗದ್ಗುರು ಅನ್ನಬಹುದು.

| | | |
|---|---|---|
| **ಗುರ್ತು** | = | **ಗುರು** |
| **ಗುರುತು** | = | **ಗುರುವು** |
| **ಜಗದ್ಗುರುತು** | = | **ಜಗದ್ಗುರು** |

# ಗಾದೆ (ಸಮತ–ಸಾಮತ–ಸಾಮೆತ)

ನಾವು ಪ್ರತಿ ವರ್ಷ ಆಗಸ್ಟು, ಸೆಪ್ಟೆಂಬರ್ ಮಾಸಗಳಲ್ಲಿ ಬರುವ ವಿನಾಯಕನ ಹಬ್ಬವನ್ನು ಎಷ್ಟೋ ಉತ್ಸಾಹದಿಂದ ಆಚರಿಸುತ್ತಿದ್ದೇವೆ. ಈದಿನ ಇಂದೂ ಪ್ರಜೆಗಳಲ್ಲಿ ಎಷ್ಟೋ ಗಾಢವಾಗಿ ನಿಂತುಹೋದ ಈ ಹಬ್ಬವನ್ನು ಕುರಿತು ಇತರ ಮತಸ್ಥರ ವಿಮರ್ಶೆಗಳು ಸಹ ಎಷ್ಟೋ ಇವೆ. ಅಂತಹ ವಿಮರ್ಶಕರು ನಮ್ಮ ಹತ್ತಿರಕ್ಕೆ ಬಂದು **'ನೀವು ಎಷ್ಟೋ ಖಚಿತವಾಗಿ ಸತ್ಯವಾದ ವಿಷಯಗಳು ತಿಳಿಸುತ್ತಿದ್ದೀರಲ್ಲ! ಅಂತಹದರಲ್ಲಿ ನೀವು ನಮ್ಮ ಪ್ರಶ್ನೆಗಳಿಗೆ ಸಮಾಧಾನ ಕೊಡುತ್ತೀರಾ'** ಎಂದು ಕೇಳಿದರು. ಅದಕ್ಕೆ ಸಮಾಧಾನವಾಗಿ ನಾವು ಸತ್ಯವಾದ ಜ್ಞಾನವಿಷಯಗಳನ್ನೆ ತಿಳಿಸುತ್ತಾ ಜೀವನವನ್ನು ಸಾಗಿಸಬೇಕೆಂದುಕೊಂಡಿದ್ದೇವೆ. ಆದ್ದರಿಂದ ನಿಮ್ಮ ಪ್ರಶ್ನೆಗಳಿಗೆ ಉತ್ತರಗಳು ನನಗೆ ತಿಳಿದಿದ್ದರೆ ತಿಳಿಸುತ್ತೇನೆ. ಇಲ್ಲದಿದ್ದರೆ ನನಗೆ ತಿಳಿದಿಲ್ಲವೆಂದು ಹೇಳುತ್ತೇನೆ ಕೇಳಿರಿ, ಎಂದು ತಿಳಿಸಿದೆವು. ಆಗ ಅವರು ಕೇಳಿದ ಮಾತುಗಳು ಹೀಗೆ ಇವೆ.

1) ಇಂದೂಮತದಲ್ಲಿ ವಿಘ್ನೇಶ್ವರ ಹಬ್ಬ ಎಂದು ಮಾಡುತ್ತಿದ್ದಾರಲ್ಲವೆ! ವಿಘ್ನೇಶ್ವರನು ಎಂದರೆ ವಿಘ್ನಗಳಿಗೆ ಅಧಿಪತಿಯೆಂದು ಅಲ್ಲವೆ ಅರ್ಥ. ವಿಘ್ನ ಗಳೆಂದರೆ ಅಡಚಣೆಗಳು ಆತಂಕಗಳು ಎಂದಲ್ಲವೆ ಅರ್ಥ, ಅಂತಹ ಆತಂಕಗಳಿಗೆ ಅಧಿಪತಿಯಾಗಿ, ಆತಂಕಗಳು ಉಂಟುಮಾಡುವವನನ್ನು ಶತ್ರುವಾಗಿ ಭಾವಿಸಿ ದೂಷಿಸಬೇಕು, ಆದರೆ ಪೂಜಿಸುವುದು ಏಕೆ? ಕೆಟ್ಟದ್ದು ಮಾಡುವವನು ಬಲವಾದವನಾದರೆ ಅವನನ್ನು ಯಾರು ವಿರೋಧಿಸದೆ ಹೊಗಳಿದಂತೆ, ನೀವು ಮಾಡುವ ಭಕ್ತಿ ಸಹ ವಿಘ್ನೇಶ್ವರನು ವಿಘ್ನಗಳು ಉಂಟುಮಾಡುತ್ತಾನೆಂದು ಭಯಪಟ್ಟು ಪೂಜೆಮಾಡುವಂತಿದೆ. ಆದರೆ ಭಕ್ತಿಯಿಂದ ಅಲ್ಲವೆಂದು ತಿಳಿಯುತ್ತಿದೆ ಇದಕ್ಕೆ ನೀವೇನನ್ನುತ್ತೀರಾ?

2) ಎಷ್ಟೋ ಭಕ್ತಿಯಿಂದ, ಮತ್ತು ಎಷ್ಟೋ ಖರ್ಚಿನಿಂದ, ಎಷ್ಟೋ ಅಂದವಾಗಿ ತಯಾರುಮಾಡಿಕೊಂಡ ವಿಘ್ನೇಶ್ವರನ ಪ್ರತಿಮೆಗಳಿಗೆ ಹೆಚ್ಚಿನ ಭಕ್ತಿಯಿಂದ ಪೂಜಿಸಿಕೊಂಡು, ಮೊದಲ ದಿನ ಮಾಡಿದ ಭಕ್ತಿಯೆಲ್ಲವನ್ನು

ಹಳ್ಳದಲ್ಲಿ ಬೆರೆಸಿ, ವಿಘ್ನೇಶ್ವರನನ್ನು ನೀರಿನೊಳಗೆ ಬಿಸಾಡುವುದು ಒಳ್ಳೆಯದಾ? ಇನ್ನು ಸಾಕು ನಿನ್ನ ಸಹವಾಸ ಅನ್ನುವಂತೆ ವಿನಾಯಕನನ್ನು ನೀರಿನೊಳಗೆ ಹಾಕಿ ಕೈಕೊಡವಿಕೊಳ್ಳುವುದು ಭಕ್ತಿ ಅನ್ನುತ್ತಾರಾ?

3) ಹತ್ತುರೂಪಾಯಿಗಳು ಕೊಟ್ಟು ದೈವಜ್ಞಾನ ತಿಳಿಸುವ ಪುಸ್ತಕ ಕೊಂಡುಕೊಳ್ಳುವುದಕ್ಕೆ ಬಾಧೆಪಡುವವರನ್ನು ನೀವು ಎಷ್ಟೋಜನರನ್ನು ನೋಡಿರುತ್ತೀರಾ. ಅಂತವರು ಸಹಿತ ಸಾವಿರಾರು ಖರ್ಚುಇಟ್ಟು ವಿನಾಯಕನ ಪ್ರತಿಮೆಗಳು ಮಾಡಿ ಅವುಗಳನ್ನು ಮುರಿದುಹಾಕಿ ಅವರ ಹಣವನ್ನು ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ. ಕೆಲವರು ಬಲವಂತವಾಗಿ ಪ್ರತಿಮೆಗಳ ಖರ್ಚಿಗೆಂದು ಇತರರಿಂದ ಹಣವನ್ನು ವಸೂಲು ಮಾಡುತ್ತಿದ್ದಾರೆ. ಹೀಗೆ ಬಲವಂತವಾಗಿ ವಸೂಲು ಮಾಡುವುದು ಬಲವಂತದ ಭಕ್ತಿ ಅಲ್ಲವೆ?

4) ಒಂದೇ ವಿಧವಾಗಿ, ಒಂದೇ ಪದ್ಧತಿಯಾಗಿ, ಒಂದೇ ವಿಧವಾಗಿ ಅವಯವಗಳು ಹೊಂದಿ ಹುಟ್ಟಿದ ನಾವು, ಒಂದೇ ದೇವರ ಮಕ್ಕಳೆಂದು ಮರೆತು, ಮತದ್ವೇಷಗಳನ್ನು ಬೆಳೆಸಿಕೊಳ್ಳುವ ಅಧ್ಯಾಯದಲ್ಲಿ ವಿನಾಯಕ ಹಬ್ಬವನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ. ಜ್ಞಾನವನ್ನು ಹೊಂದಿದ ಯೋಗಿಗಳಾಗಿ ನೀವೇನನ್ನುತ್ತೀರಾ?

ಈ ವಿಧವಾಗಿ ಕೇಳಿದವರಿಗೆ ವಿನಾಯಕಹಬ್ಬದ ರಹಸ್ಯವನ್ನು ನಾವು ಹೇಳಬೇಕಾಗಿ ಬಂದಿದೆ. ಅವರ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳು ಕೊಡದೆಹೋದರೆ, ಅವರ ಹೃದಯದಲ್ಲಿ ವಿನಾಯಕ ಹಬ್ಬದ ಮೇಲಿರುವ ಭಾವವು ಬದಲಾಯಿಸಲಾರೆವು. ನಮಗೆ ದೊಡ್ಡದಾಗಿದ್ದರು ಕೇಳುವವರಿಗೆ ಚಿಕ್ಕದಾಗಿಯೇ ಕಾಣಿಸುತ್ತದೆ. ಆದ್ದರಿಂದ ನಿಜಾರ್ಥವನ್ನು ಹೇಳದೆ ತಪ್ಪುವುದಿಲ್ಲ. ಪ್ರಪಂಚ ಹುಟ್ಟಿನಲ್ಲಿ ಮತಗಳೆನ್ನುವವು ಇಲ್ಲ. ದೇವರುಗಳೆನ್ನುವವರು ಇಲ್ಲ, ದೇವರೊಬ್ಬನೆಂಬ ವಿಷಯ ಎಲ್ಲರ ಅವಗಾಹನೆಯಲ್ಲಿಯೂ ಇರುತ್ತಿತ್ತು. ಸ್ವಲ್ಪಕಾಲಕ್ಕೆ ಅಂತಹ ಅವಗಾಹನೆ ಮನುಷ್ಯರಲ್ಲಿ ಕ್ಷೀಣಿಸುವುದು ಆರಂಭವಾಗಿದೆ.

ಆ ಸಮಯದಲ್ಲಿ ತತ್ತ್ವಜ್ಞಾನಿಗಳಾದ ಮಹಾತ್ಮರು ಕೆಲವರು ಯೋಚಿಸಿ, ಅಜ್ಞಾನ ಬೀಜವನ್ನು ತೆಗೆದುಹಾಕುವುದಕ್ಕೆ, ದೇವರನ್ನು ಕುರಿತು ಪ್ರಚಾರ ಮಾಡಲು ಪ್ರಾರಂಭಿಸಿದ್ದಾರೆ. ದೇವರಿಗೆ ರೂಪವಿಲ್ಲ ಆದ್ದರಿಂದ ಮೂಗು ಮುಖವಿಲ್ಲದ ಕಲ್ಲನ್ನು (ಲಿಂಗವನ್ನು) ಗುರುತಾಗಿಟ್ಟು, ದೇವರು ಹೀಗಿರುತ್ತಾನೆಂದು ರೂಪ ಇಲ್ಲದವನಾಗಿ ಬೋಧಿಸಿದ್ದಾರೆ. ಆತನಿಗೆ (ದೇವರಿಗೆ) ಹೆಸರಿಲ್ಲ ಆದ್ದರಿಂದ ಈಶ್ವರನೆಂದು ಕರೆದಿದ್ದಾರೆ. ಈಶ್ವರನೆಂದರೆ ಅಧಿಪತಿಯೆಂದು ಅರ್ಥವೇ ಆಗಲಿ ಹೆಸರಲ್ಲ. ಹೀಗೆ ಸರ್ವಕ್ಕು ಅಧಿಪತಿಯಾದವನು ಒಬ್ಬನಿದ್ದಾನೆಂದು ರೂಪವಿಲ್ಲದ ಗುಂಡನ್ನು ತೋರಿಸಿ, ತಿಳಿಯದಂತೆ ಹೋಗಿರುವ ದೈವತ್ವವನ್ನು ಕುರಿತು ಅಂದಿನ ಹಿರಿಯರು ತಿಳಿಸಿದ್ದಾರೆ.

ಹೀಗೆ ಜ್ಞಾನಪರವಾಗಿಯೇ ಅಲ್ಲದೆ, ಸಂಘಪರವಾಗಿ ಸಹ ಮಾನವನನ್ನು ನಡೆಸುವುದಕ್ಕೆ ಅಂದಿನ ಹಿರಿಯರು ಕೃಷಿಮಾಡಿದ್ದಾರೆ. ಈದಿನ ನಾವು ಸಾಮೆತ (ಗಾದೆ) ಅನ್ನುವ ಪದವನ್ನು ಆದಿನ **'ಸಮತ'** ಅನ್ನುತ್ತಿದ್ದರು. ದೊಡ್ಡವರ ಮಾತು ಬದಲಾಗದಿರುವುದೆಂದು, ನಿಜವೆಂದು, ಕೆಡದವಾಕ್ಯವೆಂದು ಹೇಳುವುದಕ್ಕೆ ಸಮಾನವಾಗಿ "ದೊಡ್ಡವರ ಮಾತು ಮೊಸರನ್ನದ ಬುತ್ತಿ(ಮೂಟೆ)" ಅನ್ನುವುದು ಇಂದಿಗೂ ಇದೆ. ದೊಡ್ಡವರಮಾತಿಗೆ ಸಮತವಾಗಿ ಮೊಸರನ್ನದ ಬುತ್ತಿಯನ್ನು ಬಳಸಿದ್ದಾರೆ. **ಸಮತ** ಎಂದರೆ ಸಮಾನವೆಂದು ಅರ್ಥ. ಹಾಗೆ **"ಚಿಂತೆ ಇಲ್ಲದಮ್ಮನಿಗೆ ಸಂತೆಯಲ್ಲಿ ನಿದ್ರೆಬಂತು"** ಅನ್ನುವುದು ಸಹ ಇದೆ. ಚಿಂತೆ ಇಲ್ಲದಮ್ಮನಿಗೆ ಸಂತೆಯಲ್ಲಿ ನಿದ್ರೆಗೆ ಸಮಾನವಾಗಿ (ಸಮತವಾಗಿ) ಹೋಲಿಸಿ ಹೇಳುವುದೆಂಬ ಮಾತು. ಇಂತಹ ಸಮತ ಅನ್ನುವಪದ ಸ್ವಲ್ಪಕಾಲಕ್ಕೆ ಹೇಳುವುದರಲ್ಲಿ **'ಸಾಮತ'** ವಾಗಿ ಬದಲಾಗಿದೆ. ಹಾಗೆ ಮತ್ತೆ ಸ್ವಲ್ಪಕಾಲಕ್ಕೆ ಸಾಮತ ಹೋಗಿ **'ಸಾಮೆತ'** ವಾಗಿ ಬದಲಾಗಿಹೋಗಿ ಈ ದಿನ ನಮ್ಮ ಮುಂದಿದೆ. ಇಂತಹ ಸಾಮೆತಗಳನ್ನು ಎಷ್ಟನ್ನೋ ಪೂರ್ವದಲ್ಲಿ ಮಾನವನ ಸಂಘಪರವಾಗಿ ಸಕ್ರಮವಾಗಿ ನಡೆಸುವುದಕ್ಕೆ ದೊಡ್ಡವರು ಇಟ್ಟಿದ್ದಾರೆ. ಆ ವಿಧಾನದ ಪ್ರಕಾರವೇ ಸಮಾಜದಲ್ಲಿ ಒಂದು ಕೆಟ್ಟದನ್ನು ತೆಗೆದುಹಾಕುವುದಕ್ಕೆ ಸಮಾನ ಹೋಲಿಕೆಯಿಂದ

ಸಂಘದಲ್ಲಿ ಬಲಹೀನನ್ನು ಇಲಿಗೆ ಹೋಲಿಸಿ, ಬಲವಂತನನ್ನು ಆನೆಗೆ ಹೋಲಿಸಿ ಹೇಳುತ್ತಿದ್ದರು. ಬಲವಂತನು ಬಲಹೀನನ ಮೇಲೆ ದೊಡ್ಡಸ್ತಿಕೆ ಚಲಾಯಿಸಿ ಪೀಡಿಸುವು ದನ್ನು **"ಇಲಿ ಮೇಲೆ ಆನೆ ಸವಾರಿ ಮಾಡಿದಂತೆ"** ಎಂದು ಗಾದೆಯನ್ನು ಅನ್ನುತ್ತಿದ್ದರು. ಇದು ಸಂಘವಿದ್ರೋಹಚರ್ಯ ಆದ್ದರಿಂದ ಇದು ಒಳ್ಳೆಯದಲ್ಲವೆಂದು ಎಲ್ಲರಿಗೂ ತಿಳಿಯುವಂತೆ, ಬಾಯಿಂದ ಹೇಳುವುದಲ್ಲದೆ ದೃಶ್ಯರೂಪವಾಗಿ ಕಣ್ಣಿಗೆ ಕಾಣಿಸುವ ಕಾರ್ಯಕ್ರಮವಾಗಿ ತೋರಿಸುತ್ತಿದ್ದರು. ಒಂದು ಚಿಕ್ಕ ಇಲ್ಲಿಯನ್ನಿಟ್ಟು, ಅದರ ಮೇಲೆ ಆನೆಯನ್ನು ಆಸೀನವಾಗುವಂತೆ ಮಾಡಿ, ಅದು ಎಲ್ಲರಿಗೂ ತಿಳಿಯುವಂತೆ ಊರೆಲ್ಲ ಮೆರವಣಿಗೆಮಾಡಿ, ಕೊನೆಗೆ ಈ ಪದ್ಧತಿ ಒಳ್ಳೆಯದಲ್ಲವೆನ್ನುವಂತೆ ಆ ದೃಶ್ಯವನ್ನು ನಾಶ ಮಾಡುತ್ತಿದ್ದರು. ಅವರು ಆ ದಿನ ಮಣ್ಣಿನಿಂದ ಮಾಡಿದ ಗೊಂಬೆಗಳನ್ನು ಅಗ್ನಿಯಲ್ಲಿ ಹಾಕಿ ಸುಟ್ಟರೆ ಇನ್ನೂ ಗಟ್ಟಿಯಾಗಿ ಚೆಕ್ಕುಚೆದರದಂತಿರುತ್ತವೆಂದು, ನೀರಿನಲ್ಲಾದರೆ ಪೂರ್ತಿ ಕರಗಿಹೋಗುತ್ತವೆಂದು ನೀರಿನಲ್ಲಿ ಮುಳುಗಿಸುತ್ತಿದ್ದರು. ನೀರಿನಲ್ಲಿ ಹಾಕಿದ ನಂತರ ಆ ದೃಶ್ಯ ಬೇಗನೆ ನಾಶವಾಗುವುದಕ್ಕೆ ನೀರಿನಲ್ಲಿ ಹಾಕದಮೊದಲೇ ಆ ಗೊಂಬೆಗೆ ಕಾಲು ಕೈಗಳು ಮುರಿದುಹಾಕಿ ಪೂರ್ತಿ ನೀರಿನಲ್ಲಿ ಬೆರೆತುಹೋ ಗುವಂತೆ ಮಾಡುತ್ತಿದ್ದರು. ಇದು ಅಂದಿನ ಸಂಘ ಸಂಸ್ಕರಣ ನಿಮಿತ್ತವಾದ ಆಚರಣೆ. ಈ ಕಾರ್ಯ ಪ್ರತಿ ವರ್ಷ ಒಂದು ಆಚರಣೆಯಾಗಿ ಮಾಡುವುದು ಇಂದಿಗೂ ಉಳಿದಿದೆ. ಆದರೆ ಅರ್ಥಮಾತ್ರ ತಿಳಿಯದಂತೆ ಹೋಗಿದೆ. ಒಬ್ಬರು ಮಾಡುತ್ತಾ ಇದ್ದರೆ ಇನ್ನೊಬ್ಬರು ಆ ಆಚರಣೆ ಮಾಡುವುದೆ ಈ ದಿನ ತಿಳಿದ ವಿಧಾನ, ಅಷ್ಟು ಬಿಟ್ಟರೆ ಅರ್ಥವನ್ನು ಕುರಿತು ಯಾರು ಆಲೋಚಿಸುತ್ತಿಲ್ಲ. ಒಂದು ಮತಸ್ಥರು ಮಾಡುತ್ತಿರುವ ಆಚರಣೆ ಪೂರ್ವದಲ್ಲಿ ದೊಡ್ಡಭಾವನೆಯಿಂದ ಇಟ್ಟಿರುವುದೆಂದು ಆ ಮತಸ್ಥರಿಗೆ ತಿಳಿಯದಿರುವಾಗ, ಇತರ ಮತಸ್ಥರು ಅಪಾರ್ಥ ಮಾಡಿಕೊಳ್ಳುವುದರಲ್ಲಿ ತಪ್ಪಿಲ್ಲ. ಆದರೆ ನಿಜವಾದ ಅರ್ಥವನ್ನು ಆಚರಣೆಯನ್ನು ತೆಗೆದುಕೊಂಡಾಗ ಅದರಲ್ಲಿ ವಿಮರ್ಶಿಸುವುದು ಏನು ಇಲ್ಲ. ಯಾರು ವಿಮರ್ಶಿಸಲಾರರು, ಅಸಲಾದ ಅರ್ಥ ತಿಳಿದಾಗ ಎಲ್ಲಾ ಮತಸ್ಥರ ಸಹಕಾರ ಲಭಿಸುತ್ತದೆ.

ನಾನು ಮೊದಲೇ ಹೇಳಿದ್ದೇನಲ್ಲವೆ ಪೂರ್ವದಲ್ಲಿ ಮತದ ಹೆಸರಿಲ್ಲದ ಪ್ರಜೆಗಳಿಗೆ ದೇವರೊಬ್ಬನೆಂಬ ಭಾವ ಇರುತ್ತಿತ್ತೆಂದು, ದೇವರಿಗೆ ರೂಪ, ಹೆಸರು ಇಲ್ಲವೆಂಬ ಗುರ್ತಿಗೆ ಕಲ್ಲಿನಲಿಂಗವನ್ನು ಇಟ್ಟಿದ್ದಾರೆಂದು, ಆದರೂ ಕಾಲಕ್ರಮವಾಗಿ ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತವೆಂಬ ಗೀತಾ ವಾಕ್ಯಾನುಸಾರ, ಸ್ವಲ್ಪಕಾಲಕ್ಕೆ ಮಾನವರಲ್ಲಿ ಅಜ್ಞಾನವಶದಲ್ಲಿ ಏಕತ್ವಹೋಗಿ, ನಾವು ನೀವು ಅನ್ನುವ ಗುಂಪುಗಳು ಬಯಲ್ಪಟ್ಟಿವೆ. ಈ ದಿನ ರಾಜಕೀಯ ಪಾರ್ಟಿಗಳಿಗೆ ಹೆಸರಿರುವಂತೆ, ಆ ದಿನ ಗುಂಪುಗಳಾಗಿ ಸೀಳಿಹೋದವರಿಗು ಸಹ ಹೆಸರುಗಳಿದ್ದವು. ಹಾಗೆ ಸ್ವಲ್ಪಕಾಲಕ್ಕೆ ಏರ್ಪಟ್ಟಿರುವವೆ ವೈಷ್ಣವರು, ಶೈವರು. ಪೂರ್ವದಲ್ಲಿ ವೈಷ್ಣವರು ಶೈವರು ಸಾಂಪ್ರದಾಯಗಳನ್ನು ಏರ್ಪಡಿಸಿಕೊಂಡು, ಇವು ನಮ್ಮ ಸಂಪ್ರದಾಯಗಳು ಅನ್ನುತ್ತಾ, ಅವುಗಳ ಭದ್ರತೆಗೋಸ್ಕರ ಕೆಲವು ಪುರಾಣಗಳನ್ನು ಬರೆದು, ಅವು ಪ್ರಜೆಗಳೆಲ್ಲರಿಗೂ ತಿಳಿಯುವಂತೆ ಮಾಡಿ, ಅವರ ಸಂಪ್ರದಾಯಗಳನ್ನು ಭದ್ರಮಾಡಿಕೊಂಡಿದ್ದಾರೆ. ಅಂತಹ ಪುರಾಣಗಳಲ್ಲಿ ಶೈವರ ಸಂಬಂಧವಾದ ಶಿವಪುರಾಣ ಹುಟ್ಟಿದೆ.

ಹೀಗೆ ಶೈವ ಏರ್ಪಡುವ ಎರಡುಸಾವಿರ ವರ್ಷಗಳಿಗೆ ಮೊದಲೆ ಸಮಾಜಪರವಾಗಿ ಆನೆಯನ್ನು ಇಲಿಯನ್ನು ಮೆರವಣಿಗೆ ಮಾಡಿ ನೀರಿನಲ್ಲಿ ಮುಳಿಗಿಸುವ ಆಚರಣೆ ಇತ್ತು. ಆ ಆಚರಣೆ ಮಾಡುತ್ತಾ ಮಾಡುತ್ತಾ ಹಿರಿಯರು ಮರಣಿಸುತ್ತಾಬಂದು, ಚಿಕ್ಕವರು ಅವರನ್ನನುಸರಿಸುತ್ತಾ ಮಾಡುತ್ತಾ ಕೊನೆಗೆ ಏಕೆ ಈ ಕಾರ್ಯಕ್ರಮ ಮಾಡುತ್ತಿದ್ದೇವೆಂಬುವುದು ಯಾರಿಗೂ ತಿಳಿಯದಂತೆ ಹೋಗಿದೆ. ಅರ್ಥ ಇದು ಎಂದು ತಿಳಿಯದೆ ಎಷ್ಟೋಜನ ಸೇರಿ ಆನಂದವಾಗಿ ಇಲಿಯನ್ನು ಆನೆಯನ್ನು ಮೆರವಣಿಗೆ ಮಾಡುತ್ತಿದ್ದೇವೆ. ಇದೇನೋ ದೊಡ್ಡ ಭಕ್ತಿಕಾರ್ಯವೆಂದುಕೊಂಡು ಆ ಆನೆಯಾಕಾರಕ್ಕೆ ಮುಗಿಯುವುದು ಪ್ರಾರಂಭಿಸಿದ್ದಾರೆ. ಹಾಗೆ ಶೈವವುದ್ಭವಿಸಿದ ದಿನಗಳಲ್ಲಿ ಇಲಿ ಆನೆ ಬೊಂಬೆಯನ್ನು ಮುಗಿಯುವವರು ಇದ್ದಾರೆ. ಆದ್ದರಿಂದ ಶೈವರು ಶಿವಪುರಾಣದಲ್ಲಿ ಇಲಿಗೂ

ಆನೆಗೂ ವಿಶಿಷ್ಟತೆ ಕಲ್ಪಿಸಿ, ಆನೆತಲೆ ಹೊಂದಿದವನು ವಿನಾಯಕನೆಂದು, ಪಾರ್ವತಿ ಕುಮಾರನೆಂದು ಇರುವ ಭಕ್ತಿಯನ್ನು ಇನ್ನು ಸ್ವಲ್ಪ ಹೆಚ್ಚಾಗುವಂತೆ ಒಳ್ಳೆಯಕೆಲಸವೇ ಮಾಡಿದ್ದಾರೆ. ಇರುವ ಭಕ್ತಿಯನ್ನು ಹೆಚ್ಚು ಮಾಡುವುದರಿಂದ ಆನೆಗೊಂಬೆಗಳು ಮಾಡುವವರು ಹೆಚ್ಚಾಗಿದ್ದಾರೆ. ಹಣ ಖರ್ಚು ಮಾಡಿ ಪೂಜಿಸುವವರು ಹೆಚ್ಚಾಗಿದ್ದಾರೆ, ಆದರೆ ನೀರಿನಲ್ಲಿ ಹಾಕಿ ತುಳಿಯುವ ಪೂರ್ವದ ಆಚರಣೆಯನ್ನು ಬಿಡಿಸಲಾರದೆಹೋಗಿದ್ದಾರೆ. ಈ ವಿಧಾನವನ್ನು ಬಿಡಿಸಲಾರದ ಹಿರಿಯರು ವಿನಾಯಕ ನಿಮಜ್ಜನವನ್ನು ನೀರಿನಲ್ಲಿಯೇ ಮಾಡುತ್ತಿದ್ದೇವೆಂದಿದ್ದಾರೆ. ನಿಮಜ್ಜನೆ ಎಂದರೆ ಸ್ನಾನವೆಂದು ಅರ್ಥ ಆದರೆ ಮುರಿದುಹಾಕುವುದು, ಪೂಜಿಸಿದ ದೇವರನ್ನು ಕಾಲಿನಲ್ಲಿ ಒದೆಯುವುದು ಅಲ್ಲವೆಂದು ತಿಳಿಯಬೇಕು. ನೀವು ಕೇಳಿದ ಮೊದಲ ಪ್ರಶ್ನೆಯಲ್ಲಿ ವಿಘ್ನವನ್ನು ಉಂಟುಮಾಡುವ ವಿಘ್ನೇಶ್ವರನನ್ನು ದೂಷಿಸಬೇಕೇ ಹೊರತು ಪೂಜಿಸಬಾರದೆಂದಿದ್ದೀರಲ್ಲವೆ! ಅಸಲಿಗೆ ವಿಘ್ನೇಶ್ವರನನ್ನು ದೂಷಿಸುವುದಕ್ಕೆ ಆತನು ನಮಗೆ ಯಾವ ವಿಘ್ನ, ಯಾವ ಕೆಟ್ಟದು ಮಾಡಲಿಲ್ಲ. ಆದ್ದರಿಂದ ದೂಷಿಸಬೇಕಾಗಿರುವುದು ಇಲ್ಲ. ಭಕ್ತಿ ಹೊಂದಿ ವಿಘ್ನೇಶ್ವರನನ್ನು ಪೂಜಿಸುವುದರಲ್ಲಿ ತಪ್ಪಿಲ್ಲ, ಆದರೆ ಪೂಜಿಸಿದವನನ್ನು ಪೂಜಿಸಿದಂತೆ ಇಟ್ಟುಕೊಂಡಿದ್ದರೆ ಚೆನ್ನಾಗಿರುತ್ತದೆ. ನೀರಿನಲ್ಲಿ ಬಿಸಾಡುವುದು ಒಳ್ಳೆಯದು ಅಲ್ಲ. ಒಂದುಮಾತಿಗೆ ಬಂದರೆ ಅದನ್ನು ಧೂಷಿಸುವುದಕ್ಕೆ ಪೂಜಿಸುವುದಕ್ಕೆ ಅಲ್ಲದೆ ಸಂಘಪರವಾದ ಅನ್ಯಾಯವನ್ನು ಬಹಿರ್ಗತ ಮಾಡುವುದಕ್ಕೆ ಮಾಡುವ ಮೆರವಣಿಗೆ ಎಂದು, ಹಾಗೆ ಅದನ್ನು ಇಲ್ಲದಂತೆ ಮಾಡಬೇಕೆಂಬ ಉದ್ದೇಶವೆ ಆ ಗೊಂಬೆ ಯನ್ನು ನೀರಿನಲ್ಲಿ ಮುಳುಗಿಸಿ ನಾಶ ಮಾಡುವುದೆಂದು ಎಲ್ಲರೂ ತಿಳಿಯಬೇಕು.

ನೀವು ಕೇಳಿದ ಮತ್ತೊಂದು ಪ್ರಶ್ನೆ ಪ್ರಕಾರ ಬಲವಂತವಾಗಿ ಹಣ ವಸೂಲುಮಾಡಿ ಉತ್ಸವ ಮಾಡುವುದು ಪದ್ಧತಿಯಲ್ಲ. ಭಕ್ತಿಯಲ್ಲಿ ಸಹ ಅದು ಬಲವಂತದ ಭಕ್ತಿ ಆಗುತ್ತದೆ, ಆದರೆ ಮನಸ್ಫೂರ್ತಿಯ ಭಕ್ತಿ ಅಲ್ಲ. ಇಷ್ಟವಿಲ್ಲದೆ ಕೊಟ್ಟವರು ಕೇಳಿದವರನ್ನೇ ಅಲ್ಲದೆ, ವಿಘ್ನೇಶ್ವರನನ್ನು ಸಹ ನಿಂದಿಸುವುದಕ್ಕೆ

ಅವಕಾಶವಿದೆ. ಆದ್ದರಿಂದ ಇನ್ನೊಬ್ಬರತ್ತಿರ ಹಣ ವಸೂಲು ಮಾಡುವುದು ಒಳ್ಳೆಯದು ಅಲ್ಲ.

**ಪೂರ್ವಕಾಲದಲ್ಲಿ ಸಮತ ಎನ್ನುವಪದ ಸಾಮತವಾಗಿ ಬದಲಾಗಿ ಕೊನೆಗೆ ಸಾಮೆತವಾಗಿ ಬದಲಾದಂತೆ, ಆ ದಿನ ದೊಡ್ಡವರು ಇಟ್ಟಿರುವ ಸಂಘಸಂಸ್ಕರಣ ಪದ್ಧತಿಯಾದ ಇಲಿ ಆನೆಯ ಮೆರವಣಿಗೆ ಈ ದಿನ ಭಕ್ತಿಪರವಾಗಿ ಬದಲಾಗಿ ಹೋಗಿದೆ.** ಭಾವ ಬದಲಾದರೂ ಆಚರಣೆ ಪೂರ್ತಿಬದಲಾಗದೆ ಪೂರ್ವಾಚರಣೆ ಮಾಡುವುದರಿಂದ  ಕೆಲವರಿಂದ ವಿಮರ್ಶಿಸಲ್ಪಡುತ್ತಿದೆ. ಆಚರಣೆಯನ್ನು ಪೂರ್ತಿ ಭಕ್ತಿಪರವಾಗಿ ಬದಲಾಯಿಸಿಕೊಂಡರು ಪರವಾಗಿಲ್ಲ ಅಥವಾ ಮೊದಲಿನಂತೆ ಸಂಘಪರವಾಗಿ ಇಟ್ಟುಕೊಂಡರು ಪರವಾಗಿಲ್ಲ. ಆದರೆ ಈರೀತಿ ಮಾಡುತ್ತಿರುವ ಕೆಲಸಕ್ಕೆ ಅರ್ಥ ತಿಳಿಯದೆಹೋಗುವುದರಿಂದ ಇತರ ಮತಗಳಿಂದ, ನೋಡುವವರಿಂದ ವಿಮರ್ಶಿಸಲ್ಪಡುವ ಕಾರ್ಯವಾಗಿದೆ. ವಿನಾಯಕನ ನಿಮಜ್ಜನೆ (ಸ್ನಾನ) ಎನ್ನುವ ಹೆಸರಿನಿಂದ ಚಿಕ್ಕ ಚಿಕ್ಕ ಗೊಂಬೆಗಳನ್ನು ನೀರಿನೊಳಗೆ ಬೀಸುತ್ತಿರುವುದು ನೋಡಿದರೆ ನಿಜವಾಗಲು ಭಕ್ತಿ ಎನಿಸುವುದಿಲ್ಲ. ಹಾಸ್ಯಕ್ಕಾಗಿ ಮಾಡುತ್ತಿರುವ ಕೆಲಸವಾಗಿ ಕಾಣಿಸುತ್ತಿದೆ, ಆದರೆ ಪೂರ್ತಿ ಭಕ್ತಿಯಾಗಿ ಕಾಣಿಸುವ ಕೆಲಸವಾಗಿ ತೋಚುತ್ತಿಲ್ಲ. ಮೆರವಣಿಗೆ ಅನ್ನೋಣವಾ ಕೆಲವು ಕಡೆ ಪೀರ್ಲಹಬ್ಬದ ರೀತಿಯಲ್ಲಿ ಕುಡಿದು ಕುಪ್ಪಳಿಸುವುದು, ಎಗರಾಡುವುದನ್ನು ನೋಡಿದರೆ ಅರ್ಥವಿಲ್ಲದ ಸಂಪ್ರದಾಯವಾಗಲಿ ಅರ್ಥ ಸಂಪ್ರದಾಯ ಅಲ್ಲವೆನಿಸುತ್ತದೆ. ಆದ್ದರಿಂದ ನಾವು ಹೇಳುವ ಮಾತನ್ನು ಅರ್ಥಮಾಡಿಕೊಂಡು ನಮ್ಮದು ಜ್ಞಾನಪರವಾದ ಇಂದೂಮತವೆಂದು, ಇದರ ಕೆಲಸಗಳೆಲ್ಲ ಎಷ್ಟೋ ಪವಿತ್ರತೆಯಿಂದ ಕೂಡಿರಬೇಕೆಂದು ತಿಳಿದು, ವಿನಾಯಕ ಉತ್ಸವವನ್ನು ಪವಿತ್ರವಾಗಿ ಆಚರಿಸಿರಿ ವಿಮರ್ಶೆಗಳಿಗೆ ದಾರಿ ಮಾಡಿಕೊಡಬೇಡಿ.

# ಶರೀರಾಂತರ್ಗತ ಯಂತ್ರಾಂಗ

# 1) ಬುದ್ಧಿ ಕರ್ಮಾನುಸಾರಿಣಿ (ತಪ್ಪು)
# 2) ಚಿತ್ತವು ಕರ್ಮಾನುಸಾರಿಣಿ (ಒಪ್ಪು)

**ಪ್ರಶ್ನೆ :–** ಪ್ರಾರಬ್ಧಕರ್ಮ ಸಂಚಿತಕರ್ಮ ಹೇಗೆ ಸುಟ್ಟುಹೋಗುತ್ತದ್ದೋ ತಿಳಿಸಿದ್ದಾರೆ. ಆಗಾಮಿಕರ್ಮ ಒಂದರ ವಿಷಯ ತಿಳಿಯದಂತಿದೆ. ಅದನ್ನು ಹೇಗೆ ನಿವಾರಿಸಿಕೊಳ್ಳಬಹುದೋ ತಿಳಿಸಿರೆಂದು ಕೋರುತ್ತಿದ್ದೇನೆ.

**ಉತ್ತರ :–** ಜ್ಞಾನಾಗ್ನಿಯಿಂದ ಪ್ರಾರಬ್ಧ ಸಂಚಿತ ಕರ್ಮಗಳು ಹೇಗೆಹೋಗುವುದು ನಿನಗೆ ತಿಳಿದಿರುವ ವಿಷಯವೇ. ಆಗಾಮಿಕಕರ್ಮ ನಿವಾರಣೆಯನ್ನು ತಿಳಿದುಕೊಳ್ಳುವುದು ಬಹಳ ಮುಖ್ಯ. ಏಕೆಂದರೆ ವರ್ತಮಾನದಲ್ಲಿ ನಡೆಯುತ್ತಿರುವ ಕೆಲಸದಲ್ಲಿ ಬರುವ ಕರ್ಮ ಆಗಾಮಿಕ. ಆದ್ದರಿಂದ ಮೊದಲು ಇದರಿಂದ ತಪ್ಪಿಸಿಕೊಳ್ಳುವುದು ಒಳ್ಳೆಯದು. ಆಗಾಮಿಕಕರ್ಮದಿಂದ ತಪ್ಪಿಸಿಕೊಂಡವರು ಸುಲಭವಾಗಿ ಸಂಚಿತ ಪ್ರಾರಬ್ಧಕರ್ಮಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಆದ್ದರಿಂದ ಕರ್ಮ ನಿವಾರಣ ಸಿದ್ಧಾಂತಗಳಲ್ಲಿ ಆಗಾಮಿಕರ್ಮ ನಿವಾರಣ ಸಿದ್ಧಾಂತ ಬಹಳ ಮುಖ್ಯವಾದುದು. ಭಗವದ್ಗೀತೆಯಲ್ಲಿ ಸಹ ಆಗಾಮಿಕಕರ್ಮ ನಿವಾರಣಾರ್ಥವಾಗಿ ಪರಮಾತ್ಮ ಭಗವಂತನ ಮೂಲಕ ಬಹಳ ಬೋಧನೆ ತಿಳಿಸಿದ್ದಾನೆ. ಪರಮಾತ್ಮ ತನ್ನ ಬೋಧನೆಯಲ್ಲಿ ಕರ್ಮವನ್ನು ಆಗಾಮಿಕ, ಪ್ರಾರಬ್ಧ, ಸಂಚಿತ ಎಂದು ವಿಭಾಗಿಸದೆ ಎಲ್ಲವನ್ನು ಸೇರಿಸಿ ತಿಳಿಸುತ್ತಾ ಹೋಗಿದ್ದಾನೆ. ಭಗವಂತನು ತಿಳಿಸಿದ ಬೋಧನೆಯಲ್ಲಿ ಕರ್ಮವನ್ನು ವಿವರವಾಗಿ ಅರ್ಥ ಮಾಡಿಕೊಳ್ಳು ವುದಕ್ಕೋಸ್ಕರ ನಾವು ಸಂಚಿತ, ಪ್ರಾರಬ್ಧ ಆಗಾಮಿಕಕರ್ಮಗಳೆಂದು ವಿಭಜಿಸಿಕೊಳ್ಳುತ್ತಿದ್ದೇವೆ. ಆತನ ಬೋಧನೆಯಲ್ಲಿ **ಯಥೈಧಾಂಸಿ ಸಮಿದ್ಧೋಗ್ನಿಃ ಭಸ್ಮಸಾತ್ಕುರುತೇರ್ಜುನಾ, ಜ್ಞಾನಾಗ್ನಿ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ಅಗ್ನಿಯಲ್ಲಿ ಎಷ್ಟುಕಟ್ಟಿಗೆಗಳು ಹಾಕಿದರು ಬೂದಿಯಾಗುವಂತೆ, ಜ್ಞಾನಾಗ್ನಿಯಲ್ಲಿ ಸರ್ವಕರ್ಮಗಳು ಬೂದಿಯಾಗುತ್ತವೆ.** ಎಂದು ಕರ್ಮನಿವಾರಣಾರ್ಥ ಒಂದೇ ಸೂತ್ರವನ್ನು ತಿಳಿಸಿ ಕರ್ಮವಿವರದಲ್ಲಿ ಒಂದುಕಡೆ ಪ್ರಾರಬ್ಧಕರ್ಮ ನಿವಾರಣೆ,

ಒಂದುಕಡೆ ಆಗಾಮಿಕಕರ್ಮ ನಿವಾರಣೆ, ಒಂದುಕಡೆ ಸಂಚಿತಕರ್ಮ ನಿವಾರಣೆ ಯನ್ನು ಕುರಿತು ತಿಳಿಸಿದ್ದಾನೆ. ನಾವು ಮುಂಚೆ ತಿಳಿಸಿದ **"ಪ್ರಬೋಧ"** ಗ್ರಂಥದಲ್ಲಿ ಪರಮಾತ್ಮ ಸೂತ್ರದ ಪ್ರಕಾರ ಕರ್ಮನಿವಾರಣೆ ಇದೆಯೆಂದು ಮಾತ್ರ ತಿಳಿಸಿದ್ದೇವೆ. ಆದರೆ ಕರ್ಮವನ್ನು ಬಿಡಿಸಿ ತಿಳಿಸಲಿಲ್ಲ. ಆದ್ದರಿಂದ ಈಗ ಇದರಲ್ಲಿ ತಿಳಿಸುತ್ತಿದ್ದೇವೆ.

ನಿತ್ಯಜೀವನದಲ್ಲಿ ಚಿಕ್ಕದಾಗಲಿ, ದೊಡ್ಡದಾಗಲಿ ಪ್ರತಿಕಾರ್ಯವು ಮೊದಲು ಮಾಡಿಕೊಂಡ ಕರ್ಮವನ್ನನುಸರಿಸಿ ನಡೆಯುತ್ತಿದೆ. ಒಬ್ಬನು ಮತ್ತೊಬ್ಬನನ್ನು ಹತ್ಯೆ ಮಾಡಿದ್ದಾನೆಂದುಕೊಳ್ಳಿ. ಆ ಹತ್ಯೆ ನಡೆಯುವುದಕ್ಕೆ ಕಾರಣ ಅವನ ಕರ್ಮವೇ. ಪ್ರಾರಬ್ಧದಲ್ಲಿ ಅವನು ಹತ್ಯೆ ಆಗುವಂತಿರುವುದರಿಂದ ಮತ್ತು ಹತ್ಯೆಮಾಡುವವನಿಗೆ ಹತ್ಯೆಮಾಡುವ ಕರ್ಮ ಇರುವುದರಿಂದ ಆ ಕಾರ್ಯ ನಡೆದಿದೆ. ಮಾಡುವವನು ಮಾಡಿಸಿಕೊಳ್ಳುವವನು ಇಬ್ಬರು ಯಾರ ಕರ್ಮವನ್ನು ಅವರು ಅನುಭವಿಸುತ್ತಿದ್ದಾರೆ. ಆ ವಿಧವಾಗಿ ಇಬ್ಬರ ಕರ್ಮ ಖರ್ಚಾಗಿಹೋ ಗುತ್ತಿದೆ. ಮತ್ತೆ ಹೊಸಕರ್ಮ ಬರುವುದೆಂಬುವುದು ಮಾತ್ರ ಇರಬಾರದು. ಪ್ರತಿಜೀವರಾಶಿ ಕರ್ಮವನ್ನು ಅನುಭವಿಸುವುದಕ್ಕೆ ಹುಟ್ಟುತ್ತಿದೆ, ಆ ಕರ್ಮ ಅನುಭವಕ್ಕೆ ಕಾರ್ಯಗಳು ಮಾಡುತ್ತಿವೆ. ಮಾಡುತ್ತಿರುವ ಕಾರ್ಯಗಳು ಕರ್ಮವನ್ನನುಸರಿಸಿ ಒಳ್ಳೆಯವು ಆಗಬಹುದು ಅಥವಾ ಕೆಟ್ಟವು ಆಗಬಹುದು. ಈ ವಿಧವಾಗಿ ಜೀವನಾಂತ್ಯದವರೆಗು ಕರ್ಮ ಖರ್ಚಾಗುತ್ತಲೇ ಇದೆ. ಆದರೆ ಹೊಸ ಕರ್ಮವನ್ನು ಜೀವಿಗಳು ಯಾವಕಾರಣಕ್ಕು ಮಾಡಲಿಲ್ಲ. ಆಗಾಮಿಕ ಕರ್ಮವೆಂಬ ಹೊಸಕರ್ಮ ಬರುವುದಕ್ಕೆ ಸಾಧ್ಯವಿಲ್ಲ. ಪ್ರತಿವಿಷಯವನ್ನು ಕರ್ಮವೇ ಪ್ರೇರೇಪಿಸುತ್ತಿದೆ. ಕರ್ಮವೇ ಮಾಡಿಸುತ್ತಿದೆ. ಜೀವಿಗೆ ಸ್ವಲ್ಪವೂ ಸಂಬಂಧವಿಲ್ಲ. ಜೀವಿಯು ಯಾವ ಕಾರ್ಯವನ್ನಾಗಲಿ ಸ್ವತಃ ಮಾಡಲಿಲ್ಲ. ಆದ್ದರಿಂದ ಹೊಸಕರ್ಮ ಬರುವುದಕ್ಕೆ ಸಾಧ್ಯವಿಲ್ಲ.

ಉದಾಹರಣೆಗೆ ಒಂದು ಹತ್ಯಾ ಕಾರ್ಯವನ್ನು ತೆಗೆದುಕೊಳ್ಳೋಣ. ಮಲ್ಲಯ್ಯ ಅನ್ನುವವನು ರಾಮಣ್ಣ ಅನ್ನುವವನ ಕೈಯಲ್ಲಿ ಹತ್ಯೆ ಆಗಿದ್ದಾನೆ. ಇಲ್ಲಿ ಕರ್ಮಕಾರ್ಯರೂಪವಾಗಿ ಹೇಗೆ ನಡೆದಿದೆ ಎಂದರೆ! ಮಲ್ಲಯ್ಯ

ಒಂಟಿಯಾಗಿ ಹೋಗುವುದು ರಾಮಣ್ಣನ ದೃಷ್ಟಿಯಲ್ಲಿ ಬಿದ್ದಿದೆ. ರಾಮಣ್ಣನ ಕಣ್ಣು ಆ ವಿಷಯವನ್ನು ಮೊದಲು ಸೂರ್ಯಚಂದ್ರನಾಡಿಗಳ ಮೇಲಿರುವ ಮನಸ್ಸಿಗೆ ತಿಳಿಸಿದೆ. ಮನಸ್ಸು ಮಲ್ಲಯ್ಯ ಹೋಗುವ ವಿಷಯವನ್ನು ತಲೆಯಲ್ಲಿನ ಜೀವಿಗೆ ಬ್ರಹ್ಮನಾಡಿ ಮೂಲಕ ತಿಳಿಸಿದೆ. ಅಲ್ಲಿಗೆ ಸೇರಿದ ವಿಷಯವನ್ನು ಜೀವಿಯು ಸಾಕ್ಷಿಭೂತನಾಗಿ ನೋಡುತ್ತಿದ್ದಾನೆ. ಜೀವಿಗೆ ಪಕ್ಕದಲ್ಲಿಯೇ ಪೊರೆಯಂತಿರುವ ಬುದ್ಧಿ ಬಂದಿರುವ ವಿಷಯವನ್ನು ಮೊದಲು ಗ್ರಹಿಸಿ ಆ ವಿಷಯವನ್ನು ಎರಡುವಿಧಗಳಲ್ಲಿ ಬಿಡಿಸಿ ಹೇಳುತ್ತದೆ. ಇವನನ್ನು ಸಾಯಿಸಿದರೂ ಚೆನ್ನಾಗಿ ರುತ್ತದೆಂದು ಬುದ್ಧಿ ಹೇಳುತ್ತದೆ. ಮತ್ತು ಇವನನ್ನು ಸಾಯಿಸಿದರು ಅವನ ಸಂಬಂಧಿಕರಿಂದ ಕಷ್ಟ ಇರುತ್ತದೆಂದು ಹೇಳುತ್ತದೆ. ಎಷ್ಟು ದಿನಗಳಿಂದಲೋ ಕಾದುಕೊಂಡಿದ್ದೇನೆ ದೊರೆತ ಸಮಯವನ್ನು ಬಿಡಬಾರದೆಂದು ಹೇಳುತ್ತದೆ. ಮತ್ತು ಇವನನ್ನು ಸಾಯಿಸುವುದರಿಂದ ಹಣ ಕೋರ್ಟುಗಳಿಗೆ ಬಹಳ ಖರ್ಚಾಗುತ್ತದೆಂದು ಹೇಳುತ್ತದೆ. ಈ ಪ್ರಕಾರ ಬುದ್ಧಿ ಒಳ್ಳೆಯಕೆಟ್ಟದನ್ನು, ಲಾಭನಷ್ಟಗ ಳನ್ನು, ಕಷ್ಟಸುಖಗಳನ್ನು ಎರಡು ವಿಧಗಳಲ್ಲಿ ವಿವರವಾಗಿ ತಿಳಿಸುತ್ತದೆ. ಹಾಗೆ ಎರಡು ವಿಧಗಳ ಬುದ್ಧಿ ತಿಳಿಸಿದ ವಿಷಯವನ್ನು ಯಾವುದೋ ಒಂದು ಮಾಡೆಂದೋ ಅಥವಾ ಮಾಡಬೇಡವೆಂದೋ ನಿರ್ಣಯಿಸುವುದು ಬುದ್ಧಿಗೆ ಪಕ್ಕದ ಪೊರೆಯಾದ ಚಿತ್ತ. ಚಿತ್ತವು ತಾನು ನಿರ್ಣಯಿಸಿರುವುದನ್ನು ಮನಸ್ಸಿಗೆ ತಿಳಿಸುತ್ತದೆ. ಮನಸ್ಸು ಚಿತ್ತವು ತಿಳಿಸಿದ ವಾರ್ತೆಯನ್ನು ಕರ್ಮೇಂದ್ರಿಯಗಳಿಗೆ ತಿಳಿಸುತ್ತದೆ. ಕರ್ಮೇಂದ್ರಿಯಗಳು ಆ ಕಾರ್ಯವನ್ನು ಮಾಡುತ್ತಿವೆ. ಈ ವಿಧವಾಗಿ ನಡೆದ ಹತ್ಯಾಕಾರ್ಯದಲ್ಲಿ ರಾಮಣ್ಣ ಎಂಬ ಜೀವಿಯು ಎಷ್ಟು ಜವಾಬ್ದಾರನು ಎಂದರೂ ಯಾವ ಜವಾಬ್ದಾರನೂ ಅಲ್ಲವೆಂದು ಹೇಳಬಹುದು. ಏಕೆಂದರೆ ನಡೆದ ಕೆಲಸದಲ್ಲಿ ಜೀವಿಯು ಸಾಕ್ಷಿಯಾಗಿ ನೋಡುತ್ತಿದ್ದಾನೆ. ಆತನ ಜ್ಞಾನೇಂದ್ರಿಯಗಳು, ಮನಸ್ಸು, ಬುದ್ಧಿ, ಚಿತ್ತ, ಕರ್ಮೇಂದ್ರಿಯಗಳೇ ಈ ಕೆಲಸದಲ್ಲಿ ಪಾತ್ರವಹಿಸಿವೆ. ಜ್ಞಾನೇಂದ್ರಿಯಗಳೆ ನೋಡಿ ಮನಸ್ಸಿಗೆ ತಿಳಿಸಿದಾಗ, ಮನಸ್ಸು ಮೇಲೆ ಕಪಾಲದಲ್ಲಿನ ಬುದ್ಧಿಗೆ ತಿಳಿಸಿದಾಗ, ಒಳ್ಳೆಯಕೆಟ್ಟದ್ದನ್ನು ಎರಡಾಗಿ ಬುದ್ಧಿ ಬಿಡಿಸಿ ಹೇಳಿದಾಗ ಚಿತ್ತವು ನಿರ್ಣಯಿಸಿದಾಗ, ಕರ್ಮೇಂದ್ರಿಯಗಳು

ಕೆಲಸವನ್ನು ಮಾಡಿವೆ, ಆದರೆ ಜೀವಿಯು ಈ ಕಾರ್ಯಕ್ಕೆ ಯಾವ ಜವಾಬ್ಧಾರನಲ್ಲ. ಆದ್ದರಿಂದ ನಡೆದ ಹತ್ಯೆದಲ್ಲಿನ ಪಾಪ ಜೀವಿಗೆ ಸಂಬಂಧ ಇಲ್ಲ. ಹಾಗೆಂದು ನಿತ್ಯ ನಡೆಯುವ ಒಳ್ಳೆಯಕೆಟ್ಟಕೆಲಸಗಳಲ್ಲಿ ಪುಣ್ಯಪಾಪಗಳು ಇಲ್ಲವಾ, ಅವುಗಳನ್ನು ಜೀವರಾಶಿಗಳು ಹೊಂದುತ್ತಿಲ್ಲವಾ ಎಂದರೆ! ಜೀವಿಗಳು ಪಾಪಪುಣ್ಯಗಳು ಹೊಂದುತ್ತಿವೆಯೆಂದೇ ಹೇಳಬಹುದು. ಹಳೆಯ ಕರ್ಮವನ್ನು ಅನುಭವಿಸುತ್ತಾ ಹೊಸಕರ್ಮವನ್ನು ಹೊಂದುತ್ತಿವೆ. ಆದ್ದರಿಂದ ಎಡಬಿಡದ ಜನ್ಮಗಳು ಉಂಟಾಗುತ್ತಿವೆ. ನಡೆಯುವಕೆಲಸದಲ್ಲಿ ಸಂಬಂಧವಿಲ್ಲದ ಹೊಸಕರ್ಮ ಜೀವಿಗೆ ಯಾವ ವಿಧವಾಗಿ ಅಂಟುತ್ತಿದೆ ಎಂದರೆ!

ಬುದ್ಧಿ ವಿಮರ್ಶಿಸಿದ ವಿಷಯಗಳನ್ನು ಚಿತ್ತವು ನಿರ್ಣಯಿಸಿದಾಗ ಕಾರ್ಯ ನಡೆಯುತ್ತಿದೆ. ನಡೆಯುವ ಕೆಲಸಗಳಿಗೆ ಚಿತ್ತವೇ ಕಾರಣ. ಚಿತ್ತವು ಹತ್ಯೆ ಮಾಡೆಂದೆ ಏಕೆ ನಿರ್ಣಯಿಸಿದೆ? ಮಾಡಬಾರದೆಂದು ನಿರ್ಣಯಿಸಬಾರದಾ? ಅಂದರೆ ಕರ್ಮವನ್ನನುಸರಿಸಿ ಚಿತ್ತವು ನಿರ್ಣಯಿಸುತ್ತದೆ. ಸಾಯುವ ಕರ್ಮ ಅವನಿಗಿರುವಾಗ, ಸಾಯಿಸುವ ಕರ್ಮ ಇವನಿಗಿರುವಾಗ ಆ ಕರ್ಮವೇ ಆ ವಿಧವಾಗಿ ಚಿತ್ತದಿಂದ ನಿರ್ಣಯಿಸುವಂತೆ ಮಾಡುತ್ತಿದೆ. ಆ ವಿಧವಾಗಿ ನಡೆದ ಕೆಲಸವನ್ನು ಚಿತ್ತದ ಪಕ್ಕದಲ್ಲಿರುವ ಅಹಮ್ ಈ ಕೆಲಸ ನಿನ್ನಿಂದಲೇ ನಡೆದಿದೆ, ನೀನು ಇಲ್ಲದಿದ್ದರೆ ಈ ಕೆಲಸ ನಡೆಯುವುದಿಲ್ಲ, ನೀನೆ ಈ ಕೆಲಸಕ್ಕೆ ಯಜಮಾನನು ಎಂದು ಪಕ್ಕದಲ್ಲಿರುವ ಜೀವಿಗೆ ಹೇಳುತ್ತಿರುತ್ತದೆ. ನಡೆದಕೆಲಸದಲ್ಲಿ ತಾನು ಯಾವುದೇ ಸಂಬಂಧವಿಲ್ಲದ ಜೀವಿಯು ಅಹಂಕಾರ ಹೇಳುವ ಮಾತು ಕೇಳಿ, ಅದರಜೊತೆ ಏಕೀಭವಿಸಿ ಅಂದರೆ ಅಹಂಕಾರದಿಂದ ಕೂಡಿಕೊಂಡು ಈ ಕೆಲಸವನ್ನು ನಾನೇ ಮಾಡಿದ್ದೇನೆ ಎಂದು ಅಂದುಕೊಳ್ಳುತ್ತಾನೆ. ಅಹಂಕಾರ ದಿಂದ ನಾನು ಎಂದು ಅಂದುಕೊಳ್ಳುವುದರಿಂದ ಹೊಸ ಕರ್ಮ ಸಂಭವಿಸುತ್ತಿದೆ. ಅಜ್ಞಾನದಿಂದ ಜೀವಿಯು ನಾನೆಂದುಕೊಳ್ಳುವುದು ಸಂಭವಿಸುತ್ತಿದೆ. ಈ ದಿನ ಜೀವರಾಶಿಗಳೆಲ್ಲ ಅಜ್ಞಾನದಶೆಯಲ್ಲಿ ಇವೆಯಾದ್ದರಿಂದ ಕರ್ಮ ಪ್ರತಿ ಕಾರ್ಯದಲ್ಲಿಯೂ ಪಡೆಯುತ್ತಿದ್ದಾರೆ. ಅಜ್ಞಾನವನ್ನು ಬಿಟ್ಟವನು ನಡೆಯುತ್ತಿರುವ

ಕಾರ್ಯದಲ್ಲಿ ತಾನು ಮಾತ್ರ ಜವಾಬ್ಧಾರನಲ್ಲವೆಂದು ಪ್ರತಿಕೆಲಸ ಅಂತಃಕರಣಗಳು, ಜ್ಞಾನ, ಕರ್ಮೇಂದ್ರಿಯಗಳು ಮಾಡುತ್ತಿವೆಯೆಂದು ತಿಳಿದುಕೊಂಡವನು, ಅಹಂಕಾರದ ಮಾತು ಕೇಳದವನು ಹೊಸಕರ್ಮವನ್ನು ಮಾತ್ರ ಪಡೆಯುವುದಿಲ್ಲ. ಆದ್ದರಿಂದ ಗೀತೆಯಲ್ಲಿ **ಯಸ್ಯನಾಹಂಕೃತೋ ಭಾವೋ ಬುದ್ಧಿರ್ಯ್ಯಸ್ಯ ನಲಿಪ್ಯತೇ ಹತ್ವಾಪಿ ಸ ಇಮಾನ್ ಲೋಕಾನ್ನ ಹಂತಿ ನನಿಬಧ್ಯತೇ** ಯಾರು ಅಹಂಕಾರಭಾವವನ್ನು ಹೊಂದುವುದಿಲ್ಲವೊ, ಫಲಿತದ ಮೇಲೆ ಯಾರಿಗೆ ಬುದ್ಧಿ ಇಲ್ಲವೊ ಅವನು ಲೋಕದಲ್ಲಿರುವವರೆಲ್ಲರನ್ನು ಸಾಯಿಸಿದರೂ ಹಂತಕನಲ್ಲ. ಅವನಿಗೆ ಪಾಪಬರುವುದಿಲ್ಲವೆಂದು ಪರಮಾತ್ಮ ತಿಳಿಸಿದ್ದಾನೆ. ಮೊದಲು ಕರ್ಮಾನುಸಾರ ಹತ್ಯೆ ನಡೆದಿದೆ. ಆದರೆ ಜೀವಿಯು ಮಾತ್ರ ಮಾಡಿರುವುದು ಅಲ್ಲವೆಂದು ಆದ್ದರಿಂದ ಪಾಪ ಅಂಟುವುದಿಲ್ಲವೆಂದು ಮೇಲಿನ ಮಾತಿನಲ್ಲಿ ತಿಳಿಯುತ್ತಿದೆ. ಜೀವಿಯು ಅಹಂಕಾರದಿಂದ ಯಾವಾಗಾದರೆ ಕೂಡಿಕೊಳ್ಳು ತ್ತಾನೋ ಆಗಲೇ ನಡೆದ ಕಾರ್ಯದಲ್ಲಿನ ಹೊಸಕರ್ಮ ಸಂಭವಿಸುತ್ತದೆ. ಜೀವಿಯು ತನ್ನ ಶರೀರದಲ್ಲಿನ ಅಹಂಕಾರವನ್ನು ಗುರುತಿಸಿದವ ನಾಗಿ, ಅದು ಹೇಳುತ್ತಿರುವ ವಿಷಯ ತನಗೆ ಸಂಬಂಧವಿಲ್ಲವೆಂದು, ಅದರ ಮಾತು ಯಾವಾಗ ಕೇಳುವುದಿಲ್ಲವೊ ಆಗಲೇ ಅವನಿಗೆ ಕರ್ಮ ಅಂಟುವುದಿಲ್ಲ. ಜ್ಞಾನಾರ್ಜನೆಯಿಂದ ಅಹಂಕಾರದ ಮಾತು ಕೇಳದವನು ಮೊದಲಿನ ಕರ್ಮ ಅನುಭವಿಸುತ್ತಾ ಕಾಲಕಳೆದು, ಮೊದಲಿನ ಕರ್ಮ ಮುಗಿದುಹೋದ ತಕ್ಷಣ ಮೋಕ್ಷವನ್ನು ಹೊಂದುವನು. ಈ ಪದ್ಧತಿಯನ್ನೇ ಕರ್ಮಯೋಗ ಎಂದು ಗೀತೆಯಲ್ಲಿ ತಿಳಿಸಲಾಗಿದೆ.

**ಪ್ರಶ್ನೆ :–** ನಡೆಯುವ ಕೆಲಸವನ್ನು ಜ್ಞಾನೇಂದ್ರಿಯಗಳು ಪ್ರಾರಂಭಿಸುವಂತೆ ನೀವು ಹೇಳಿದ ಮಾತುಗಳಲ್ಲಿ ತಿಳಿದಿದೆ. ಚಿತ್ತ ಕರ್ಮೇಂದ್ರಿಯಗಳ ಮೂಲಕ ಮಾಡಿಸಿ ದಂತೆ ತಿಳಿದಿದೆ. ಇದರಲ್ಲಿ ಮನಸ್ಸಿಗೆ ಸಾಧಾರಣಪಾತ್ರ ಹೊರತು ಮುಖ್ಯಪಾತ್ರ ಏನು ಇಲ್ಲ. ಮತ್ತು ಪ್ರಕೃತಿಯಿಂದ ಉಂಟಾದ ಗುಣಗಳ ಪ್ರಭಾವ ಕಾರ್ಯದಲ್ಲಿ ಏನು ಇಲ್ಲದಂತಿದೆ. ಕರ್ಮವೇ ಚಿತ್ತವನ್ನು ನಿರ್ಣಯಿಸುವಂತೆ ಮಾಡಿದೆ ಎಂದು

ತಿಳಿಸಿದ್ದೀರ. ಇದಕ್ಕೂ ಮೊದಲು ಪ್ರಬೋಧದಲ್ಲಿ ನೀವು ಪ್ರತಿ ಕಾರ್ಯಕ್ಕೂ ಗುಣಗಳೇ ಕಾರಣವೆನ್ನುವಂತೆ ತಿಳಿಸಿದ್ದೀರ. ಇಲ್ಲಿಯೇನೋ ಗುಣಗಳ ವಿಷಯವೇ ಇಲ್ಲದಂತೆ ಕರ್ಮ ಎನ್ನುತ್ತಿದ್ದೀರ. ನನಗಿರುವ ಈ ಸಂಶಯಗಳನ್ನು ವಿವರಿಸಿ ತಿಳಿಸಬೇಕೆಂದು ಕೋರುತ್ತಿದ್ದೇನೆ.

**ಉತ್ತರ :–** ಈಗ ನೀನು ಕೇಳುವ ಪ್ರಶ್ನೆಗಳನ್ನನುಸರಿಸಿ ನಿನ್ನ ಬುದ್ಧಿ ನಾನು ಹೇಳುವ ವಿಷಯಗಳನ್ನು ಚೆನ್ನಾಗಿ ವಿಮರ್ಶಿಸುತ್ತಿದೆ ಎಂದು ತಿಳಿಯುತ್ತಿದೆ. ಸರಿ ನಿನ್ನ ಪ್ರಶ್ನೆಗಳಿಗೆ ಸಮಾಧಾನ ಕೇಳು. ಕರ್ಮವನ್ನು ಕುರಿತು ತಿಳಿದುಕೊಳ್ಳುವುದು ಬಹಳ ದೊಡ್ಡ ಜ್ಞಾನ. ಕರ್ಮ ಇರುವುದರಿಂದಲೇ ಜೀವಿಗೆ ದೇಹವಿದೆ. ಕರ್ಮ ಇಲ್ಲದಿದ್ದರೆ ಜನ್ಮವಿಲ್ಲ. ಜೀವಿಗೆ ಇರುವವು ಎರಡೇ ಗಮ್ಯಗಳು. **'ಒಂದು ಕರ್ಮ, ಎರಡು ಮುಕ್ತಿ'** ಕರ್ಮದಲ್ಲಿರುವ ಜೀವಿಯು ಮುಕ್ತಿಗೆ ಹೋಗಬಹುದು ಆದರೆ ಮುಕ್ತಿಯಲ್ಲಿರುವವನು ಕರ್ಮಕ್ಕೆ ಬರುವುದಿಲ್ಲ. ಈಗ ನಾವು ತಿಳಿದುಕೊಳ್ಳಬೇಕಾಗಿರುವುದೆಲ್ಲಾ ಕರ್ಮದಲ್ಲಿರುವವನನ್ನು ಕುರಿತೇ, ಮುಕ್ತಿಯಲ್ಲಿರುವವನನ್ನು ಕುರಿತು ಅಲ್ಲ. ಕರ್ಮವನ್ನು ಕುರಿತು ತಿಳಿದುಕೊಂಡವನಿಗೆ ತಪ್ಪದೆ ಮುಕ್ತಿ ಲಭಿಸುತ್ತದೆ. ಕರ್ಮವನ್ನು ಕುರಿತು ತಿಳಿದುಕೊಳ್ಳುವುದೇ ಉತ್ತಮಜ್ಞಾನ.

ಪ್ರತಿ ಕ್ಷಣದಲ್ಲಿಯೂ ಕರ್ಮ ವಿನಿಯೋಗಿಸಲ್ಪಡುತ್ತಿದೆ. ನಡೆಯುತ್ತಿರುವ ಕಾಲದಲ್ಲಿ ಕ್ಷಣಕ್ಷಣಕ್ಕೂ ಕರ್ಮವೇ ಕಾರಣ, ಕರ್ಮ ಇಲ್ಲದಿದ್ದರೆ ಕಾಲವೇ ಇಲ್ಲ. ಕಾಲ ಇಲ್ಲದಿದ್ದರೆ ಕರ್ಮ ಇಲ್ಲ. ಕಾಲ ಕರ್ಮಗಳು ಎರಡು ಸಂಬಂಧವಾಗಿವೆ. ಪ್ರತಿಕಾಲದಲ್ಲಿಯೂ ಜೀವಿಯು ಕರ್ಮವನ್ನು ಅನುಭವಿಸುತ್ತಿದ್ದಾನೆ. ಅಂದರೆ ಮಲಗುವಾಗ, ನಿದ್ರಿಸುವಾಗ, ಸುಮ್ಮನಿರುವಾಗ, ಕೆಲಸಗಳು ಮಾಡುತ್ತಿರುವಾಗ, ಮಾತನಾಡುತ್ತಿರುವಾಗ, ಶ್ವಾಸ ಬಿಡುವಾಗ, ಕಣ್ಣರೆಪ್ಪೆಗಳು ಮುಚ್ಚುತ್ತಾ ತೆರೆಯುತ್ತಿರುವಾಗ, ಅತಿಚಿಕ್ಕ ಕೆಲಸದಿಂದ ಯಾವ ಕಾರ್ಯದವರೆಗಾದರು, ಯಾವ ಕಾರ್ಯಮಾಡದೆ ಸುಮ್ಮನಿರುವ ಸಮಯದಲ್ಲಾದರೂ ಜೀವಿಯು ಕರ್ಮವನ್ನು ಅನುಭವಿಸುತ್ತಿದ್ದಾನೆ. ಸುಮ್ಮನಿರುವುದು ಸಹ ಕರ್ಮವೇನಾ! ಎಂದು ಕೆಲವರಿಗೆ ಅನುಮಾನ ಬರಬಹುದು ನಿಜವಾಗಲು ಕರ್ಮವೇ ಎಂದು

ತಿಳಿದುಕೊಳ್ಳಿ. ಕಾಲ ಕಳೆಯುತ್ತಿದೆ ಎಂದರೆ ಕರ್ಮ ಕಳೆಯುತ್ತಿದೆ ಎಂಬ ಸೂತ್ರದ ಪ್ರಕಾರ ಸುಮ್ಮನಿರುವಾಗಲೂ ಸಹ ಕಾಲ ಕಳೆಯುತ್ತಿದೆ ಅಲ್ಲವೆ! ಆಗಲೂ ಸಹ ಕರ್ಮ ನಡೆಯುತ್ತಿದೆ ಎಂದು ತಿಳಿದುಕೊಳ್ಳಿ. ಸುಮ್ಮನಿರುವುದು ಸಹ ಒಂದುವಿಧವಾದ ಕರ್ಮವೆಂದು ತಿಳಿದುಕೊಳ್ಳಿ. ಈ ವಿಧವಾಗಿ ಮೊದಲು ಕಾಲವೆಲ್ಲಾ ಕರ್ಮಮಯವೆಂದು ತಿಳಿದುಕೊಳ್ಳುವುದು ಮುಖ್ಯ.

ಪ್ರತಿ ಕಾರ್ಯದಲ್ಲಿಯೂ ಕರ್ಮವೇ ಕಾರಣವೆಂದು ಈಗ ಚೆನ್ನಾಗಿ ಅರ್ಥವಾಗಿದೆ. ಪ್ರತಿ ಕಾರ್ಯ ನಡೆಯುವುದಕ್ಕೆ ಶರೀರದಲ್ಲಿ ಎಷ್ಟೋ ಭಾಗಗಳು ಕೆಲಸ ಮಾಡಬೇಕು, ಶರೀರದಲ್ಲಿ ಕಾರ್ಯನಿಮಿತ್ತವಾಗಿ ಯಾವ ಭಾಗ ಕೆಲಸಮಾಡಿದರೂ ಅದು ಕರ್ಮ ಪ್ರಭಾವದಿಂದ ಎಂದೇ ತಿಳಿದುಕೊಳ್ಳಬೇಕು. ಚಲನಚಿತ್ರದಲ್ಲಿ ಪ್ರೊಜೆಕ್ಟರ್‌ನಲ್ಲಿನ ಫಿಲ್ಮ್‌ಯೇ ಗೊಂಬೆಗಳಿಗೆ ಕಾರಣ. ಆ ಗೊಂಬೆಗಳು ಬೀಳುವುದಕ್ಕೆ ಪ್ರೊಜೆಕ್ಟರ್‌ನಲ್ಲಿನ ಪ್ರತಿಭಾಗವು ಕೆಲಸಮಾಡುತ್ತಿದೆ. ಸೂಕ್ಷ್ಮವಾಗಿ ಪ್ರೊಜೆಕ್ಟರ್‌ನಲ್ಲಿನ ಫಿಲ್ಮು ಪ್ರೊಜೆಕ್ಟರನ ಚಲನೆಯಿಂದ ಪರದೆಯ ಮೇಲೆ ಗೊಂಬೆಗಳರೂಪದಲ್ಲಿ ಬೀಳುವಂತೆ, ನಮ್ಮಲ್ಲಿ ಕಪಾಲದಲ್ಲಿ ಸೂಕ್ಷ್ಮವಾಗಿ ರುವ ಕರ್ಮ ಬಾಹ್ಯದಲ್ಲಿ ದೊಡ್ಡ ಕಾರ್ಯರೂಪವನ್ನು ಧರಿಸುತ್ತಿದೆ. ಚಿಕ್ಕ ಫಿಲ್ಮು ಪ್ರತಿಬಿಂಬಿಸುವುದಕ್ಕೆ ಪ್ರೊಜೆಕ್ಟರ್ ಹೇಗೆ ಕೆಲಸಮಾಡುತ್ತಿದೆಯೋ, ಹಾಗೆ ಕರ್ಮ ಕಾರ್ಯರೂಪವಾಗಿ ಪ್ರತಿಬಿಂಬಿಸುವುದಕ್ಕೆ ನಮ್ಮ ಶರೀರದಲ್ಲಿನ ಭಾಗಗಳು ಕೆಲಸ ಮಾಡುತ್ತಿವೆ. ಕರ್ಮ ನಮ್ಮ ಶರೀರದಲ್ಲಿ ಯಾವ ಭಾಗಗಳನ್ನು ಕದಲಿಸಿ ಕಾರ್ಯರೂಪವಾಗಿ ಏರ್ಪಡುತ್ತಿದೆಯೋ ತಿಳಿಸುತ್ತಿದ್ದೇನೆ ಕೇಳು.

ನಮ್ಮ ಶರೀರದಲ್ಲಿ ಕರ್ಮ ಆಚರಣೆಯಲ್ಲಿ ಮುಖ್ಯಪಾತ್ರ ವಹಿಸುವುದು ಮನಸ್ಸು. ಬಾಹ್ಯೇಂದ್ರಿಯಗಳಾದ ಕಣ್ಣು ಕಿವಿ ಮೊದಲಾದ ಇಂದ್ರಿಯಗಳು ತಿಳಿಸುವ ವಿಷಯಗಳನ್ನು ಮನಸ್ಸು ಗ್ರಹಿಸಿ ಅಂತರೇಂದ್ರಿಯಗಳಾದ ಬುದ್ಧಿ ಚಿತ್ತಕ್ಕೆ ಕಳುಹಿಸಬೇಕು. ಮನಸ್ಸು ಅಂತರೇಂದ್ರಿಯಗಳಿಗೆ ಬಾಹ್ಯೇಂದ್ರಿಯಗಳಿಗೆ ಮಧ್ಯವರ್ತಿಯಂತಹದ್ದು. ಮಧ್ಯವರ್ತಿ ಇಲ್ಲದಿದ್ದರೆ ಎರಡು ವರ್ಗಗಳ ಮಧ್ಯ ವಿಷಯಗಳು ಹೇಗೆ ನಿಂತುಹೋಗುತ್ತವೋ ಹಾಗೆ ಮನಸ್ಸು ಇಲ್ಲದಿದ್ದರೆ

ಬಾಹ್ಯೇಂದ್ರಿಯಗಳ ವಿಷಯಗಳು ಅಂತರೇಂದ್ರಿಗಳಿಗೆ, ಅಂತರೇಂದ್ರಿಯ ವಿಷಯಗಳು ಬಾಹ್ಯೇಂದ್ರಿಯಗಳಿಗೆ ಸೇರುವುದಿಲ್ಲ. ನಿದ್ರೆಯಲ್ಲಿ ಮನಸ್ಸು ಸೂರ್ಯ ಚಂದ್ರನಾಡಿಗಳ ಮೇಲೆ ಇಲ್ಲದಂತೆ ಬ್ರಹ್ಮನಾಡಿಯಲ್ಲಿ ಸೇರಿಹೋಗಿದೆ. ಆದ್ದರಿಂದ ಬಾಹ್ಯೇಂದ್ರಿಯ ವಿಷಯಗಳು ಅಂತರೇಂದ್ರಿಯಗಳಿಗೆ ಹೋಗಲಿಲ್ಲ ಮತ್ತು ಅಂತರೇಂದ್ರಿಯ ವಿಷಯಗಳು ಬಾಹ್ಯೇಂದ್ರಿಯಗಳಿಗೆ ಬರಲಿಲ್ಲ. ಆದ್ದರಿಂದ ನಿದ್ರೆಸಮಯದಲ್ಲಿ ಯಾವ ಕಾರ್ಯಗಳು ನಡೆಯದಂತೆ ಸ್ಥಂಭಿಸಿಹೋಗುತ್ತಿವೆ. ನಿದ್ರೆ ಸಮಯದಲ್ಲಿ ಸಹ ಬಾಹ್ಯೇಂದ್ರಿಯಗಳಾದ ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆ ಕೆಲಸಮಾಡುತ್ತಿರುತ್ತವೆ. ಕಿವಿಗೆ ಎಲ್ಲಾ ಶಬ್ಧಗಳು ಕೇಳಿಸುತ್ತಲೇ ಇರುತ್ತವೆ. ಆದರೆ ಆ ಶಬ್ಧವನ್ನು ಗ್ರಹಿಸಿ ಅಂತಃಕರಣಗಳಿಗೆ ತಿಳಿಸುವ ಮನಸ್ಸು ಇಲ್ಲವಾದ್ದರಿಂದ ಯಾವ ಶಬ್ಧ ಕೇಳಿಸುತ್ತಿರುವುದು ಒಳಗಿರುವ ಬುದ್ಧಿಗೂ ಚಿತ್ತಕ್ಕೂ ಜೀವಿಗೂ ತಿಳಿಯುವುದಿಲ್ಲ. ಹಾಗೆ ನಿದ್ರಾ ಸಮಯದಲ್ಲಿ ಮೂಗಿಗೆ ವಾಸನೆ ಬರುತ್ತಿದ್ದರೂ ಆ ವಾಸನೆಯನ್ನು ಗ್ರಹಿಸುವುದಾದ ಮನಸ್ಸು ಇಲ್ಲದಿರುವುದರಿಂದ ಜೀವಿಗೆ ಆ ವಾಸನೆ ವಿಷಯ ತಿಳಿಯುವುದಿಲ್ಲ. ಹೀಗೆ ಅಹರ್ನಿಶೆಗಳು ಜ್ಞಾನೇಂದ್ರಿಯಗಳು ಅವವುಗಳ ಕೆಲಸವನ್ನು ಮಾಡುತ್ತಿದ್ದರೂ, ಅವುಗಳ ವಿಷಯ ಗ್ರಹಿಸುವ ಮನಸ್ಸು ಇಲ್ಲದಿರುವುದರಿಂದ ವಿಷಯವು ಜೀವಿಗಾಗಲಿ, ಬುದ್ಧಿಗಾಗಲಿ ತಿಳಿಯಲಿಲ್ಲ. ಇಂದ್ರಿಯಗಳ ವಿಷಯಗಳು ನಿದ್ರೆಯಲ್ಲಿ ತಿಳಿಯದಿರುವುದರಿಂದ ನಿದ್ರೆಯಲ್ಲಿ ಇಂದ್ರಿಯಗಳು ಸ್ಥಂಭಿಸಿ ಹೋಗಿವೆ ಎನ್ನಬಾರದು. ಶರೀರದಲ್ಲಿ ಚೈತನ್ಯ ಇರುವವರೆಗೂ ಜ್ಞಾನೇಂದ್ರಿಯಗಳು ಅವವುಗಳ ಕೆಲಸ ಅವು ಮಾಡುತ್ತಲೇ ಇರುತ್ತವೆ. ಮನಸ್ಸು ಸ್ವಲ್ಪಕಾಲ ತನ್ನ ಸ್ವಸ್ಥಾನವಾದ ಬ್ರಹ್ಮನಾಡಿಯಲ್ಲಿಯೂ, ಸ್ವಲ್ಪಕಾಲ ಪರಸ್ಥಳವಾದ ಸೂರ್ಯಚಂದ್ರನಾಡಿಗಳ ಮೇಲೆ ಇರುತ್ತದೆ. ಸೂರ್ಯಚಂದ್ರನಾಡಿಗಳ ಮೇಲಿರುವಾಗಲೇ ಬಾಹ್ಯಕರಣಗಳಿಗೂ ಅಂತಃಕರಣಗಳಿಗೂ ಮಧ್ಯವರ್ತಿಯಾಗಿದ್ದು ಇಲ್ಲಿನ ವಿಷಯಗಳನ್ನು ಅಲ್ಲಿಗೆ, ಅಲ್ಲಿನ ವಿಷಯಗಳನ್ನು ಇಲ್ಲಿಗೆ ತಿಳಿಸುತ್ತಿರುತ್ತದೆ.

ಒಂದು ಕಾರ್ಯ ನಡೆಯಬೇಕೆಂದರೆ ಹೊರಗಿನ ವಿಷಯಗಳು ಒಳಗೆ ಹೋಗಬೇಕು. ಒಳಗಿನ ವಿಷಯಗಳು ಹೊರಗೆ ಬರಬೇಕು. ಆಗಲೇ ಕರ್ಮಕಾರ್ಯರೂಪವಾಗುತ್ತದೆ. ಒಂದು ಮನಸ್ಸು ಇಲ್ಲದಿದ್ದರೆ ಹೊರಗಿನ ವಿಷಯಗಳು ಹೊರಗೆ, ಒಳಗಿನ ವಿಷಯಗಳು ಒಳಗೇ ನಿಂತುಹೋಗುತ್ತವೆ. ಆಗ ಯಾವ ಕಾರ್ಯ ನಡೆಯುವುದಿಲ್ಲ. ಶರೀರವು ಜಡವಾಗಿರುತ್ತದೆ. ಆದ್ದರಿಂದ ಕರ್ಮ ಕಾರ್ಯರೂಪ ಧರಿಸುವುದರಲ್ಲಿ ಮನಸ್ಸು ಬಹಳ ಮುಖ್ಯವಾದುದೆಂದು ನಾನು ಗಟ್ಟಿಯಾಗಿ ಹೇಳುತ್ತಿದ್ದೇನೆ. ಮನಸ್ಸು ಮೇಲಿನ ಮುಖ್ಯಪಾತ್ರ ವಹಿಸುವುದೇ ಅಲ್ಲದೆ ಇನ್ನು ಬಾಹ್ಯ ಅಂತರೇಂದ್ರಿಯಗಳು ಮಾಡಲಾರದ ಕೆಲಸವನ್ನು ಸಹಾ ಮಾಡುತ್ತಿದೆ. ಅದು ಏನೆಂದರೆ ವಿವರಿಸುತ್ತೇನೆ ಕೇಳು.

ಜ್ಞಾನೇಂದ್ರಿಯಗಳಿಗೆ ನಡೆಯುತ್ತಿರುವ ವರ್ತಮಾನ ಕಾಲದಲ್ಲಿನ ವಿಷಯದಿಂದಲೇ ಸಂಬಂಧವಿರುತ್ತದೆ. ಹೊರಗಿನ ಪ್ರಪಂಚದಲ್ಲಿ ಸಂಬಂಧಪಟ್ಟ ಜ್ಞಾನೇಂದ್ರಿಗಳೊಂದರ ಶಬ್ದ, ಸ್ಪರ್ಶ, ರೂಪ, ರಸ ಗಂಧ ಅನ್ನುವ ಪಂಚ ತನ್ಮಾತ್ರಗಳು ಮನಸ್ಸಿಗೆ ಸೇರುತ್ತದೆ. ಮನಸ್ಸು ಜ್ಞಾನೇಂದ್ರಿಗಳಿಂದ ಬಂದಿರುವ ತನ್ಮಾತ್ರಗಳ ವಿಷಯಗಳನ್ನು ಜೀವಿಯ ಹತ್ತಿರಕ್ಕೆ ಸೇರಿಸುತ್ತದೆ. ಜೀವಿಯು ವಿಷಯಗಳನ್ನು ಸಾಕ್ಷಿಯಾಗಿ ನೋಡುತ್ತಿರುವಾಗ ಬುದ್ಧಿ ಆ ವಿಷಯವನ್ನು ಎರಡು ವಿಧಗಳಲ್ಲಿ ವಿವರಿಸಿದಾಗ, ಅದರಲ್ಲಿ ಚಿತ್ತವು ನಿರ್ಣಯಿಸಿದ ವಿಷಯಗಳನ್ನು ಮನಸ್ಸಿಗೆ ಸೇರಿದಾಗ, ಮನಸ್ಸು ಕರ್ಮೇಂದ್ರಿಯಗಳಿಗೆ ತಿಳಿಸಿದಾಗ, ಕರ್ಮೇಂದ್ರಿಯಗಳು ಆ ಕೆಲಸವನ್ನು ಮಾಡುತ್ತಿವೆ. ಇಂದ್ರಿಯಗಳು ಆ ಕೆಲಸ ಮುಗಿದುಹೋದ ತಕ್ಷಣವೆ ಪುನಃ ಮತ್ತೊಂದು ಕಾರ್ಯದಲ್ಲಿ ಲಗ್ನವಾಗುತ್ತಿವೆ. ಅಲ್ಲಿಗೆ ಮೊದಲ ಕಾರ್ಯವನ್ನು ಅನುಭವಗಳನ್ನು ಮರೆತುಹೋಗುತ್ತಿವೆ. ಆದರೆ ಮನಸ್ಸು ಪ್ರತಿಕಾರ್ಯವನ್ನು ಜ್ಞಾಪಕ ಇಟ್ಟುಕೊಳ್ಳುತ್ತಿದೆ. ಬಾಹ್ಯೇಂದ್ರಿಯಗಳಿಗೂ ಅಂತರೇಂದ್ರಿಯಗಳಿಗೂ ಇಲ್ಲದ ಜ್ಞಾಪಕ ಒಂದು ಮನಸ್ಸಿಗೆ ಮಾತ್ರವೇ ಇದೆ. ಜ್ಞಾಪಕಶಕ್ತಿ ಎಂದು ಏನನ್ನು ನಾವು ಅನ್ನುತ್ತಿದ್ದೇವೊ ಅದೇ ಮನೋಶಕ್ತಿ. ಅದನ್ನೇ ಜ್ಞಾಪಕ (ಎರುಕ) ಎಂದು ಸಹ ಅನ್ನುತ್ತಿದ್ದೇವೆ. ನಾವು ನಿತ್ಯ ಯಾವ

ವಿಷಯಗಳಲ್ಲಿ ಸಂಬಂಧ ಹೊಂದಿದ್ದೇವೊ, ಆ ವಿಷಯಗಳನ್ನೆ ಮನಸ್ಸು ಜ್ಞಾಪಕ ಇಟ್ಟುಕೊಳ್ಳುತ್ತಿರುತ್ತದೆ. ಆದ್ದರಿಂದಲೇ ಗೀತೆಯಲ್ಲಿ ಭಗವಂತನು **'ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯಚ ಮಯ್ಯರ್ಪಿತ ಮನೋ ಬುದ್ಧಿರ್ಮಾ ಮೇ ವೈಶ್ಯಸ್ಯ ಸಂಶಯಃ'** ನಿನ್ನ ಮನಸ್ಸಿನಲ್ಲಿ ನನ್ನನ್ನು ಸ್ಮರಿಸಿಕೊಳ್ಳುವುದರಿಂದ, ಬುದ್ಧಿ ನನ್ನನ್ನೇ ಆಲೋಚಿಸುವುದರಿಂದ ಆ ವಿಷಯಗಳೇ ಜ್ಞಾಪಕದಲ್ಲಿ ಇರುತ್ತವೆ. ಎಲ್ಲಕಾಲದಲ್ಲಿ ನನ್ನನ್ನೇ ಜ್ಞಾಪಕ ಇಟ್ಟುಕೊಳ್ಳುವುದರಿಂದ ಕೊನೆಗೆ ನನ್ನಲ್ಲಿಯೇ ಐಕ್ಯವಾಗುತ್ತಿಯಾ ಅಂದಿದ್ದಾನೆ.

ಮನಸ್ಸಿಗೆ ಜ್ಞಾಪಕಶಕ್ತಿ ಇದೆ, ಆದ್ದರಿಂದ ಪರಮಾತ್ಮನು ಸಹ ಮನಸ್ಸನ್ನು ಬುದ್ಧಿಯನ್ನು ನನಗೆ ಅರ್ಪಣೆ ಮಾಡಿ ಅಂದರೆ ನನ್ನ ಕೆಲಸದಲ್ಲಿಯೇ ವಿನಿಯೋಗಿ ಸೆಂದಿದ್ದಾನೆ. ಬುದ್ಧಿಯನ್ನು ಆತನಲ್ಲಿ ವಿನಿಯೋಗಿಸಿದಾಗ ಬುದ್ಧಿ ವಿಷಯವೆಲ್ಲವೂ ಮನಸ್ಸು ರಿಕಾರ್ಡ್ ಮಾಡಿಕೊಳ್ಳುತ್ತಿರುತ್ತದೆ. ಸರ್ವಕಾಲದಲ್ಲಿ ಬುದ್ಧಿಯನ್ನು ಮನಸ್ಸನ್ನು ಪರಮಾತ್ಮಚಿಂತನೆಯಲ್ಲಿಯೇ ಇಟ್ಟರು ಅದೇ ಜ್ಞಾಪಕ ಹೆಚ್ಚಾಗಿದ್ದು ಕೊನೆಗೆ ಜ್ಞಾಪಕಬರುತ್ತದೆ. ಈ ವಿಧವಾಗಿ ಪರಮಾತ್ಮ ವಿಷಯವೇ ಅಲ್ಲದೆ ಯಾವ ವಿಷಯವಾದರು ಇಷ್ಟೇ ಎಂದು ತಿಳಿದುಕೊಳ್ಳಿ. ಜೀವನಕಾಲದಲ್ಲಿ ಯಾವ ಕಾರ್ಯಗಳಲ್ಲಿ ಹೆಚ್ಚು ಸಂಬಂಧವಾಗಿರುತ್ತೇವೋ ಆ ವಿಷಯವೇ ಮನಸ್ಸಿಗೆ ಹೆಚ್ಚಾಗಿ ಜ್ಞಾಪಕ ಇರುತ್ತದೆ. ಇದನ್ನು ಅನುಸರಿಸಿ ನೋಡಿದರೆ ಮನಸ್ಸು ಜೀವರಾಶಿಗಳ ಶರೀರಗಳಲ್ಲಿ ಬಹಳ ಮುಖ್ಯವಾದ ಭಾಗವಾಗಿ ಇದೆಯೆಂದು ಗುರುತಿಸಬಹುದು.

ನಡೆದ ವಿಷಯಗಳನ್ನು ಮನಸ್ಸು ಜ್ಞಾಪಕ ತಂದುಕೊಳ್ಳುತ್ತದೆಂಬುವುದು ಚೆನ್ನಾಗಿ ತಿಳಿದುಹೋಗಿದೆ ಅಲ್ಲವೆ! ಒಂದೊಂದುಬಾರಿ ಬಾಹ್ಯೇಂದ್ರಿಯಗಳು ಕೆಲಸ ಮಾಡುತ್ತಿರುವಾಗ ಸಹ ಮನಸ್ಸು ಆ ವಿಷಯಗಳನ್ನು ಗ್ರಹಿಸುವುದು ಬಿಟ್ಟು ಹಾಕಿ ಹಿಂದಿನ ವಿಷಯಗಳನ್ನು ಜ್ಞಾಪಕ ತಂದುಕೊಳ್ಳುವುದರಲ್ಲಿ ನಿಮಗ್ನವಾಗಿಹೋಗುತ್ತದೆ. ಅಂತಹ ಸಮಯದಲ್ಲಿ ಬಾಹ್ಯೇಂದ್ರಿಯಗಳ ಸಂಬಂಧ ಅಂತರೇಂದ್ರಿಯಗಳಜೊತೆ ಇಲ್ಲದಂತಾಗುತ್ತದೆ. ಹೊರಗಿನ ವಿಷಯ ಒಳಗಿನ

ಬುದ್ಧಿಗೆ ತಿಳಿಯದೆಹೋಗುತ್ತದೆ. ಉದಾಹರಣೆಗೆ ಒಂದು ಪುಸ್ತಕ ಓದುವ ಸಮಯದಲ್ಲಿ ಕಣ್ಣು ನೋಡುತ್ತಿರುವಾಗ ರೂಪವೆಂಬ ತನ್ಮಾತ್ರ ಆ ವಿಷಯವನ್ನು ಮನಸ್ಸಿಗೆ ಸೇರಿಸುತ್ತಿರುತ್ತದೆ. ಮನಸ್ಸು ಅದನ್ನು ಬುದ್ಧಿಗೆ ಜೀವಿಗೆ ತಿಳಿಸುತ್ತಿರುತ್ತದೆ. ಆ ಸಮಯದಲ್ಲಿ ಮಧ್ಯವರ್ತಿ ಮನಸ್ಸು ಬೇರೊಂದು ವಿಷಯ ಆಲೋಚನೆಯಲ್ಲಿ ಇದ್ದುಹೋಗಿದೆಯೆಂದುಕೊಳ್ಳಿ. ಆಗ ಬಾಹ್ಯೇಂದ್ರಿಯಗಳಾದ ಕಣ್ಣು ಓದುತ್ತಲೇ ಇರುತ್ತದೆ ಆ ವಿಷಯ ಮನಸ್ಸಿನವರೆಗೂ ಸೇರುತ್ತಲೇ ಇರುತ್ತದೆ. ಆದರೆ ಮನಸ್ಸು ಆ ವಿಷಯವನ್ನು ಗ್ರಹಿಸಿ ಬುದ್ಧಿಗೆ ತಿಳಿಸದೆ ಬೇರೆ ವಿಷಯದಲ್ಲಿರುವು ದರಿಂದ ಓದಿದ ವಿಷಯವೇನೋ ಜೀವಿಗೆ ಬುದ್ಧಿಗೆ ತಿಳಿಯದೆಹೋಗುತ್ತದೆ. ಕಣ್ಣು ನೋಡುತ್ತಿದ್ದರೂ, ಬಾಯಿ ಓದುತ್ತಿದ್ದರೂ, ಆ ವಿಷಯವು ಬುದ್ಧಿಗೆ ಸೇರಲಿಲ್ಲವೆಂದರೆ ಮಧ್ಯದಲ್ಲಿ ಮನಸ್ಸು ಬೇರೆ ಧ್ಯಾಸದಲ್ಲಿರುತ್ತದೆಂದು ತಿಳಿದುಕೊಳ್ಳಬೇಕು. ಹಾಗಿರುವಾಗ ಓದಿದ ವಿಷಯವು ಮನಸ್ಸಿಗೆ ತಿಳಿಯುವುದಿಲ್ಲ, ಆದ್ದರಿಂದ ಮನಸ್ಸು ಆ ವಿಷಯವನ್ನು ಮತ್ತೆ ಜ್ಞಾಪಕ ತಂದುಕೊಳ್ಳಲಿಲ್ಲ. ಈ ದಿನ ಕೆಲವು ಜನ ವಿದ್ಯಾರ್ಥಿಗಳು ಎಷ್ಟು ಸಮಯ ಓದಿದರೂ ಪರೀಕ್ಷೆ ಸಮಯದಲ್ಲಿ ಆ ವಿಷಯ ಜ್ಞಾಪಕ ಬಾರದಿರುವುದಕ್ಕೆ ಕಾರಣ ಮನಸ್ಸು ಓದುತ್ತಿರುವಾಗ ಆ ಓದಿನಮೇಲೆ ಇಡದೆ ಬೇರೆ ಧ್ಯಾಸದ ಮೇಲೆ ಇರುವುದೇ ಎಂದು ತಿಳಿದುಕೊಳ್ಳಿ. ನಾವು ಸಹ ಒಂದು ಕೆಲಸ ಮಾಡುವಾಗ ಆ ಕೆಲಸದ ಮೇಲೆ ಧ್ಯಾಸ ಇಲ್ಲದಿದ್ದರೆ ಆ ಕೆಲಸದಲ್ಲಿನ ಕಷ್ಟಸುಖ ಸಹ ತಿಳಿಯುವುದಿಲ್ಲ. ಮತ್ತು ಕಾಲವೂ ಸಹ ಎಷ್ಟು ಕಳೆದಿರುವುದು ತಿಳಿಯುವುದಿಲ್ಲ. ಈ ವಿಷಯ **"ಪ್ರಬೋಧ"** ಗ್ರಂಥದಲ್ಲಿ ಸಹ ವಿವರಿಸಿದ್ದೇವೆ.

ಜೀವಿಯು ಜಾಗ್ರತಾವಸ್ಥೆಯಲ್ಲಿ ಇದ್ದಾಗ ಬಾಹ್ಯೇಂದ್ರಿಯಗಳ ಅಂತರೇಂದ್ರಿಯಗಳ ಕೆಲಸ ಇಲ್ಲದೆಹೋದರೆ, ಹೊರಗೂ ಒಳಗೂ ಮಧ್ಯವರ್ತಿ ಯಾಗಿ ಮನಸ್ಸು ಕೆಲಸಮಾಡದಿರುವಾಗ, ಮನಸ್ಸಿಗೆ ವಿಶ್ರಾಂತಿ ಇರುತ್ತದಲ್ಲವೆ ಎಂದು ಕೆಲವರಂದುಕೊಳ್ಳಬಹುದು. ಹಾಗೆ ಎಂದಿಗೂ ಮನಸ್ಸಿಗೆ ವಿಶ್ರಾಂತಿ ಇರುವುದಿಲ್ಲ. ಬ್ರಹ್ಮನಾಡಿಯಲ್ಲಿ ನಿದ್ರಾವಸ್ಥೆಯಲ್ಲಿ ಇರುವಾಗಲೇ ಮನಸ್ಸಿಗೆ

ವಿಶ್ರಾಂತಿ, ಅಷ್ಟಕ್ಕೆ ವಿನಹ ಸೂರ್ಯಚಂದ್ರನಾಡಿಗಳ ಮೇಲೆ ಜಾಗ್ರತಾವಸ್ಥೆಯಲ್ಲಿ ಇರುವಾಗ ಮನಸ್ಸಿಗೆ ವಿಶ್ರಾಂತಿ ಸ್ವಲ್ಪವೂ ಇರುವುದಿಲ್ಲ. ಮಧ್ಯವರ್ತಿ ಕೆಲಸ ಇಲ್ಲದಿರುವಾಗ ಮನಸ್ಸು ವಿಶ್ರಾಂತಿ ತೆಗೆದುಕೊಳ್ಳದೆ ಏನು ಮಾಡುತ್ತಿರುತ್ತದೆ ಎಂದರೆ! ಎಷ್ಟೋ ಗತ ವಿಷಯಗಳನ್ನು ಜ್ಞಾಪಕತಂದು ಬುದ್ಧಿಗೂ ಜೀವಿಗೂ ತಿಳಿಸುತ್ತಿರುತ್ತದೆ. ಚಿತ್ತವು ಮನಸ್ಸು ತಿಳಿಸಿದ ವಿಷಯಗಳೆಲ್ಲವನ್ನು ಜೋಕ್ಯ ಮಾಡಿಕೊಳ್ಳುವುದಿಲ್ಲ. ಆದ್ದರಿಂದ ಮನಸ್ಸಿಗೆ ಬಂದಿರುವ ವಿಷಯಗಳೆಲ್ಲ ಕಾರ್ಯರೂಪ ವಾಗುವುದಿಲ್ಲ. ಮನಸ್ಸು ಜ್ಞಾಪಕಕ್ಕೆತರುತ್ತಾ ಹೋಗುತ್ತಿರುತ್ತದೆ. ಮನಸ್ಸಿನಿಂದ ತಿಳಿದ ವಿಷಯಗಳ ಕೆಲವನ್ನು ಬುದ್ಧಿ ಯೋಚಿಸುತ್ತಿರುತ್ತದೆ. ಹಾಗೆ ಬುದ್ಧಿ ಯೋಚಿಸುವುದು ಮುಗಿದುಹೋಗುತ್ತಲೇ ಹೊಸವಿಷಯ ಮನಸ್ಸು ತಂದಿಡುತ್ತಿ ರುತ್ತದೆ. ಒಂದೊಂದುಸಲ ಬುದ್ಧಿ ಪೂರ್ತಿಯೋಚಿಸುವವರೆಗೂ ಬೇರೆ ವಿಷಯಗಳನ್ನು ಮನಸ್ಸು ತಂದಿಡುವುದಿಲ್ಲ. ಬುದ್ಧಿ ಯೋಚಿಸಿದ ವಿಷಯಗಳೆಲ್ಲ ವನ್ನು ಚಿತ್ತವು ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದ ಮನಸ್ಸಿಗೆ ಬಂದಿರುವ ವಿಷಯಗಳೆಲ್ಲಾ ಕಾರ್ಯರೂಪವಾಗುವುದಿಲ್ಲ. ಕರ್ಮ ಇರುವ ವಿಷಯ ಮಾತ್ರವೇ ಕಾರ್ಯರೂಪವಾಗುತ್ತದೆ. ಕಾರ್ಯರೂಪವಾಗುವ ಯಾವ ಕಾರ್ಯವಾದರು ಮೊದಲು ಮನಸ್ಸೇ ಅದನ್ನು ಜ್ಞಾಪಕಕ್ಕೆ ತಂದಿರುತ್ತದೆ.

ಒಂದು ಕಾರ್ಯದಲ್ಲಿ ಗುಣಗಳ ಪ್ರಭಾವ ಎಷ್ಟರಮಟ್ಟಿಗಿದೆ ಈಗ ತಿಳಿದುಕೊಳ್ಳೋಣ. ಮನಸ್ಸು ತಿಳಿಸಿದ ವಿಷಯವನ್ನು ಗುಣಗಳ ಮಧ್ಯದಲ್ಲಿರುವ ಜೀವಿಗೆ, ಬುದ್ಧಿಗೆ ತಿಳಿಯುತ್ತದೆ. ತಿಳಿದ ವಿಷಯವನ್ನು ಬುದ್ಧಿ ವಿಮರ್ಶಿಸಿ ಯೋಚಿಸುತ್ತದಲ್ಲವೆ! ಆ ಯೋಚನೆ ಅಲ್ಲಿರುವ ಗುಣಗಳನ್ನನುಸರಿಸಿ ಇರುತ್ತದೆ. ಸಾತ್ತ್ವಿಕಭಾಗದಲ್ಲಿ ಜೀವಿ ಇದ್ದರು ಅದರಲ್ಲಿನ ಗುಣಗಳನ್ನನುಸರಿಸಿ ಬುದ್ಧಿ ವಿಮರ್ಶಿಸುತ್ತಿರುತ್ತದೆ. ರಾಜಸದಲ್ಲಿದ್ದರು ಅಲ್ಲಿರುವ ಗುಣಗಳ ಪ್ರಕಾರ ಬುದ್ಧಿ ವಿಮರ್ಶಿಸುತ್ತಿರುತ್ತದೆ. ಒಂದುವೇಳೆ ತಾಮಸದಲ್ಲಿದ್ದರು ಅಲ್ಲಿರುವ ಗುಣಗಳ ಪ್ರಕಾರವೇ ಬುದ್ಧಿ ವಿಮರ್ಶಿಸುತ್ತದೆ. ಬುದ್ಧಿ ವಿಮರ್ಶಿಸಿರುವುದನ್ನು ಕರ್ಮ ಪ್ರಕಾರ ಚಿತ್ತವು ನಿರ್ಣಯಿಸುತ್ತದೆ, ಆದರೆ ಗುಣಗಳಿಗೂ ಚಿತ್ತಕ್ಕೂ ಸಂಬಂಧವಿಲ್ಲ.

ಚಿತ್ತವು ಒಂದು ಬುದ್ಧಿಯಿಂದ ಮಾತ್ರ ಸಂಬಂಧ ಇಟ್ಟುಕೊಳ್ಳುತ್ತದೆ. ಗುಣಗಳ ಪ್ರಭಾವವೆಲ್ಲವೂ ಬುದ್ಧಿಮೇಲೆಯೇ ಇರುತ್ತದೆ. ಜೀವಿಯು ಗುಣಗಳ ಮಧ್ಯದಲ್ಲಿ ಇದ್ದರೂ ನಿಜವಾಗಲು ಗುಣಗಳ ಸಂಬಂಧ ಜೀವಿಗೆ ಇಲ್ಲ. ಆ ವಿಧವಾಗಿಯೇ ಅಹಂಕಾರಕ್ಕೂ ಸಹ ಗುಣಗಳಿಂದ ಸಂಬಂಧವಿಲ್ಲ. ಗುಣಗಳ ಮಧ್ಯದಲ್ಲಿರುವ ಜೀವಿಯು, ಬುದ್ಧಿ, ಚಿತ್ತ, ಅಹಮ್ ಅನ್ನುವ ಅಂತಃಕರಣಗಳಲ್ಲಿ ಒಂದು ಬುದ್ಧಿ ಮಾತ್ರ ಗುಣಗಳ ಸಂಬಂಧಹೊಂದಿ ಆ ಗುಣಗಳನ್ನನುಸರಿಸಿ ವಿಮರ್ಶಿಸುತ್ತಿರುತ್ತದೆ. ಆ ವಿಮರ್ಶೆಯನ್ನನುಸರಿಸಿ ಉಳಿದ ಚಿತ್ತ, ಅಹಮ್ ಕೆಲಸ ಮಾಡುತ್ತವೆ. ಜೀವಿಯು ಮಾತ್ರ ಎಲ್ಲಿಯೂ ಶರೀರ ಕಾರ್ಯಕ್ರಮಗಳಲ್ಲಿ ತನಗೆ ಯಾವ ಸಂಬಂಧ ಇಲ್ಲದಂತಿದ್ದಾನೆ.

ಶರೀರ ಕಾರ್ಯದಲ್ಲಿ ಜೀವಿಗೆ ಯಾವ ಸಂಬಂಧ ಇಲ್ಲವೆಂದು ಯಾರಾದರೆ ತಿಳಿದುಕೊಂಡಿದ್ದಾರೋ ಅವರಿಗೆ ಯಾವ ಕರ್ಮ ಅಂಟುವುದಿಲ್ಲ. ಆ ವಿಷಯ ತಿಳಿಯದೆ ಜೀವಿಗೆ ಸಂಬಂಧ ಇದೆಯೆಂದು, ಜೀವಿಯೇ ಎಲ್ಲವನ್ನು ಮಾಡುತ್ತಿದ್ದಾನೆಂದು, ಕರ್ಮೇಂದ್ರಿಯಗಳ ಕೆಲಸಗಳನ್ನು ಸಹ ಜೀವಿಯೇ ಮಾಡಿದ್ದಾನೆಂದುಕೊಳ್ಳುವವರಿಗೆ ಪ್ರತಿ ಚಿಕ್ಕ ಕಾರ್ಯಗಳಲ್ಲಿಯೂ ಕರ್ಮ ಅಂಟಿಕೊಳ್ಳುತ್ತಿರುತ್ತದೆ. ಇಲ್ಲೊಂದು ಚಿಕ್ಕ ಸಂಶಯ ಕೆಲವರಿಗೆ ಉದ್ಭವಿಸಬಹುದು. ಅದು ಏನೆಂದರೆ ಜೀವಿಗೆ ಶರೀರಕಾರ್ಯದಲ್ಲಿ ಯಾವ ಸಂಬಂಧ ಇಲ್ಲದ ಪಕ್ಷದಲ್ಲಿ, ಪ್ರತಿಕಾರ್ಯ ಜೀವಿಯ ಪ್ರಮೇಯ ಇಲ್ಲದೆಯೇ ನಡೆಯುತ್ತಿರುವ ಪಕ್ಷದಲ್ಲಿ ಜೀವಿಯು ಶರೀರದಲ್ಲಿ ಇಲ್ಲದಿದ್ದರೂ ಸರಿಹೋಗುತ್ತದಲ್ಲವೆ! ಅಂತಹದರಲ್ಲಿ ಜೀವಿಯು ಶರೀರದಲ್ಲಿ ಏಕಿದ್ದಾನೆಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಕರ್ಮವನ್ನನುಸರಿಸಿ ಶರೀರದಲ್ಲಿ 24 ಭಾಗಗಳು ಕೆಲಸಮಾಡುತ್ತಿವೆ. ಆದರೆ ಜೀವಿಯು ಯಾವ ಕೆಲಸ ಮಾಡದಿದ್ದಾನೆ. ಯಾವ ಕಾರ್ಯದಲ್ಲಿಯೂ ಜೀವಿಯ ಪಾತ್ರ ಏನು ಇಲ್ಲ. ಆದರೂ ಎಲ್ಲಾ ಕಾರ್ಯಗಳು ನಡೆಯಬೇಕಾಗಿರುವುದು ಮತ್ತು ಎಲ್ಲಾ ಅವಯವಗಳು ಕೆಲಸ ಮಾಡುತ್ತಿರುವುದು ಒಬ್ಬ ಜೀವಿಗೋಸ್ಕರವೇ. ಜೀವಿಯು ಇಲ್ಲದಿದ್ದರೆ ಯಾವ ಕಾರ್ಯ ಅಗತ್ಯವಿಲ್ಲ.

ಪ್ರತಿ ಕಾರ್ಯದಲ್ಲಿರುವ ಅನುಭೂತಿಯನ್ನು ಜೀವಿಯು ಅನುಭವಿಸುತ್ತಿದ್ದಾನೆ. ಪ್ರತಿಚಿಕ್ಕ ಕಾರ್ಯದಿಂದ ಮೊದಲುಗೊಂಡು ದೊಡ್ಡಕಾರ್ಯದವರೆಗೂ 24 ಭಾಗಗಳು ಕೆಲಸಮಾಡುವಾಗ ಜೀವಿಯೊಬ್ಬನು ಕೆಲಸ ಮಾಡದೆ ಎಲ್ಲಾ ಭಾಗಗಳು ಮಾಡಿದ ಕೆಲಸದಲ್ಲಿನ ಕಷ್ಟಸುಖಗಳನ್ನು ಅನುಭವಿಸುತ್ತಿದ್ದಾನೆ. ಜೀವಿಯು ಸುಖದುಃಖಗಳನ್ನು ಅನುಭವಿಸುವುದಕ್ಕೆ ಎಲ್ಲಾ ಅವಯವಗಳು ಕೆಲಸ ಮಾಡುತ್ತಿವೆಯೆಂದು, ಈ ಶರೀರಯಂತ್ರಾಂಗವೆಲ್ಲವೂ ಜೀವಿಯ ಅನುಭವಕ್ಕೆ ಎಂದು ತಿಳಿದುಕೊಳ್ಳಬೇಕು. ಜೀವಿಯೇ ಇಲ್ಲದಿದ್ದರೆ 24 ತತ್ತ್ವಗಳ ಯಂತ್ರಾಂಗವೇ ಇಲ್ಲ ಎಂದುಕೊ.

ಮನಸ್ಸು ಶರೀರಯಂತ್ರಾಂಗದಲ್ಲಿ ಮುಖ್ಯಪಾತ್ರ ವಹಿಸುತ್ತಿದೆ ಎಂದು ತಿಳಿಯಲಾಗಿದೆ. ಮೋಕ್ಷವನ್ನು ಪಡೆಯುವುದಕ್ಕೆ ಶರೀರದಲ್ಲಿ ಮನಸ್ಸನ್ನು ವಶಪಡಿಸಿಕೊಳ್ಳುವುದು ಮುಖ್ಯವೆಂದು ಹಿರಿಯರು ಸಹ ತಿಳಿಸಿದ್ದಾರೆ. ಶರೀರದಲ್ಲಿ ಯಾವ ಕಾರ್ಯ ನಡೆಯದಂತೆ ಇರಬೇಕೆಂದರೆ ಮಧ್ಯವರ್ತಿಯಾದ ಮನಸ್ಸನ್ನು ಇಲ್ಲದಂತೆ ಮಾಡಬೇಕೆಂದು ಅದನ್ನೇ ಯೋಗವೆಂದು ತಿಳಿಸಿದ್ದಾರೆ. ಸಂಕಲ್ಪಗಳು ಉದ್ಭವಿಸುವುದು ಮೊದಲು ಮನಸ್ಸಿನಿಂದಲೇ, ಆದ್ದರಿಂದ ಮನಸ್ಸನ್ನು ವಶಪಡಿಸಿ ಕೊಂಡ ವಿಷಯಗಳ ಜ್ಞಾಪಕವೇ ಇಲ್ಲದಂತೆ ಹೋಗುತ್ತದೆ. ಆದ್ದರಿಂದ ಶರೀರ ಅಂತರದಲ್ಲಿ ಎಲ್ಲಾ ಅವಯವಗಳ ಕಾರ್ಯಗಳು ನಿಂತುಹೋಗುತ್ತವೆ. ಆದ್ದರಿಂದಲೇ ಮನಸ್ಸನ್ನು ಜಯಿಸುವುದೇ ಯೋಗವೆಂದರು. ಈ ವಿಷಯವಾಗಿ ವೇಮನಯೋಗಿಯವರು ಈ ಕೆಳಗಿನ ವಿಧವಾಗಿ ಅನ್ನುತ್ತಿದ್ದಾನೆ.

**ನಾಯಿಯನ್ನು ತಿಂದವನು ಗುರುಲಿಂಗ ಜಂಗಮನು**
**ಹಂದಿಯನ್ನು ತಿಂದವನು ಪರಮಯೋಗಿ**
**ಆನೆಯನ್ನು ತಿಂದವನು ಎಷ್ಟು ಸುಜ್ಞಾನಿಯೋ**
**ವಿಶ್ವದಾಭಿರಾಮ ಕೇಳಯ್ಯ ವೇಮ.**

**ಇದರ ಭಾವವೇನೆಂದರೆ!** ನಾಯಿ ಸಂಚಾರ ಸ್ವಭಾವ ಇರುವುದು. ಒಂದುಕಡೆ ಸಹ ಸ್ಥಿರವಾಗಿರದೆ ಅನೇಕ ಕಡೆಗೆ ತಿರುಗುತ್ತಿರುತ್ತದೆ. ನಾಯಿಯಂತೆ

ನಮ್ಮಲ್ಲಿನ ಮನಸ್ಸು ಸಹ ಸಂಚಾರಸ್ವಭಾವ ಇರುವುದಾಗಿದೆ. ಒಂದು ವಿಷಯದಲ್ಲಿ ನಿಲ್ಲದೆ ಅನೇಕ ವಿಷಯಗಳನ್ನು ತಂದಿಡುತ್ತದೆ. ಆದ್ದರಿಂದ ಮನಸ್ಸನ್ನು ನಾಯಿಗೆ ಸಮಾನವಾಗಿ ಹೋಲಿಸಿ ಮನಸ್ಸನ್ನು ಇಲ್ಲದಂತೆ ಅಂದರೆ ಸಂಕಲ್ಪಗಳು ಬಾರದಂತೆ ಮಾಡಿದವನು ಗುರುವೆಂದು ತಿಳಿಸುವ ವಿಷಯವಾಗಿ ವೇಮನ ನಾಯಿಯನ್ನು ತಿಂದವನು ಗುರುವೆಂದು ಅಂದಿದ್ದಾನೆ. ವೇಮನ ಹೇಳಿದ ಮಾತುಗಳಲ್ಲಿನ ಅಂತರಾರ್ಥ ತಿಳಿಯದಿರುವ ಜ್ಞಾನಿಗಳನ್ನು, ಯೋಗಿಗಳನ್ನು, ಗುರುಗಳನ್ನು ಕೇವಲ ಮಾಂಸಾಹಾರಿಗಳಾಗಿ ಅದರಲ್ಲಿಯೂ ನೀಚಮಾಂಸ ಭಕ್ಷಕರನ್ನಾಗಿ ಹೋಲಿಸಿಕೊಳ್ಳಬೇಕಾಗಿ ಬಂದಿದೆ. ಆದ್ದರಿಂದ ನಮ್ಮಲ್ಲಿನ ಬುದ್ಧಿಯನ್ನು ಉಪ ಯೋಗಿಸಿ ವೇಮನ ಮಾತನ್ನು ವಿವರಿಸಿಕೊಳ್ಳೋಣ.

ನಮ್ಮಲ್ಲಿನ ಮನಸ್ಸನ್ನು ಅತಿನೀಚ ಸ್ಥಳದಲ್ಲಿ ಸಂಚರಿಸುವ ಹಂದಿಗೆ ಹೋಲಿಸಿ, ಅಂತಹ ಮನಸ್ಸನ್ನು ಇಲ್ಲದಂತೆ ಮಾಡಿಕೊಂಡವನು ಪರಮಯೋಗಿ ಅನ್ನುವಮಾತನ್ನು ಹಂದಿಯನ್ನು ತಿಂದವನು ಪರಮಯೋಗಿ ಎಂದು ಉತ್ತಮ ಜ್ಞಾನವನ್ನು ಚಿಕ್ಕ ಮಾತಿನಲ್ಲಿ ಹೇಳಿದ್ದಾನೆ.

ಸಂಚಾರ ಸ್ವಭಾವ ಇರುವುದು ಮತ್ತು ನೀಚ ವಿಷಯಗಳನ್ನು ಸಹಿತ ಜ್ಞಾಪಕಕ್ಕೆ ತರಿಸುವ ಮನಸ್ಸನ್ನು ಜಯಿಸಬೇಕು. ಪ್ರಯತ್ನ ಮಾಡುವವರಿಗೆ ಅದು ವಶವಾಗದಂತೆ ಹೋಗುತ್ತಿರುತ್ತದೆ. ಸಾಧಕನು ಎಷ್ಟು ಪ್ರಯತ್ನಿಸಿದರೂ ಮನಸ್ಸು ನಿರ್ಮಲವಾಗಿ ನಿಲ್ಲದೆ ಯಥಾಪ್ರಕಾರ ಸಂಕಲ್ಪಗಳನ್ನು ತರುತ್ತಿರುತ್ತದೆ. ಆದ್ದರಿಂದ ಮನಸ್ಸಿಗೆ ಹೆಚ್ಚು ಬಲ ಇರುವುದೆಂದು ಸಾಧನೆಗೆ ಸಾಮಾನ್ಯವಾಗಿ ಒಳಗಾಗುವುದಿಲ್ಲವೆಂದು ಜ್ಞಾನಿಗಳನ್ನುತ್ತಾರೆ. ಅಂತಹ ಮನಸ್ಸನ್ನು ವೇಮನಯೋಗಿ ಬಲವಿರುವ ಪ್ರಾಣಿಯಾದ ಆನೆಗೆ ಹೋಲಿಸಿ, ಅದನ್ನು ಯಾರು ಅಡಗಿ ಸಿಹಾಕಿದ್ದಾನೋ ಅವನೇ ಸುಜ್ಞಾನಿ ಎಂದು ಹೇಳುತ್ತಾ, ಆನೆಯನ್ನು ತಿಂದವನು ಎಷ್ಟು ಸುಜ್ಞಾನಿಯೋ ಅಂದಿದ್ದಾನೆ. ಈ ಮಾತುಗಳು ಹೇಳಿದ ವೇಮನಯೋಗಿ ಮನಸ್ಸು ಎಂತಹುದ್ದೋ ಪೂರ್ತಿ ತಿಳಿದವನಾಗಿ ಅದನ್ನು ಕುರಿತಾದ ವಿಷಯವೆಲ್ಲಾ ತಿಳಿಸಿದ್ದಾನೆ. ಈದಿನ ನಾವು ಮನಸ್ಸನ್ನು ಕುರಿತು ತಿಳಿದುಕೊಂಡ ವಿಷಯ

ಯಾವಾತ್ತೋ ವೇಮನಯೋಗಿ ತಿಳಿದುಕೊಂಡಿದ್ದಾನೆನ್ನುವುದಕ್ಕೆ ಗುರುತಾಗಿ ಕೆಳಗೆ ಪದ್ಯವಿದೆ ನೋಡಿರಿ.

**ಕಬ್ಬಿಣದಿಂದ ಮಾಡಿದ ಮೈನದ ಕಡ್ಡಿ**
**ಮನೆಯಮುಂದೆ  ನರಾಕಳುಗಳ ದೊಡ್ಡಿ**
**ಕುಳಿತುಕೊಂಡು ಮೇಯ್ದ ಕುಂದನದ ಹುಲ್ಲು**
**ಬಿಚ್ಚಿ ಹೇಳಯ್ಯ ವೇಮಾರೆಡ್ಡಿ.**

ನಮ್ಮಲ್ಲಿನ ಮನಸ್ಸು ತನಗೆ ಇಷ್ಟಬಂದಂತೆ ಪಕ್ಕಕ್ಕೆ ಹೋಗುತ್ತಿರುತ್ತದೆ. ಚಂಚಲವಾದ, ನೀಚವಾದ, ಬಲವಾದ ಮನಸ್ಸು ವಶವಾಗುವುದು ಬಹಳ ಕಷ್ಟ. ಎಷ್ಟೋ ಕಷ್ಟವಾದ ಮನಸ್ಸನ್ನು ನಿಲ್ಲಿಸುವುದು ಗಾಳಿಯನ್ನು ಮೂಟೆಕಟ್ಟಿದಂತೆ ಎಂದು ಅರ್ಜುನನು ಗೀತೆಯಲ್ಲಿ ಹೇಳಿದ್ದಾನೆ. ಒಂದೇ ಪದ್ಧತಿಯಲ್ಲಿ ನಿಲ್ಲದೆ ತನಗೆ ಇಷ್ಟಬಂದಂತೆ ಹೋಗುವ ಮನಸ್ಸನ್ನು ಸಾಧನೆ ಮೂಲಕ ಅಭ್ಯಾಸ ಮಾಡಿ ನಿಲ್ಲಿಸಿದ ನಂತರ ಯಾವ ವಿಷಯಗಳ ಮೇಲೆ ಹೋಗದೆ, ಮನಸ್ಸು ಒಂದೇ ವಿಷಯದ ಮೇಲೆ ನಿಂತುಹೋಗುತ್ತದೆ. ಹಾಗೆ ಪಕ್ಕಕ್ಕೆ ಹೋಗದಂತೆ ಒಂದೇ ಯೋಗಪದ್ಧತಿಯಲ್ಲಿ ಇರುವವರು ಯೋಗಿಗಳು. ಯೋಗಿಗಳಿಗೆ ವಶವಾಗ ದಿರುವ ಮನಸ್ಸು ವಶವಾದ ನಂತರ ಹೇಗಿರುತ್ತದೆಂಬ ವಿಷಯವನ್ನು ವೇಮನ ತಿಳಿದವನಾಗಿ ವಶವಾದ ಮನಸ್ಸು, ವಶವಾಗದ ಮನಸ್ಸನ್ನು ಉದ್ದೇಶಿಸಿ ಒಂದೇ ಮನಸ್ಸು ಒಂದುಬಾರಿ ಹೀಗೆ ಮತ್ತೊಂದುಬಾರಿ ಹೀಗಿದೆಯೆಂದು ಕಬ್ಬಿಣದಿಂದ ಮಾಡಿದ ಮೈನಪುಕಡ್ಡಿ ಅಂದಿದ್ದಾನೆ. ಕಬ್ಬಿಣದಿಂದ ಮಾಡಿರುವುದು ಎಂದರೆ ಯಾವಕಡೆಗು ಬಗ್ಗಿಹೋಗದೆ ನೇರವಾಗಿರುವುದೆಂದು, ಮೇಣದಕಡ್ಡಿ ಎಂದರೆ ಮೆತ್ತಗೆ ಪಕ್ಕಕ್ಕೆ ಬಗ್ಗಿಹೋಗುವುದು ಎಂದು ನಮಗೆ ತಿಳಿದ ವಿಷಯವೆ. ಮನಸ್ಸು ಸಹ ಯೋಗಿಗೆ ನಿಲುಕಡೆ ಇರುವುದರಿಂದ ಕಬ್ಬಿಣದಕಡ್ಡಿಯಾಗಿ, ಸಾಮಾನ್ಯ ಜೀವಿಗೆ ನಿಲುಕಡೆ ಇಲ್ಲದಿರುವುದರಿಂದ ಮೈನಪುಕಡ್ಡಿಯಾಗಿ ವೇಮನ ಹೇಳಿದ್ದಾನೆ.

ನಮ್ಮ ಶರೀರದಲ್ಲಿ ಬಾಹ್ಯೇಂದ್ರಿಯಗಳ ವಿಷಯಗಳೆಲ್ಲವೂ ಮನಸ್ಸಿಗೆ ಸೇರುತ್ತಿವೆ. ಅಂತರೇಂದ್ರಿಯಗಳ ವಿಷಯಗಳು ಸಹ ಮನಸ್ಸಿಗೆ ಸೇರುತ್ತಿವೆ.

ಎಲ್ಲಾ ಇಂದ್ರಿಯಗಳ ವಿಷಯಗಳನ್ನು ತೆಗೆದುಕೊಂಡುಬರುವ ನರಗಳೆಲ್ಲವುಗಳ ಮೇಲೆ ಮನಸ್ಸು ವ್ಯಾಪಿಸಿದೆ. ಆದ್ದರಿಂದ ವಿಷಯಗಳನ್ನು ಹಸುಗಳಾಗಿ ಹೋಲಿಸಿ, ಮನಸ್ಸನ್ನು ನರಗಳ ಕೊಟ್ಟಿಗೆಗೆ ಹೋಲಿಸಿ, ಶರೀರ ಅಂತರವನ್ನೇ ಗೃಹವಾಗಿ ಹೋಲಿಸಿ ಮನೆಯಲ್ಲಿನ ನರಾಕಳುಗಳ ಕೊಟ್ಟಿಗೆ ಎಂದು ಮನಸ್ಸನ್ನು ಅಂದಿದ್ದಾನೆ.

ನಮ್ಮಲ್ಲಿನ ಮನಸ್ಸನ್ನು ಬಿಟ್ಟುಹಾಕಿದರೆ ತನಗಿಷ್ಟಬಂದಂತೆ ಹೋಗುತ್ತಿರುತ್ತದೆ. ಯಾವ ವಿಧವಾಗಿ ಎಂದರೆ ಒಂದು ವಿಷಯವನ್ನು ಮೊದಲು ಜ್ಞಾಪಕಕ್ಕೆ ತರುತ್ತದೆ. ಅದರ ಹಿಂದೆಯೇ ಅದಕ್ಕೆ ಸಂಬಂಧಿಸಿದ ವಿಷಯವನ್ನು ತರುತ್ತದೆ. ಉದಾಹರಣೆಗೆ ಮೊದಲು ಕಳ್ಳತನವೊಂದರ ವಿಷಯ ಜ್ಞಾಪಕ ಬಂದಿದೆಯೆಂದುಕೊಳ್ಳಿ. ಅದರ ನಂತರ ಯಾವಾಗಲೋ ನಡೆದ ರೈಲಿನಲ್ಲಿನ ಕಳ್ಳತನ ಗುರುತಿಗೆ ಬರುತ್ತದೆ. ಅದರಹಿಂದೆಯೇ ಬಸ್ಸಿನಲ್ಲಿ ನಡೆದ ಕಳ್ಳತನ ಜ್ಞಾಪಕ ಬರುತ್ತದೆ. ಬಸ್ಸಿನಲ್ಲಿ ನಡೆದ ಕಳ್ಳತನದಲ್ಲಿ ಒಬ್ಬನು ತನ್ನ ಕೈವಾಚ್ ಕಳ್ಳರಿಗೆ ಸಿಗದಂತೆ ಬಚ್ಚಿಟ್ಟುಕೊಂಡ ವಿಷಯ, ಕಳ್ಳರು ಎಲ್ಲರ ಒಡವೆಗಳು ಕಸಿದುಕೊಳ್ಳುತ್ತಾ ಬಂದು ಅವನ ಕೈಮೇಲೆ ಗಡಿಯಾರದ ಗುರುತು ನೋಡಿ ನಿನ್ನ ಗಡಿಯಾರ ಎಲ್ಲಿ ಅಂದಂತೆ, ಅವನು ಕೊಟ್ಟಂತೆ ನಂತರ ಆ ಗಡಿಯಾರದ ಪಟ್ಟಿಯಿಂದ ಕೈಮೇಲೆ ಗುರುತು ಇದೆಯಲ್ಲವೆ! ಪಟ್ಟಿಚೈನು ಒಳ್ಳೆಯದೆಂದು, ಆ ಚೈನುಗಳು ಮದ್ರಾಸಿನಲ್ಲಿ ಚೆನ್ನಾಗಿರುತ್ತವೆಂದು, ಮದ್ರಾಸಿನಲ್ಲಿ ವಿದೇಶಿ ರೇಡಿಯೋಗಳು ಸಹ ದೊರೆಯುತ್ತವೆ ಎಂದು, ಬರ್ಮಾಬಜಾರಿನಲ್ಲಿ ಜಪಾನ್ ಟೇಪುರಿಕಾರ್ಡ್‌ಗಳು ಸಹ ದೊರೆಯುತ್ತವೆ ಎಂದು, ಈಸಾರಿ ಮದ್ರಾಸಿಗೆ ಹೋದಾಗ ಮದ್ರಾಸಿನಲ್ಲಿರುವ ಸ್ನೇಹಿತನಜೊತೆ ಬೇಟಿಯಾದರೆ ಅವನು ಒಳ್ಳೆಯ ಸಾಮಾನುಗಳನ್ನು ಕೊಡಿಸುತ್ತಾನೆಂದು, ಅಷ್ಟರಲ್ಲಿಯೇ ಸ್ನೇಹಿತನ ತಮ್ಮನಿಗೆ ನಮ್ಮ ಊರಿನಲ್ಲಿಯೇ ಮಧುಮಗಳನ್ನು ನೋಡಬೇಕೆಂದು, ಹೀಗೆ ಅನೇಕವಾಗಿ ಮನಸ್ಸು ಒಂದರ ನಂತರ ಒಂದು ತರುತ್ತಲೇ ಇರುತ್ತದೆ. ಮೊದಲನೆಯದಕ್ಕೂ ಎರಡನೆಯದಕ್ಕೂ ಸಂಬಂಧ ಇರುವುದಿಲ್ಲ. ಕೊನೆಗೆ ನೋಡಿಕೊಂಡರೆ ಮೊದಲು ಪ್ರಾರಂಭಿಸಿರುವುದು ಕಳ್ಳನ ವಿಷಯ, ಐದು ನಿಮಿಷಗಳು ಕಳೆಯುವುದರೊಳಗೆ

ಮದುವೆ ವಿಷಯದಲ್ಲಿ ನಿಂತುಹೋಗಿದೆ. ಹಾಗೆ ಬಿಟ್ಟುಹಾಕಿದರೆ ಮನಸ್ಸು ಒಂದಕ್ಕೊಂದು ಆಲೋಚಿಸುತ್ತಾ ಹೋಗುತ್ತಲೇ ಇರುತ್ತದೆ.

ಕುಂದನದ (ಗರಿಕೆ) ಹುಲ್ಲನ್ನು ಸಾಮಾನ್ಯವಾಗಿ ಎಲ್ಲರೂ ನೋಡಿಯೇ ಇರುತ್ತಾರೆ. ಅದು ಭೂಮಿಯಲ್ಲಿ ಬೇರುಗಳು ಇದ್ದೂ ಹುಲ್ಲು ಮೇಲಕ್ಕೆ ಕಾಣಿಸುತ್ತಿರುತ್ತದೆ. ಒಂದು ಹುಲ್ಲಿನ ಕಡ್ಡಿಯ ಪಕ್ಕದಲ್ಲಿ ಮತ್ತೊಂದುಹುಲ್ಲಿನಕಡ್ಡಿ ಇರುತ್ತದೆ. ಮೊದಲಸಸಿಗೂ ಎರಡನೆಸಸಿಗೂ ಮೇಲೆ ಸಂಬಂಧವಿಲ್ಲದಿದ್ದರೂ ಭೂಮಿಯಲ್ಲಿ ಬೇರು ಮಾತ್ರ ಒಂದಾಗಿಯೇ ಇರುತ್ತದೆ. ಕುಂದನದ (ಗರಿಕೆ) ಹುಲ್ಲು ಮೇಲಕ್ಕೆ ಹಗಲವಾಗಿ ಇದ್ದರೂ ಭೂಮಿಯಲ್ಲಿ ಬೇರು ಮಾತ್ರ ಒಂದೇ. ಒಂದೇ ಬೇರು ಭೂಮಿಯಲ್ಲಿ ಹರಡುತ್ತಾ ಬಲೆಯಂತೆ ಹರಡಿಕೊಂಡು ಮೇಲಕ್ಕೆ ಹುಲ್ಲಿನ ಚಿಗುರುಗಳು ಕಾಣಿಸುತ್ತವೆ. ನಮ್ಮಲ್ಲಿನ ಮನಸ್ಸು ಸಹ ಕುಂದನದ ಹುಲ್ಲಿನಂತೆ ವಿಷಯಗಳನ್ನು ಹುಟ್ಟಿಸುತ್ತಿದೆ ಎಂದು, ಕುಂದನದ ಹುಲ್ಲು ಬೇರಿನ ಸಂಬಂಧದಿಂದ ಪಕ್ಕ ಪಕ್ಕದಲ್ಲಿ ಹುಟ್ಟುತ್ತಾ ಹೋದಂತೆ ನಮ್ಮಲ್ಲಿನ ಮನಸ್ಸು ಸಹ ಒಂದು ವಿಷಯಸಂಬಂಧದಲ್ಲಿ ಇನ್ನೊಂದು ವಿಷಯವನ್ನು ಪಕ್ಕಪಕ್ಕದಲ್ಲಿ ತಂದಿಡುವುದರಿಂದ, ಕುಳಿತುಕೊಂಡು ಮೇದಿರುವ ಕುಂದನದಹುಲ್ಲು ಎಂದು ಅಂದಿದ್ದಾನೆ. ಮನಸ್ಸನ್ನು ಆಲೋಚನೆಯಲ್ಲಿ ಬಿಟ್ಟುಹಾಕಿದ ಕುಂದನದ ಹುಲ್ಲಿಗೆ ಸಮಾನವಾಗಿದೆ ಎಂದು ವೇಮನ ಮನಸ್ಸಿನ ವಿಷಯ ಚೆನ್ನಾಗಿ ತಿಳಿದವನಾಗಿ, ಮನಸ್ಸನ್ನು ಅನೇಕ ವಿಧಗಳಾಗಿ ವರ್ಣಿಸುತ್ತಾ ಕುಂದನದ ಹುಲ್ಲಾಗಿ ಸಹ ಹೇಳಿದ್ದಾನೆ.

ಇಲ್ಲಿಯವರೆಗು ಎಷ್ಟೋ ರಹಸ್ಯವಾದ ಶರೀರದೊಳಗೆ ನಡೆಯುತ್ತಿರುವ ಅಂತಃಕರಣಗಳೊಂದರ ವಿಷಯಗಳನ್ನು ತಿಳಿದುಕೊಂಡಿದ್ದೇವೆ. ಇಲ್ಲಿಯವರೆಗೆ ತಿಳಿದಿರುವುದು ಒಬ್ಬ ಮಾನವನಿಗೇ ಅಲ್ಲದೆ ಸಮಸ್ತ ಜೀವರಾಶಿಗಳಲ್ಲಿ ನಡೆಯುತ್ತಿರುವ ವಿಷಯವೆಂದು ತಿಳಿದುಕೊಳ್ಳಿ. ಜ್ಞಾನಿಯಲ್ಲದವನು ಯೋಗಿ ಆಗಲಾರನು ಅನ್ನುವ ಭಗವದ್ಗೀತೆ ಮಾತಿನ ಪ್ರಕಾರ ಅಂತಃಕರಣಗಳು ಐದು ಇವೆಯೆಂದು, ಅವುಗಳ ಕೆಲಸಗಳು ಇವು ಎಂದು ತಿಳಿದವನು ಯೋಗಿ

ಯಾಗುತ್ತಾನೆ. ಆದರೆ ತನ್ನ ಶರೀರದಲ್ಲಿ ನಡೆಯುವ ಕೆಲಸವೇ ತಿಳಿಯದವನು, ತನ್ನ ಶರೀರದಲ್ಲಿನ ಆತ್ಮವನ್ನು ಯಾವ ವಿಧವಾಗಿ ತಿಳಿದುಕೊಳ್ಳುತ್ತಾನೆ?

**ಸಕಲೇಂದ್ರಿಯಮುಲ ಸಂಚರಿಂಚುಚುನ್ನ**
**ಸಂಜ್ಞಗಾಂಚಿ ಪಂಚಿ ಯೆಂಚಿ**
**ಮೇಲೆ ಪರಮಾತ್ಮ ಗನವಲೆ**
**ಅಖಿಲ ಜೀವಸಂಗ ಆತ್ಮಲಿಂಗ.**

ಎಂದು ಆತ್ಮಲಿಂಗ ಶತಕದಲ್ಲಿ ಅಂದಿದ್ದಾರೆ. ನಮ್ಮ ಶರೀರದಲ್ಲಿ ಸಕಲೇಂದ್ರಿಯಗಳು ಏನು ಕೆಲಸ ಮಾಡುತ್ತಿವೆ ಎಂದು ಅವುಗಳ ವಿವರಣೆ ಎಲ್ಲವೂ ತಿಳಿದು, ಅವುಗಳ ಮೇಲಿರುವ ಪರಮಾತ್ಮನನ್ನು ನೋಡಬೇಕೆಂದು ಇದರ ಅರ್ಥ.

ಈ ಕಾಲದಲ್ಲಿ ಕೆಲವರು ಅಂತಃಕರಣಗಳಾದ ಮನಸ್ಸು, ಬುದ್ಧಿ, ಚಿತ್ತ ಬೇರೆ ಇವೆಯೆಂದು ತಿಳಿಯದೆ ಬುದ್ಧಿಯನ್ನೇ ಮನಸ್ಸೆಂದು, ಮನಸ್ಸನ್ನು ಚಿತ್ತವೆಂದು, ಒಂದುಸಲ ಜೀವಿಯೇ ಮನಸ್ಸಾಗಿದ್ದಾನೆಂದು ವಿಧವಿಧಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಸಾರಾಯಿ ಕುಡಿದು ನಡೆಯುವ ನಡಿಗೆಯಂತಿರುವ ಬೋಧನೆಯನ್ನು ಬಿಟ್ಟು, ಶಾಸ್ತ್ರಪ್ರಮಾಣವಾದುದು, ಜ್ಞಾನನೇತ್ರದಿಂದ ನೋಡಿರುವುದು, ಎಂದಿಗೂ ಸಂಶಯಗಳು ಹುಟ್ಟಿಸದ ಬೋಧನೆಯನ್ನು ಆಶ್ರಯಿಸಬೇಕೆಂದು ಕೋರುತ್ತಿದ್ದೇವೆ.

**ಪ್ರಶ್ನೆ :–** ಬುದ್ಧಿ ಕರ್ಮಾನುಸಾರಣಿ ಎಂದು ಎಲ್ಲರೂ ಅನ್ನುತ್ತಿದ್ದಾರೆ. ಈ ಮಾತು ನಿಜವಾ? ಬುದ್ಧಿ ಹೇಗೆ ಕರ್ಮಾನುಸಾರಣಿ ಆಗುತ್ತಿದೆ? ವಿವರಿಸಿ.

**ಉತ್ತರ :–** ಎಲ್ಲರೂ ಅಂದಷ್ಟು ಮಾತ್ರಕ್ಕೆ ಆ ಮಾತು ನಿಜವಾಗುತ್ತದೆಂದು ತಿಳಿಯಬಾರದು. ವಿವರಿಸಿ ತಿಳಿದುಕೊಳ್ಳಬೇಕು. ಸುಳ್ಳನ್ನು ಎಲ್ಲರೂ ಸತ್ಯ ಅಂದಷ್ಟು ಮಾತ್ರಕ್ಕೆ ಸತ್ಯವಲ್ಲ. ಸತ್ಯವನ್ನು ಒಬ್ಬನು ಹೇಳಿದರು ಅದು ಸತ್ಯವೇ ಆಗುತ್ತದಲ್ಲವೆ! ಈಗ ಬುದ್ಧಿ ಕರ್ಮಾನುಸಾರಣಿ ಎಂದು ಎಲ್ಲರನ್ನುವ ಮಾತು ಸಹ ಅಸತ್ಯವೆ.

ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತವೆಂಬ ಪರಮಾತ್ಮನ ಮಾತಿನ ಪ್ರಕಾರ, ಈದಿನ ಧರ್ಮಗಳ ಸ್ಥಾನಗಳಲ್ಲಿ ಅಧರ್ಮಗಳು ನಿಂತಿವೆ. ಯಾವುದೋ ಒಂದುದಿನ ಪರಮಾತ್ಮ ಬರುವಿಕೆ ತಪ್ಪುವುದಿಲ್ಲ. ಧರ್ಮಗಳ ಹೆಸರಿನಿಂದ ಚಲಾವಣೆ ಆಗುತ್ತಿರುವ ಅಧರ್ಮಗಳೆಲ್ಲವನ್ನು ಇಲ್ಲದಂತೆ ಮಾಡುವುದು ತಪ್ಪುವುದಿಲ್ಲ.

ಮನುಷ್ಯರಲ್ಲಿ ಅಜ್ಞಾನ ಬೆಳೆದು, ಕೇವಲ ಸ್ವಲ್ಪಕಾಲ ಜೀವಿಸುವ ಬದುಕುಬಾಳನ್ನೇ ಆಶ್ರಯಿಸಿ, ಅಸಲಾದ ಧರ್ಮಗಳಾವುವೋ ತಿಳಿದುಕೊಳ್ಳದೆ, ತಿಳಿಸಿದ ಧರ್ಮಗಳನ್ನು ಕುರಿತು ಆಲೋಚಿಸದೆ, ಅಧರ್ಮಗಳನ್ನು ನಂಬಿಕೊಂಡು ಅವರನ್ನು ಅವರೇ ಮೋಸಮಾಡಿಕೊಳ್ಳುತ್ತಿದ್ದಾರೆ. ಜ್ಞಾನವನ್ನು ವಿಮರ್ಶಿಸಬಾರದೆಂದು, ಹಾಗೆ ವಿಮರ್ಶಿಸಿದ ಹಿರಿಯರನ್ನು ಹೇಳನಮಾಡಿದಂತಾಗುತ್ತದೆ ಎಂದು, ಹೇಳಿರುವುದೇ ಕೇಳಬೇಕೆಂದು ಅನ್ನುವುದರಿಂದ, ಮೊದಲು ಒಬ್ಬನು ದಾರಿತಪ್ಪಿದ ಅವನ ಹಿಂದೆಯೇ ಪರಂಪರೆಯಾಗಿ ದಾರಿತಪ್ಪುವುದು ನಡೆಯುತ್ತಿದೆ. ಮೊದಲು ದಾರಿತಪ್ಪಿದಾಗಲೇ ಇದು ಸರಿಯಾದುದಾ ಅಲ್ಲವಾ ಎಂದು ನೋಡಿಕೊಂಡಿದ್ದರೂ, ಅಲ್ಲಿಯೇ ಸರಿಯಾದ ದಾರಿಯೊಳಗೆ ಹೋಗಿ ಹಿಂದಿರುವವರು ಸಹ ಸರಿಯಾದದಾರಿಯೊಳಗೆ ಹೋಗುವುದು ಸಂಭವಿಸುತ್ತಿತ್ತು. ಬ್ರಹ್ಮವಿದ್ಯೆ ಪ್ರಮಾಣ ಗ್ರಂಥವಾದ ಭಗವದ್ಗೀತೆಯಲ್ಲಿರುವ **"ಪರಿಪ್ರಶ್ನೇನ"** ಎನ್ನುವ ವಾಕ್ಯವೊಂದರ ಅರ್ಥದ ಪ್ರಕಾರ ಎದುರು ಪ್ರಶ್ನೆ ಕೇಳಬಾರದೆಂದು ಏನು ಹೇಳಿದರೂ ಕೇಳಬೇಕೆನ್ನುವ ಈಗಿನ ಬೋಧಕರ ಹತ್ತಿರನಾ ನಾವು ಬ್ರಹ್ಮವಿದ್ಯೆ ಕಲಿಯುವುದು. **ಅಯ್ಯನವರು ನಿದ್ರೆಹೋತ ವಿದ್ಯಾರ್ಥಿಗಳು ತಿಂಡಿಪೋತಗಳಂದಂತೆ** ಬ್ರಹ್ಮವಿದ್ಯೆಯನ್ನು ಬೋಧಿಸುವವರು ತಮಗೆ ಇಷ್ಟಬಂದಂತೆ ಹೇಳುತ್ತಾಹೋದರೆ, ಕೇಳುವವರು ಪ್ರತಿ ವಿಷಯವನ್ನು ಆಲೋಚಿಸದೆ ತಲೆಯಾಡಿಸುತ್ತಾ ಹೋದರೆ ಆಹಾ! ಈ ವಿದ್ಯೆ ಯಾವ ದಡಹತ್ತುತ್ತದೋ! ಬ್ರಹ್ಮವಿದ್ಯೆ ಈ ದಿನ ಅಧರ್ಮಗಳಿಂದ ತುಂಬಿಹೋಗುವುದಕ್ಕೆ ಕಾರಣ ಮೊದಲು ಶಿಷ್ಯರು ನಂತರ ಗುರುಗಳು. ಗಾರಡಿಯವನು ಇಗೋ ಹಾವು ಅಗೋ ಇಲಿ ಎನ್ನುತ್ತಿದ್ದರೆ, ಹಾವನ್ನು

ಇಲಿಯನ್ನು ನೋಡದೆ ಚಪ್ಪಾಳೆತಟ್ಟುವ ಪ್ರೇಕ್ಷಕರಂತೆ, ಹೇಳುವ ವಿಷಯ ನಿಜಾನಾ ಸುಳ್ಳಾ ಎಂದು ಆಲೋಚಿಸದೆ, ಎಲ್ಲಾ ಮಾತುಗಳಿಗೆ ತಲೆಯಾಡಿಸುವವರು ಇರುವುದರಿಂದ ಬ್ರಹ್ಮವಿದ್ಯೆ ಸಾರಾಂಶ ತಿಳಿಯದೆ ಹೋಗಿದೆ. ಚಿಕ್ಕಮಕ್ಕಳಿಗೆ ಕಾಗೆ ಗುಬ್ಬಿ ಕಥೆಗಳು ಹೇಳುತ್ತಾ ಕಾಲಕ್ಷೇಪ ಮಾಡಿಸುತ್ತಿದ್ದಾರೆ. ಮಕ್ಕಳು ಯೋಚಿಸುವವರಾಗಿ ಕಾಗಮ್ಮನಿಗೆ ಮನೆಹೇಗಿದ್ದವು ಎಂದು ಕೇಳಿದರೆ ಹಿರಿಯರು ಸಮಾಧಾನ ಹೇಳಲಾರದಂತೆ, ಈದಿನ ಬ್ರಹ್ಮವಿದ್ಯೆಯಲ್ಲಿ ಒಂದು ತಿರುಗು ಪ್ರಶ್ನೆ ಹಾಕಿದರೂ ಉತ್ತರ ಇಲ್ಲದಂತಾಗುತ್ತಿದೆ. ತಿಳುವಳಿಕೆ ಇರುವ ಜಿಜ್ಞಾಸೆಪರರಿಗೆ ಸರಿಯಾದ ಜ್ಞಾನವನ್ನು ಬೋಧಿಸುವವರೇ ಇಲ್ಲದಂತೆ ಹೋಗಿದ್ದಾರೆ. ಕುಲಮತ ಭೇದಗಳಿಂದ, ಸಾಂಪ್ರದಾಯಗಳೆಂಬ ಹೆಸರಿನಿಂದ, ಸರ್ವ ಮಾನವರಿಗು ಸಮಾನವಾದ ಬ್ರಹ್ಮವಿದ್ಯೆಯನ್ನು ಕೆಲವರಿಗೇ ಪರಿಮಿತಿಮಾಡಿದ್ದಾರೆ. ಸರ್ವ ಮಾನವರ ಶ್ರೇಯಸ್ಸಿಗೆ ಪರಮಾತ್ಮನೇ ಗೀತಾಶಾಸ್ತ್ರವನ್ನು ಹೇಳಿ, ಅದರಲ್ಲಿ ಸರ್ವಜೀವಿಗಳಿಗೂ ಅಗತ್ಯವಾದ ವಿಷಯಗಳನ್ನು ಬೋಧಿಸಿದಾಗ, ಭಗವದ್ಗೀತೆಯನ್ನು ಬ್ರಹ್ಮವಿದ್ಯಾಪ್ರಮಾಣ ಗ್ರಂಥವಾಗಿ ಕೃಷ್ಣನು ಹೇಳಿರುವಾಗ, ಕೆಲವರು ಹಿಂದೂಗಳು ಭಗವದ್ಗೀತೆಯನ್ನು ಪಕ್ಕಕ್ಕೆ ಇಟ್ಟು, ಅದಕ್ಕೆ ಸ್ವಲ್ಪವೂ ಗೌರವಕೊಡದೆ ಹಿಂದೂಗಳಿಗೆ ವೇದಗಳೇ ಪ್ರಮಾಣ ಗ್ರಂಥಗಳೆನ್ನುತ್ತಿದ್ದಾರೆ. **'ಎಂದಿಗಾದರು ಪರಮಾತ್ಮನೇ ಅವತರಿಸಿ ಇವುಗಳೆಲ್ಲವನ್ನು ಸರಿಮಾಡುತ್ತಾನೆ. ಎಂದಿಗೂ ಬ್ರಹ್ಮವಿದ್ಯೆ ನಾಶವಾಗುವುದಿಲ್ಲ'**

ಈಗ ನೀನು ಕೇಳಿದ ಬುದ್ಧಿ ಕರ್ಮಾನುಸಾರಣಿ ಅನ್ನುವ ಪ್ರಶ್ನೆಗೆ ಉತ್ತರ ಹೇಳುತ್ತೇನೆ ಕೇಳು. ಶರೀರ ಯಂತ್ರಾಂಗದಲ್ಲಿ ಬಾಹ್ಯ ವಿಷಯಗಳು ಮನಸ್ಸಿನ ಮೂಲಕ ಗುಣಗಳ ಮಧ್ಯದಲ್ಲಿರುವ ಬುದ್ಧಿಗೆ ಸೇರುತ್ತದೆ ಎಂದು ತಿಳಿದುಕೊಂಡಿದ್ದೇವೆ. ಅಲ್ಲಿಗೆ ಸೇರಿದ ವಿಷಯವನ್ನು ಜೀವಿಯು ಬುದ್ಧಿಮೂಲಕ ಸಾಕ್ಷಿಯಾಗಿ ನೋಡುತ್ತಿರುವಾಗ, ಬುದ್ಧಿ ಅಲ್ಲಿರುವ ಗುಣಗಳ ಪ್ರಕಾರ ಎರಡು ವಿಧಗಳಲ್ಲಿ ಯೋಚಿಸಿದಾಗ, ಆ ಎರಡರಲ್ಲಿ ಚಿತ್ತವು ಯಾವುದೋ ಒಂದನ್ನು ಮಾತ್ರ ನಿರ್ಣಯಿಸುತ್ತಿದೆ. ಚಿತ್ತವು ಮೇಲಿರುವ ಪ್ರಾರಬ್ಧಕರ್ಮಾನುಸಾರ ಏನು

ನಡೆಯಬೇಕಿದ್ದರೆ ಅದನ್ನೇ ನಿರ್ಣಯಿಸುತ್ತಿದೆ. ಎಲ್ಲಾ ಕೆಲಸಗಳಿಗೆ ಕರ್ಮವೇ ಕಾರಣವಾದಾಗ, ಆ ಕರ್ಮ ಕಾರ್ಯರೂಪವಾಗುವುದಕ್ಕೆ ನಡೆಯುವ ಯಂತ್ರಾಂಗದಲ್ಲಿ **ಬುದ್ಧಿ ಗುಣಾನುಸಾರ ಯೋಚಿಸಿದಾಗ, ಚಿತ್ತವು ಕರ್ಮಾನುಸಾರ ನಿರ್ಣಯಿಸುತ್ತಿದೆ.** ಅಂತಹದರಲ್ಲಿ ಬುದ್ಧಿ ಕರ್ಮಾನುಸಾರಣಿ ಅನ್ನುವುದು ಜ್ಞಾನವೋ ಅಥವಾ ಅಜ್ಞಾನವೋ ನೀನೆ ಆಲೋಚಿಸುಕೋ. ಬುದ್ಧಿಯೇ ಕರ್ಮಾನುಸಾರಿಣಿಯಾದರು ಚಿತ್ತವು ಯಾವುದರಿಂದ ಚಿತ್ತಗಿಸುತ್ತಿದೆ? ಅಂತಃಕರಣ ವಿಷಯ ಜ್ಞಾನನೇತ್ರದಿಂದ ನೋಡಿದವನಿಗೆ ತಿಳಿಯುತ್ತದೆ. ಹಾಗೆ ನೋಡದೆ ಅಂದಾಜಿನ ಪ್ರಕಾರ ಹೇಳುತ್ತಾಹೋದರು ಅದು ಅಜ್ಞಾನದಾರಿ ಆಗುತ್ತದೆ. ಜ್ಞಾನಮಾರ್ಗದ ಪ್ರಕಾರ **ಚಿತ್ತವು ಕರ್ಮಾನುಸಾರಿಣಿ** ಎಂದು ಹೇಳಲಾಗುತ್ತದೆ. ಹಾಗೆ **ಬುದ್ಧಿ ಗುಣಾನುಸಾರಿಣಿ** ಎಂದು ಹೇಳಲಾಗುತ್ತದೆ.

ಶರೀರದಲ್ಲಿ ನಡೆಯುವ ಯಂತ್ರಾಂಗವೆಲ್ಲವನ್ನು ಸೇರಿಸಿ ಸಾಂಖ್ಯ ಎಂದು ಹೇಳುತ್ತಾರೆ. ಗೀತೆಯಲ್ಲಿ ಭಗವಂತನು ಸಹ ಸಾಂಖ್ಯವು ಮುಖ್ಯವಾದ ಜ್ಞಾನವೆಂದು ತಿಳಿಸುತ್ತಾ ***ಕ್ಷೇತ್ರ ಕ್ಷೇತ್ರಜ್ಞಯಾರೋ ಜ್ಞಾನಂ ಯತ್ತದ್ ಜ್ಞಾನಂ ಮತಂ ಮಮ*** ಎಂದು ಅಂದಿದ್ದಾನೆ. ಇದರ ಅರ್ಥ ಕ್ಷೇತ್ರ ಎಂದರೆ ಶರೀರ, ಕ್ಷೇತ್ರಜ್ಞನೆಂದರೆ ಅದರಲ್ಲಿರುವ ಆತ್ಮ. ಶರೀರವನ್ನು ಶರೀರದಲ್ಲಿರುವ ಆತ್ಮವನ್ನು ತಿಳಿದುಕೊಳ್ಳುವ ಜ್ಞಾನವೇ ಮುಖ್ಯವಾದ ಜ್ಞಾನ. ಆದ್ದರಿಂದ ಜ್ಞಾನ ಜಿಜ್ಞಾಸೆಪರರೆಲ್ಲರೂ ಶರೀರದ ಬಗ್ಗೆ ಅದರಲ್ಲಿ ವಾಸಿಸುವ ಆತ್ಮವನ್ನು ಕುರಿತು ಮೊದಲು ತಿಳಿದುಕೊಂಡರೂ, ಆ ನಂತರ ಶರೀರದಲ್ಲೇ ಇರುವ ಪರಮಾತ್ಮನನ್ನು ಸಹ ತಿಳಿದುಕೊಳ್ಳಬಹುದು. ಭಗವದ್ಗೀತೆಯಲ್ಲಿ ಬೋಧಿಸಿದ ಬೋಧನೆ ಎಲ್ಲವೂ **ಶರೀರದಲ್ಲಿರುವುದೇ, ಶರೀರ ವಿನಹ ಏನೂ ಇಲ್ಲ.**

**ಪ್ರಶ್ನೆ :–** ಪ್ರಪಂಚದೊಂದಿಗೆ ಸಂಬಂಧ ಇಟ್ಟುಕೊಂಡ ಜ್ಞಾನೇಂದ್ರಿಯಗಳು ಐದು ಎಂದು, ಜ್ಞಾನೇಂದ್ರಿಯಗಳು ಇಲ್ಲದಿದ್ದರು ಪ್ರಪಂಚ ಸಂಬಂಧವೇ ಇಲ್ಲದಂತಾಗುತ್ತದೆ ಎಂದು ತಿಳಿದುಕೊಂಡಿದ್ದೇವೆ. ನಿತ್ಯಜೀವನದಲ್ಲಿ ಐದು ಜ್ಞಾನೇಂದ್ರಿಯಗಳಲ್ಲಿ ಹೆಚ್ಚಾಗಿ ಪ್ರಪಂಚ ಸಂಬಂಧ ಹೊಂದಿರುವವು ಯಾವುವು?

**ಉತ್ತರ :–** ಒಟ್ಟು ಜೀವನಕಾಲದಲ್ಲಿ ಪ್ರಪಂಚ ಸಂಬಂಧ ಇರುವ ಅವಯವಗಳು 1) ಕಣ್ಣು 2) ಕಿವಿ. ಮೊದಲು ಜಾಗ್ರತಾವಸ್ಥೆಯಲ್ಲಿ ಹೆಚ್ಚಾಗಿ ಕಣ್ಣಿನ ಮೂಲಕವೇ ಪ್ರಪಂಚ ಸಂಬಂಧ ಇದೆ. ಎರಡನೆಸ್ಥಾನ ಕಿವಿದು. ಕಣ್ಣು, ಕಿವಿ ಇಲ್ಲದಿದ್ದರೆ ನನ್ನ ಮಾತು ನೀನು ಕೇಳಲಾರೆ. ನನ್ನನ್ನು ನೀನು ನೋಡ ಲಾರೆ. ಈ ಎರಡು ಇಂದ್ರಿಯಗಳು ಇಲ್ಲದಿದ್ದರೆ ಈಗ ನನ್ನಜೊತೆಯೇ ನಿನಗೆ ಸಂಬಂಧ ಇಲ್ಲದಂತಾಗುತ್ತದೆ. ಸ್ಪರ್ಶ ಏನಾದರೂ ವಸ್ತುವು ನಿನ್ನ ಚರ್ಮವನ್ನು ತಗಲಿದಾಗ ತಿಳಿಯುತ್ತದೆ. ಹಾಗೆ ನಿನ್ನ ನಾಲಿಗೆಯ ಮೇಲೆ ಪದಾರ್ಥ ಬಿದ್ದಾಗಲೇ ಆ ಪದಾರ್ಥವೊಂದರ ರುಚಿ ಜೀವಿಗೆ ತಿಳಿಯುತ್ತದೆ. ಮೂಗಿಗೆ ವಾಸನೆ ಬಂದಾಗಲೇ ಆ ವಾಸನೆಯ ವಿಷಯ ಒಳಗಿರುವ ಜೀವಿಗೆ ತಿಳಿಯುತ್ತದೆ. ಸ್ಪರ್ಶ, ರಸ, ಗಂಧಗಳು ತನ್ನ ಶರೀರದ ಹತ್ತಿರಕ್ಕೆ ಬಂದಾಗಲೇ ತಿಳಿಯುತ್ತದೆ. ಕಣ್ಣು ಕಿವಿ ಹಾಗಲ್ಲದೆ ಹೊರಗೆ ಅನೇಕವಾಗಿರುವ ಸರ್ವ ವಿಷಯಗಳನ್ನು ಗ್ರಹಿಸಿ ಎಲ್ಲಿಯೋ ಒಳಗಿರುವ ಜೀವಿಗೆ ತಿಳಿಸುತ್ತದೆ. ಯಾರು ಹೇಗೆ ಆಲೋಚಿಸಿ ನೋಡಿದರು ಕಣ್ಣು, ಕಿವಿ ಪ್ರಪಂಚ ಸಂಬಂಧದಲ್ಲಿ ಮುಖ್ಯವಾದ ಅವಯವಗಳೆಂದು ತಿಳಿಯಬಹುದು. **ಸರ್ವೇಂದ್ರಿಯಾನಾಮ್ ನಯನಂ ಪ್ರಧಾನಮ್** ಎಂದು ಹಿರಿಯರು ಸಹ ಹೇಳಿದ್ದಾರೆ. ಸ್ಪರ್ಶ, ರಸ, ಗಂಧಗಳನ್ನು ಗ್ರಹಿಸುವ ಚರ್ಮ, ನಾಲಿಗೆ, ಮೂಗು ಕೆಲಸ ಮಾಡದಿದ್ದರೂ ಬದುಕಬಹುದು. ದೃಷ್ಟಿ, ಶಬ್ದ ಗ್ರಹಿಸುವ ಕಣ್ಣು, ಕಿವಿ ಕೆಲಸ ಮಾಡದೆಹೋದರು ಪ್ರಪಂಚ ಸಂಬಂಧ ಇಲ್ಲದಿರುವುದರಿಂದ ಅವನ ಜೀವನ ಕಷ್ಟಕರ. ಹೆಚ್ಚಿನ ಪಾಪ ಮಾಡಿಕೊಂಡವರಿಗೆ ಈ ಎರಡು ಇಂದ್ರಿಯಗಳು ಸಾಮರ್ಥ್ಯ ಇಲ್ಲದವಾಗಿ ಇರುತ್ತವೆಂದು ಗ್ರಹಿಸಬಹುದು.

# ಪಂಚಾಕ್ಷರಿ

ಪಂಚಾಕ್ಷರಿ ಎನ್ನುತ್ತಲೇ "ಓಂ ನಮಃಶಿವಾಯ" ಎಂದು ಎಲ್ಲರಿಗೂ ತಿಳಿಯುತ್ತದೆ. ಈ ಕಾಲದಲ್ಲಿ ಬಹಳ ಜನ ಗುರುಗಳು ಈ ಪಂಚಾಕ್ಷರಿಯನ್ನೇ

ಉಪದೇಶ ಕೊಡುವುದಕ್ಕೆ ಉಪಯೋಗಿಸುತ್ತಿದ್ದಾರೆ. ಕಿವಿಯಲ್ಲಿ ಹೇಳಿಸಿಕೊಂಡ ಪಂಚಾಕ್ಷರಿ ಮಂತ್ರವನ್ನು ಬಹಳಜನ ಜಪ ಮಾಡುತ್ತಿರುವುದು ಸಹ ಇದೆ. ಈ ಕಾಲದಲ್ಲಿ ಅದು ಗುರೂಪದೇಶ ಮಂತ್ರವಾಗಿ ಇರುವಾಗ, ಪೂರ್ವದಲ್ಲಿ ಈ ಮಂತ್ರವನ್ನು ಚಿಕ್ಕ ಮಕ್ಕಳಿಗೆ ವಿದ್ಯಾಭ್ಯಾಸ ಆರಂಭದಲ್ಲಿಯೇ ಮೊಟ್ಟಮೊದಲ ಅಕ್ಷರಾಭ್ಯಾಸಕ್ಕಾಗಿ ಬೋಧಿಸುತ್ತಿದ್ದರು. ಮೊದಲ ಭಾಷಾ ಲಿಪಿ ಪ್ರಾರಂಭದಲ್ಲಿಯೇ ಎಲ್ಲಾ ಭಾಷೆಗಳಲ್ಲಿ **ಓಂ ನಮಃ ಶಿವಾಯ**ಎಅನ್ನುವ ಪದವನ್ನು ಹೇಳಿಸಿ ಬರೆಯಿಸಿ ಪ್ರಾರಂಭ ಮಾಡುತ್ತಿದ್ದರು. ಅದು ಸ್ವಲ್ಪಕಾಲಕ್ಕೆ ಸ್ವಲ್ಪಬದಲಾಗಿ ಮಕ್ಕಳ ವಿದ್ಯಾಭ್ಯಾಸ ಪ್ರಾರಂಭದಲ್ಲಿ **ಓಂ ನಮಃ ಶಿವಾಯ** ಎಂದು ಬರೆಯಿಸಲ್ಪಡುತ್ತಿತ್ತು. ಶಿವಾಯ ಪದವನ್ನು ಶಿವಾಯಃ ಎಂದು ತಪ್ಪಾಗಿ ಬರೆಯುತ್ತಿದ್ದರು. ಆದರೆ ಈಗ ಅದು ಸಹ ಪೂರ್ತಿಯಾಗಿ ಹೋಗಿ ಅ ಆ ಇ ಈ ಎನ್ನುವ ಲಿಪಿಯಿಂದ ಓದನ್ನು ಪ್ರಾರಂಭಿಸುತ್ತಿದ್ದಾರೆ. ಪೂರ್ವದಲ್ಲಿ ಪಂಚಾಕ್ಷರಿ ಮಂತ್ರವನ್ನು **ಓಂ ನಮಃ ಶಿವಾಯ** ಅನ್ನುವ ಲಿಪಿ ಅಕ್ಷರಗಳಿಂದ ಪ್ರಾರಂಭವಾದ ಓದು ಈ ದಿನ ಅ ಆ ಇ ಈ ಗಳಿಂದ ಪ್ರಾರಂಭ ಆಗುವುದರಿಂದ ಪಂಚಾಕ್ಷರಿ ಎಂದರೆ ಏನು? ಅದನ್ನು ಏಕೆ ಪೂರ್ವದಲ್ಲಿ ಮಕ್ಕಳಿಂದ ಹೇಳಿಸುತ್ತಿದ್ದರೆಂಬುವುದು ಈಗಿನ ಕಾಲದಲ್ಲಿ ತಿಳಿದಿಲ್ಲವೆಂಬ ಮಾತು.

**'ತಿಳಿದಿರುವುದನ್ನು ತಿಳಿಯದಂತೆ ಮರೆತುಹೋಗುವುದು ಎಲ್ಲರಸರದಿ ಯಾದರೆ ಆ ತಿಳಿಯದಿರುವುದನ್ನು ತಿಳಿಸುವುದು ಒಬ್ಬನಸರದಿ'** ಎನ್ನುವ ಹಿರಿಯರ ವಾಕ್ಯದ ಪ್ರಕಾರ, ಈಗ ಆ ಒಬ್ಬನ ಪಾತ್ರ ನಾವು ನಿರ್ವಹಿಸುತ್ತಾ ತಿಳಿಸುವುದು ಏನೆಂದರೆ! ಪ್ರತಿ ಎಲೆ ಒಂದು ಔಷಧವೆಂಬಂತೆ ಪ್ರತಿ ಮಾತು ಸಹ ಒಂದು ಮಂತ್ರವಾಗುತ್ತದೆ. ಆದ್ದರಿಂದ **ಓಂ ನಮಃ ಶಿವಾಯ** ಅನ್ನುವ ಪದವೂ ಸಹ ಒಂದು ಮಾತೆ ಆದ್ದರಿಂದ ಅದನ್ನು ಸಹ ಮಂತ್ರ ಅಂದಿದ್ದಾರೆ. ಇಂತದ್ದೇ **ಓಂ ನಮೋನಾರಾಯಣಾಯ** ಅನ್ನುವ ಮಂತ್ರವನ್ನು ಅಷ್ಟಾಕ್ಷರಿ ಮಂತ್ರವೆಂದು **ಓಂ ನಮಃ ಶಿವಾಯ** ಅನ್ನುವ ಮಂತ್ರವನ್ನು ಪಂಚಾಕ್ಷರಿ ಮಂತ್ರವೆಂದು ಹೆಸರುಗಳು ಇಟ್ಟಿದ್ದಾರೆ. ಈ ಕಾಲದಲ್ಲಿ ಅಷ್ಟಾಕ್ಷರಿ, ಪಂಚಾಕ್ಷರಿಗಳೆಂಬ ಹೆಸರುಗಳಿಂದ

ಕೆಲವರನ್ನುತ್ತಿರುವ ಈ ಮಂತ್ರಗಳನ್ನು ಕುರಿತು ಏಕೆ ಆ ಹೆಸರುಗಳಿಟ್ಟಿದ್ದಾರೆ ಎಂದು ನಾವು ಕೇಳಿದಾಗ, ಈ ಕಾಲದಲ್ಲಿ ತಿಳಿದವರೆಂದೆನಿಸಿಕೊಂಡ ಕೆಲವರು **ಓಂ ನಮಃ ಶಿವಾಯ ಐದಕ್ಷರಗಳಿಂದ ಕೂಡಿಕೊಂಡಿದೆ, ಆದ್ದರಿಂದ ಅದನ್ನು ಪಂಚಾಕ್ಷರಿ ಎಂದು, ಹಾಗೆ ಓಂ ನಮೋನಾರಾಯಣಾಯ ಎಂಟು ಅಕ್ಷರಗಳಿಂದ ಕೂಡಿಕೊಂಡಿದೆ ಆದ್ದರಿಂದ ಅಷ್ಟಾಕ್ಷರಿ ಎಂದು ಕರೆಯುತ್ತಿದ್ದೇವೆ. ಶೈವರು ಪಂಚಾಕ್ಷರಿ ಮಂತ್ರವನ್ನು, ವೈಷ್ಣವರು ಅಷ್ಟಾಕ್ಷರಿ ಮಂತ್ರವನ್ನು ಉಪದೇಶಕೊಡುತ್ತಿರುತ್ತಾರೆಂದು** ತಿಳಿಸಿದ್ದಾರೆ.

ಪಂಚಾಕ್ಷರಿ ಮಂತ್ರವೆಂದರೆ ಐದಕ್ಷರಗಳ ಮಂತ್ರವೆಂದು ಅನ್ನುವುದರಿಂದ ಅದರ ಅಕ್ಷರಗಳನ್ನು ಲೆಕ್ಕಿಸಿದಾಗ ಅದರಲ್ಲಿ 1) ಓಂ 2) ನ 3) ಮಃ 4) ಶಿ 5) ವಾ 6) ಯ ಅನ್ನುವ ಆರಕ್ಷರಗಳು ಬರುತ್ತವೆ. ಆದರೆ ಅಷ್ಟಾಕ್ಷರಿ ಮಂತ್ರವನ್ನು ಲೆಕ್ಕಿಸಿದರೆ 1) ಓಂ 2) ನ 3) ಮೋ 4) ನಾ 5) ರಾ 6) ಯ 7) ಣಾ 8) ಯ ಅನ್ನುವ ಎಂಟಕ್ಷರಗಳು ಸರಿಹೋಗಿವೆ. ಇದನ್ನು ಅನುಸರಿಸಿ ನೋಡಿದರೆ ಪಂಚಾಕ್ಷರಿಯಲ್ಲಿ ಏನೋ ಲೋಪವಿದೆ ಎಂದು ತಿಳಿಯುತ್ತಿದೆ. ಭಾಷಾಲಿಪಿ ಅಕ್ಷರಗಳನ್ನು ಎಣಿಸಿದಾಗ ಪಂಚಾಕ್ಷರಿ ಷಷ್ಟಾಕ್ಷರಿ ಮಂತ್ರವಾಗಿ ಕಾಣಿಸುತ್ತಿದೆ. ಪೂರ್ವದಲ್ಲಿ ಹಿರಿಯರು ಆರು ಅಕ್ಷರಗಳ ಮಂತ್ರವನ್ನು ಐದಕ್ಷರಗಳ ಮಂತ್ರವೆಂದು ಏಕೆ ಹೇಳಿದ್ದಾರೆಂಬ ಪ್ರಶ್ನೆ ಉದ್ಭವಿಸುತ್ತಿದೆ.

ಪಂಚಾಕ್ಷರಿ ಮಂತ್ರವೊಂದರ ಸಂಗಡದ ಸಂದರ್ಭಗಳು ಯೋಚಿಸಿದರೆ, ಪೂರ್ವದಲ್ಲಿನ ಜ್ಞಾನಿಗಳು ವಿಶೇಷವಾದ ಅರ್ಥದಿಂದ ಈ ಪಂಚಾಕ್ಷರಿಯನ್ನು ನಿರ್ಮಿಸಿದ್ದಾರೆಂದು ತಿಳಿಯುತ್ತಿದೆ. ಈಗಿರುವ ಎಲ್ಲಾ ಮಂತ್ರಗಳಿಗಿಂತ ಮೊದಲಮಂತ್ರ ಪಂಚಾಕ್ಷರಿ ಮಂತ್ರ. ಪಂಚಾಕ್ಷರಿ ಮಂತ್ರ ಬಂದ ಸ್ವಲ್ಪಕಾಲಕ್ಕೆ ಪುನಃ ಕೆಲವರು ಉಳಿದ ಮಂತ್ರಗಳನ್ನು ಸೃಷ್ಟಿಸಿದಂತೆ ತಿಳಿಯುತ್ತಿದೆ. ಮೊದಲು ಪಂಚಾಕ್ಷರಿಮಂತ್ರವನ್ನು ತಯಾರುಮಾಡಿದವರ ಭಾವಹೇಗಿತ್ತು ಎಂದರೆ! ಕ್ಷರವೆಂದರೆ ನಾಶವಾಗುವುದೆಂದು ಅರ್ಥ. ಹಾಗೆಯೇ ಅಕ್ಷರವೆಂದರೆ ನಾಶವಾಗದಿರುವು ದೆಂದು ಅರ್ಥ. ಇದರಪ್ರಕಾರ ನೋಡಿದರೆ ಪಂಚಾಕ್ಷರಿ

ಎಂದರೆ ಪಂಚಕ್ಕೂ ನಾಶವಾಗದಿರುವುದೆಂದು ಅರ್ಥ. ಪಂಚಕ್ಕೂ ನಾಶವಾಗದಿರುವುದೇನು ಎಂದು ಯೋಚಿಸಿದರೆ **ಓಮಿತ್ಯೇಕಾಕ್ಷರಂ ಬ್ರಹ್ಮ** ಎಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ. ಓಂ ಎನ್ನುವುದು ಅಕ್ಷರವೆಂದು ಅಂದರೆ ನಾಶವಾಗದಿರುವುದೆಂದು ಅದೇ ದೈವವೆಂದು ಅರ್ಥವಾಗುತ್ತಿದೆ. ಆದ್ದರಿಂದ ಪಂಚಾಕ್ಷರಿ ಮಂತ್ರದಲ್ಲಿ **ಓಂ** ಎನ್ನುವುದೇ ದೈವವೆನ್ನುತ್ತಾ ಪಂಚಕ್ಕೆ ನಾಶವಾಗದಿರುವುದೆಂದು ತಿಳಿಯುತ್ತಿದೆ. ಪಂಚವೆಂದರೆ ಏನೆಂಬ ಮಾತಿಗೆ ಬಂದರೆ.

ಪ್ರಕೃತಿ ಪರಮಾತ್ಮರೆಂಬುವ ಈ ಸೃಷ್ಟಿಯಲ್ಲಿ ತಿಳಿಯುವುದೆಲ್ಲಾ ಪ್ರಕೃತಿಯೇ. ಕಣ್ಣಿಗೆ ಕಾಣಿಸದೆ ಎಲ್ಲಾಕಡೆ ಆವರಿಸಿರುವುದು ಪರಮಾತ್ಮ. ಪ್ರಕೃತಿ ಐದು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. 1) ಆಕಾಶ 2) ಗಾಳಿ 3) ಅಗ್ನಿ 4) ನೀರು 5) ಭೂಮಿ. ಐದು ಭಾಗಗಳಾಗಿರುವ ಪ್ರಕೃತಿಯಲ್ಲಿಯೇ ಸರ್ವ ಜೀವರಾಶಿಗಳು ಸಾಯುತ್ತಾ ಹುಟ್ಟುತ್ತಾ ಇವೆ. ಪಂಚಭೂತಗಳಿಗೆ ಎಲ್ಲಾ ಜೀವರಾಶಿಗಳು ನಾಶವಾಗುವವಾಗಿವೆ. ಪ್ರತ್ಯಕ್ಷವಾಗಿ ನಾವು ನೋಡುತ್ತಲೇ ಇದ್ದೇವೆ. ಗಾಳಿ ಬಿರುಸಾಗಿಬೀಸಿದರೆ ಎಷ್ಟು ಭೀಭತ್ಸವನ್ನಾದರು ಮಾಡಬಲ್ಲದು. ಎಷ್ಟು ಜನರ ಪ್ರಾಣಗಳನ್ನಾದರೂ ತೆಗೆಯಬಲ್ಲದು. ಹಾಗೆ ನೀರು ಉದ್ರೇಕಗೊಂಡರೆ ಎಲ್ಲರನ್ನು ಜಲಸಮಾಧಿ ಮಾಡಬಲ್ಲದು. ಪ್ರಕೃತಿಯಲ್ಲಿನ ಐದು ಭಾಗಗಳು ಸರ್ವಜೀವರಾಶಿಗಳನ್ನು ಒಂದೇ ಒಂದು ಕ್ಷಣದಲ್ಲಿ ನಾಶಮಾಡಬಲ್ಲವು. ಆದರೆ ಈ ಐದು ತಮ್ಮನ್ನು ಸೃಷ್ಠಿಸಿದ ಪರಮಾತ್ಮನನ್ನು ಏನು ಮಾಡಲಾರವು. ಸರ್ವಜೀವರಾಶಿಗಳನ್ನು ನಾಶಮಾಡಿದಂತೆ ಪರಮಾತ್ಮನನ್ನು ನಾಶಮಾಡಲಾರವು. ಆ ವಿಷಯವನ್ನು ಪ್ರಜೆಗಳಿಗೆ ತಿಳಿಸುವುದಕ್ಕೋಸ್ಕರ ಪೂರ್ವದಲ್ಲಿ ಜ್ಞಾನಿಗಳು ಪರಮಾತ್ಮನಿಗೆ ಭಾಷಾಲಿಪಿಯಲ್ಲಿ ಒಂದು ಬೀಜಾಕ್ಷರವನ್ನು ಸೃಷ್ಠಿಸಿ ಅದನ್ನು **ಓಂ** ಅಂದಿದ್ದಾರೆ. ಹಾಗೆ ಪ್ರಕೃತಿಯಲ್ಲಿನ ಐದು ಭಾಗಗಳಿಗೆ ಐದು ಬೀಜಾಕ್ಷರಗಳನ್ನು ತಯಾರುಮಾಡಿದ್ದಾರೆ. ಅವು ಕ್ರಮವಾಗಿ ಒಂದು ಆಕಾಶಕ್ಕೆ **'ನ'** ಎಂದು. ಎರಡು ಗಾಳಿಗೆ **'ಮಃ'** ಎಂದು, ಮೂರು ಅಗ್ನಿಗೆ **'ಶಿ'** ಎಂದು, ನಾಲ್ಕು ನೀರಿಗೆ

**’ವಾ’** ಎಂದು, ಐದು ಭೂಮಿಗೆ **’ಯ’** ಎಂದು, ಇಟ್ಟಿದ್ದಾರೆ. ಪಂಚಭೂತಗಳಿಗಿರುವ ಪಂಚಬೀಜಾಕ್ಷರಗಳು **’ನಮಃ ಶಿವಾಯ’** ಎಂದು ಆ ದಿನ ಎಲ್ಲರಿಗೂ ತಿಳಿದಿತ್ತು. ಪಂಚಬೀಜಾಕ್ಷರಗಳಲ್ಲಿಯೇ ಮೊದಲ ಎರಡಕ್ಷರಗಳನ್ನು ಒಂದುಪದವಾಗಿ ಕೊನೆಯ ಮೂರಕ್ಷರಗಳನ್ನು ಒಂದುಪದವಾಗಿ ನಮಃ ಶಿವಾಯ ಅನ್ನುವುದರಲ್ಲಿ ಸಹ ಅರ್ಥವಿದೆ. ಪಂಚಭೂತಗಳಲ್ಲಿ ಕಣ್ಣಿಗೆ ಕಾಣಿಸದ ಆಕಾಶ, ಗಾಳಿ ಎರಡು ಇವೆ. ಆದ್ದರಿಂದ ಇವೆರಡರ ಬೀಜಾಕ್ಷರಗಳು ನಮಃ ನ್ನು ಒಂದುಪದವಾಗಿ ಕಣ್ಣಿಗೆ ಕಾಣಿಸುವವು ಅಗ್ನಿ, ನೀರು, ಭೂಮಿ ಮೂರು ಇವೆ. ಆದ್ದರಿಂದ ಅವುಗಳ ಬೀಜಾಕ್ಷರಗಳಾದ ಶಿವಾಯ ಅನ್ನುವ ಒಂದುಪದವಾಗಿ ಹೇಳುತ್ತಾ **ನಮಃ ಶಿವಾಯ** ಅಂದಿದ್ದಾರೆ. ಈ ವಿಧವಾಗಿ ಹೇಳುವುದರಿಂದ ಎಲ್ಲರಿಗೂ ಅವುಗಳ ತಾರತಮ್ಯವು ತಿಳಿಯುತ್ತದೆ ಎಂಬ ಭಾವದಿಂದ ಅಂದಿನ ಹಿರಿಯರು ಹಾಗೆ ಇಟ್ಟಿದ್ದಾರೆ.

ಇಲ್ಲಿಯವರೆಗೂ ಪಂಚಭೂತಗಳಿಗಿರುವ ಬೀಜಾಕ್ಷರಗಳಾದ ‘ನಮಃ ಶಿವಾಯ’ವನ್ನು ಕುರಿತು ತಿಳಿದುಕೊಂಡಿದ್ದೇವೆ. ಹಾಗೆ ಪಂಚಭೂತಗಳಿಗು ನಾಶವಾಗದ ದೈವವನ್ನು **ಓಂ** ಅನ್ನುವ ಬಿಜಾಕ್ಷರವಾಗಿ ಪೂರ್ವದಲ್ಲಿ ಹಿರಿಯರು ಗುರುತಿಸಿದ ವಿಷಯವನ್ನು ತಿಳಿದುಕೊಂಡಿದ್ದೇವೆ. ಪಂಚಭೂತಗಳಿಗು ದೇವರು ಒಬ್ಬನೇ ನಾಶವಾಗುವುದಿಲ್ಲವಾದ್ದರಿಂದ ಆ ವಿಷಯ ಮಾನವರೆಲ್ಲರಿಗೂ ತಿಳಿಯುವಂತೆ **ಓಂ** ಅನ್ನುವುದು ನಾಶವಾಗದಿರುವುದೆಂದು ತಿಳಿಸುತ್ತಾ, ಅದು ಯಾವುದಕ್ಕು ನಾಶವಾಗುವುದಿಲ್ಲವೋ ತಿಳಿಯುವಂತೆ **ಓಂ ನಮಃ ಶಿವಾಯ** ಅನ್ನುವ ವಾಕ್ಯವನ್ನು ತೋರಿಸಿದ್ದಾರೆ. ದೇವರೊಬ್ಬನೇ ಪಂಚಭೂತಗಳಿಗೆ ನಾಶವಾಗದಿರುವವನೆಂದು ಇದರ ಅರ್ಥ. ಆದ್ದರಿಂದ ಓಂಕಾರವನ್ನು ಒಂದನ್ನೇ ಪಂಚಾಕ್ಷರಿ ಎನ್ನುತ್ತಿದ್ದರು. ಪಂಚಭೂತಗಳಿಗೆ ನಾಶವಾಗದಿರುವುದೆಂದು ಪಂಚಾಕ್ಷರಿ ಎಂದು ಓಂಕಾರವನ್ನೇ ಪೂರ್ವದಲ್ಲಿ ಭಾವಿಸುತ್ತಿದ್ದರು. ಓಂಕಾರವನ್ನು ಅಕ್ಷರ ಎಂದರೆ ನಾಶವಾಗದಿರುವುದೆಂದು ಕರೆಯುತ್ತಿದ್ದರು. ಯಾವುದಕ್ಕೂ ನಾಶವಾಗದಿರುವುದೆಂಬ ಅರ್ಥವಿಲ್ಲದೆ ಹೋಗುತ್ತದೆಂದು ಪೂರ್ತಿ

ವಿವರಕೊಡುವಂತೆ ಪರಮಾತ್ಮ ಬೀಜಾಕ್ಷರವಾದ **ಓಂ** ಅನ್ನು ಪಂಚಭೂತಗಳ ಜೀಜಾಕ್ಷರಗಳಾದ **'ನಮಃ ಶಿವಾಯ'** ಮುಂದೆ ಇಟ್ಟು ಒಟ್ಟು ಆರು ಅಕ್ಷರಗಳು ಬರೆದು ಪಂಚಾಕ್ಷರಿ ಅಂದಿದ್ದಾರೆ. ಲೆಕ್ಕಿಸಿದಾಗ ಆರು ಅಕ್ಷರಗಳೇ ಆಗಿದ್ದರೂ ಅದರ ಹೆಸರು ಪಂಚಾಕ್ಷರಿಯೇ ಎಂದು, ಓಂಕಾರವೇ ಪಂಚಾಕ್ಷರಿ ಎಂದು, ಪಂಚಾಕ್ಷರಿಯಲ್ಲಿ ವಿಶೇಷವಾದ ಅರ್ಥ ಒಳಗೊಂಡಿದೆ ಎಂದು ತಿಳಿಯಬೇಕು.

ಪೂರ್ವದಲ್ಲಿ ಈಶ್ವರಲಿಂಗ ಪ್ರತಿಷ್ಠಾಪನೆಯೇ ಮೊಟ್ಟಮೊದಲ ದೇವಾಲಯ. ಅದು ಪುರಾಣಗಳಲ್ಲಿ ಹೇಳುತ್ತಿರುವ ಶಂಕರನ ಶಾಪಗ್ರಸ್ತ ಪ್ರತಿಮೆಯಲ್ಲವೆಂದು, ಪ್ರಕೃತಿ ಪರಮಾತ್ಮನಿಗೆ ಗುರುತಿಗಾಗಿ ಇಟ್ಟಿರುವುದೆಂದು, ಅದು ಈ ಕಾಲದಲ್ಲಿ ಶಂಕರನ ಪ್ರತಿಮೆಯಾಗಿ ಎಲ್ಲರಂದುಕೊಂಡು ಪೂಜಿಸುತ್ತಿದ್ದಾರೆಂದು, ಹಾಗೆ ಮಾಡುವುದರಿಂದ ಪೂರ್ವದಲ್ಲಿನ ಜ್ಞಾನಿಗಳು ಯಾವ ಉದ್ದೇಶದಿಂದ ಆ ಪ್ರತಿಷ್ಠೆ ಮಾಡಿದ್ದಾರೋ ಆ ಉದ್ದೇಶವನ್ನು ನಾವು ಪೂರ್ತಿಯಾಗಿ ವಿಸ್ಮರಿಸಿದ್ದೇವೆಂದು, ವಾಸ್ತವವಾಗಿ ಆ ದಿನ ಇರುವ ಭಾವನೆ ಕಾಲಕ್ರಮವಾಗಿ ಬದಲಾಗಿದೆ ಎಂದು, ಪೂರ್ವದಲ್ಲಿ ಲಿಂಗವನ್ನು ಪರಮಾತ್ಮ ಗುರುತಾಗಿ ತಿಳಿಯುತ್ತಿದ್ದರೆಂದು, ನಮ್ಮ ರಚನೆಯಲ್ಲಿ ಬಹಳಸಲ ಹೇಳಿದ್ದೇವೆ. ಪೂರ್ವದಲ್ಲಿ ಲಿಂಗಪ್ರತಿಷ್ಠೆ ವಿಷಯ ಎಲ್ಲರಿಗೂ ತಿಳಿದಿರುವುದಾಗಿತ್ತು. ಅವರು ಅಲ್ಲಿಗೆ ಹೋಗಿ ಲಿಂಗವನ್ನು ನೋಡಿ, ಪಂಚಭೂತಗಳಿಗೆ ನಾಶವಾಗದ ಪರಮಾತ್ಮ ಎನ್ನುವ ಭಾವದಿಂದ, ಪರಮಾತ್ಮ ಪಂಚಭೂತಗಳಿಗೆ ನಾಶವಾಗದಿರುವವನೆಂಬ ಭಾವವನ್ನು ಹೇಳುವಂತೆ ಬೀಜಾಕ್ಷರಗಳಾದ **ಓಂ ನಮಃ ಶಿವಾಯ** ಎಂದು ಹೇಳಿ ನಮಸ್ಕರಿಸಿ ಬರುತ್ತಿದ್ದರು. ಬೀಜಾಕ್ಷರಗಳನ್ನು ಬಾಯಿಮುಖಾಂತರ ಹೇಳುವುದರಿಂದ ಅದು ಮಂತ್ರವಾಗಿ, ಪಂಚಾಕ್ಷರಿ ಮಂತ್ರವಾಗಿ ಹೆಸರುವಾಸಿಯಾಗಿದೆ. ಆ ಪಂಚಾಕ್ಷರಿ ಮಾತ್ರವೇ ಈ ದಿನ ಇದೆ. ಆದರೆ ಪೂರ್ವದಲ್ಲಿ ಮನುಷ್ಯರ ಭಾವನೆಗೂ ಈಗಿರುವ ಮನುಷ್ಯರ ಭಾವನೆಗೂ ಎಷ್ಟೋ ವ್ಯತ್ಯಾಸ ಕಾಣಿಸುತ್ತಲೇ ಇದೆ.

ಈ ದಿನ ಭಗವದ್ಗೀತೆಯಲ್ಲಿ ಸಹ ಓಂ ಅನ್ನುವದು ಅಕ್ಷರವೆಂದು, ಅದೇ ದೈವವೆಂದು, ಅದೇ ಗೀತೆಯಲ್ಲಿ ಅಕ್ಷರವೆಂದರೆ ನಾಶವಾಗದಿರುವುದೆಂದು ಅರ್ಥವಾಗುವಂತೆ ತಿಳಿಸಲಾಗಿದೆ. ಹಾಗಿದ್ದರೂ ಓಂ ಎನ್ನುವುದು ದೇವರಾದರೆ, ಆ ದೇವರು ಯಾವುದಕ್ಕೂ ನಾಶವಾಗುವುದಿಲ್ಲ, ನಾವೆಲ್ಲಾ ಯಾವುದಕ್ಕೆ ನಾಶ ವಾಗುತ್ತಿದ್ದೇವೆಂದು ಪ್ರಶ್ನಿಸಿಕೊಂಡರೆ, ಆ ಗೀತೆಯಲ್ಲಿಯೇ ಪ್ರಕೃತಿಯಾದ ಪಂಚಭೂತಗಳಲ್ಲಿಯೇ ಸಮಸ್ತ ಜೀವರಾಶಿಗಳು ಹುಟ್ಟುತ್ತಾ ಸಾಯುತ್ತಿವೆ ಎಂದು, ಜಿವರಾಶಿಗಳನ್ನು ಸಾಯಿಸುವುದು ಹುಟ್ಟಿಸುವುದು ಪ್ರಕೃತಿಯೇ ನಾನು ನಿಮಿತ್ತಮಾತ್ರನಾಗಿ ನೋಡುತ್ತಿದ್ದೇನೆಂದು, ಪ್ರಕೃತಿ ಎಲ್ಲಾ ನಾಶವಾದರೂ ನಾನು ನಾಶವಾಗದಿರುವವನೆಂದು, ಉತ್ತರ ಸಿಗುತ್ತದೆ. ಅಂತದರಲ್ಲಿ ಪಂಚಮಕ್ಕು ಅಕ್ಷರವಾದುದು ಪಂಚಾಕ್ಷರಿ ಎಂದು ಸುಲಭವಾಗಿ ಅರ್ಥವಾಗುತ್ತದೆ. ಆದರೆ ಈ ದಿನ ನಾವು ಯೋಚಿಸುತ್ತಿಲ್ಲ. ಆದ್ದರಿಂದ ಎಲ್ಲಾ ವಿಷಯಗಳು ಮರೆಯಲ್ಲಿ ಬಿದ್ದುಹೋಗಿವೆ.

ಪೂರ್ವದಲ್ಲಿ ಪಂಚಾಕ್ಷರಿ ಮಂತ್ರ ಒಂದೇ ಇತ್ತು. ಆಗ ಇತರ ಮಂತ್ರಗಳು ಇಲ್ಲ. ಕಾಲ ಕಳೆದುಹೋದಂತೆಲ್ಲ ಪಂಚಾಕ್ಷರಿ ಮಂತ್ರ ಪ್ರಭಾವ ತಿಳಿಯದೆಹೋಗಿ, ಮತ್ತೆಸ್ವಲ್ಪ ಕಾಲಕ್ಕೆ ಮನುಜರಲ್ಲಿಯೇ ಕೆಲವು ಗುಂಪುಗಳು ಏರ್ಪಟ್ಟು ಪಂಚಾಕ್ಷರಿ ಮಂತ್ರವು ಶೈವರದೆಂದು ಬಳಕೆಗೆ ಬಂತು. ನಂತರ ಬಂದಿರುವ ವೈಷ್ಣವರು ನಮಗೊಂದು ಮಂತ್ರ ಬೇಕೆಂದು **ಓಂ ನಮೋ ನಾರಾಯಣಾಯ** ಎಂದು ಸೃಷ್ಟಿಸಿಕೊಂಡಿದ್ದಾರೆ. ಹಾಗೆ ಎಷ್ಟೋ ಜನ ಎಷ್ಟೋ ಮಂತ್ರಗಳು ತಯಾರು ಮಾಡಿದಾಗ ಈ ದಿನ ಕೆಲವು ಇವೆ. ಎಷ್ಟು ಇದ್ದರೂ ಎಲ್ಲವುದಕ್ಕಿಂತ ಮೀರಿದ ಮಂತ್ರ ಪಂಚಾಕ್ಷರಿಯೇ ಎಂದು ತಿಳಿಯಬೇಕು. ಅದು ಸಹ ಅದರ ಅರ್ಥ ತಿಳಿದಾಗಲೇ ಅದು ಎಲ್ಲವುದಕ್ಕಿಂತ ಅಧಿಕವೆಂದು ತಿಳಿಯುತ್ತದೆ ಆದ್ದರಿಂದ **ಓಂ ನಮಃ ಶಿವಾಯ** ಎನ್ನುವ ವಾಕ್ಯದಲ್ಲಿನ ಅರ್ಥ ಪೂರ್ತಿ ಅವಗಾಹನೆ ಮಾಡಿಕೊಳ್ಳಿ. ಹೊಸದೆಲ್ಲಾ ಹೇಳಿ ನಮ್ಮನ್ನು ಗೊಂದಲಕ್ಕೀಡು ಮಾಡುತ್ತಿದ್ದಾನೆಂದು ನನ್ನನ್ನು ಬೈಯ್ದುಕೊಳ್ಳಬೇಡಿ. ತಿಳಿಯದಿರುವುದು ತಿಳಿದುಕೊಳ್ಳುವುದರಲ್ಲಿಯೇ ಸಾರಾಂಶವಿದೆಯೆಂದು ಗಮನಿಸಿರಿ.

| | | | | | |
|---|---|---|---|---|---|
| ಓಂ | ನ | ಮಃ | ಶಿ | ವಾ | ಯ |
| ↓ | ↓ | ↓ | ↓ | ↓ | ↓ |
| ಪರಮಾತ್ಮ | ಆಕಾಶ | ಗಾಳಿ | ಅಗ್ನಿ | ನೀರು | ಭೂಮಿ |

# ಪೋತು

ಸಮಾಜದಲ್ಲಿ ಪೋತು, ಪೆಂಟಿ ಎಂದು ಗಂಡು ಹೆಣ್ಣನ್ನುದ್ದೇಶಿಸಿ ಅನ್ನುತ್ತಿರುತ್ತಾರೆ. ಒಂದು ಕೆಲಸವನ್ನು ಸಮರ್ಥವಾಗಿ ಮಾಡಿದಾಗ ಇವನುಕಣೋ ಗಂಡಸು ಎಂದು ಹೇಳುವುದು ನಡೆಯುತ್ತಿದೆ. ಸಮರ್ಥವಾಗಿ ಮಾಡದವನು ಹೆಣ್ಣಿಗೆ ಸಮಾನ. ಅಷ್ಟೇತಕ್ಕೆ ಚೆನ್ನಾಗಿ ನಿದ್ರೆಹೋಗುವವನನ್ನು ನಿದ್ರೆಪೋತು ಎನ್ನುತ್ತಾರೆ. ಹೆಚ್ಚಾಗಿ ಮಾತನಾಡುವವನನ್ನು ವದರುಪೋತ ಅನ್ನುತ್ತಾರೆ. ಹಾಗೆಯೇ ತಿನ್ನುವವನನ್ನು ತಿಂಡಿಪೋತು ಎನ್ನುತ್ತಾರೆ. ಯಾವ ಕೆಲಸದಲ್ಲಾದರು ಸಮರ್ಥನಾದವನನ್ನು ಆ ಕೆಲಸಕ್ಕೆ ನಂತರ ಪೋತಾಗಿ ಅಂದರೆ ಗಂಡಸಾಗಿ ಹೇಳುವುದು ನಡೆಯುತ್ತಿದೆ. ಗತ ಕಾಲದಲ್ಲಿ ಒಬ್ಬ ಗುರು ಹತ್ತಿರ ಕೆಲವರು ಶಿಷ್ಯರಿದ್ದರಂತೆ, ಅವರಲ್ಲಿ ತಿಂಡಿಪೋತರು, ವದರುಪೋತರು, ನಿದ್ರೆಪೋತರು, ಸೋಮಾರಿಪೋತರು ಮೊದಲಾದ ಅನೇಕ ವಿಧಗಳಾದ ಪೋತರಿದ್ದರಂತೆ. ಗುರುಗಳು ಜ್ಞಾನವೆಷ್ಟು ಹೇಳಿದರು ಎಲ್ಲವೂ ಕೇಳಿದರೂ ಅವರಲ್ಲಿ ಸ್ವಲ್ಪ ಸಹ ಬದಲಾವಣೆ ಬರಲಿಲ್ಲವಂತೆ. ಅವರು ಪೋತರಾಗಿರುವುದು ತಿಳಿದ ಗುರುಗಳು ಮೌನವಾಗಿ ಗ್ರಹಿಸುತ್ತಾ ಅವರು ಇನ್ನು ಸ್ವಲ್ಪಕಾಲಕ್ಕಾದರು ಬದಲಾಗುವುದಿಲ್ಲವಾ ಅಂದುಕೊಂಡನಂತೆ. ಎಷ್ಟು ಕಾಲ ನೋಡಿದರು ಶಿಷ್ಯರಲ್ಲಿ ಬದಲಾವಣೆ ಬಾರದೆಹೋಗಿ ಅವರ ಪ್ರತ್ಯೇಕತೆಗಳು ಮತ್ತಷ್ಟು ಗಟ್ಟಿಪಡುತ್ತಿರುವುದು ಗಮನಿಸಿದ ಗುರುಗಳು ಶಿಷ್ಯರತ್ತಿರ ಹೀಗೆ ಹೇಳಿದನಂತೆ.

ಪ್ರಪಂಚದಲ್ಲಿ ಹುಟ್ಟಿದ ಪ್ರತಿ ಜೀವರಾಶಿ ಪ್ರಕೃತಿಯೊಂದಿಗೆ ಸಮ್ಮೇಳನ ವಾಗಿ, ಜೀವಿಯು ತನ್ನ ಸ್ವರೂಪವಾದ ಪುರುಷನೆಂದು ತಿಳಿಯದೆ ಹೋಗಿ,

ಪ್ರಕೃತಿ ಲಕ್ಷಣಗಳು ಅದರ ಧರ್ಮಗಳು ತನ್ನಲ್ಲಿ ಸೇರುವುದರಿಂದ ಜೀವಿಯು ಸಹ ಪ್ರಕೃತಿಯಲ್ಲಿ ಭಾಗವಾಗಿ ಹೋಗಿದ್ದಾನೆ. ಜೀವಿಯು ಪುರುಷನ ಅಂಶವಾದರೂ ಸ್ತ್ರೀಯಂತೆ ಇದ್ದಾನೆ. ಸ್ತ್ರೀ ಲಕ್ಷಣಗಳಿರುವ ಜೀವಾತ್ಮ ನಿಜಪುರುಷ ನಾದವನನ್ನು ತಿಳಿದಾಗ ಅವನನ್ನು ಸೇರಿದಾಗ ಪುರುಷನೇ ಆಗುತ್ತಾನೆ. ಆದರೆ ಪ್ರಪಂಚದಲ್ಲಿ ಎಲ್ಲವುದರಲ್ಲಿ ಗಂಡಸೆಂದು ಹೆಸರುವಾಸಿಯಾದ ನೀವು, ಪರಮಾತ್ಮ ಜ್ಞಾನದಲ್ಲಿ ಗಂಡಸಾಗಿಲ್ಲ. ನೀವು ನಿದ್ರೆಪೋತರು ತಿಂಡಿಪೋತರು ಮತ್ತು ಯಾವ ಪೋತುಗಳಾಗಲಿ ಜ್ಞಾನ ಪೋತರಾಗಬೇಕೆಂದು ಕೋರುತ್ತಿದ್ದೇವೆ. ಆಸೆಯಲ್ಲಿ ಪೂರ್ತಿ ಲಗ್ನವಾಗಿ ಆಸೆಪೋತಾದವನು ಆಸೆಯಲ್ಲಲ್ಲದೆ ಜ್ಞಾನದಲ್ಲಿ ಪೋತಾಗಬೇಕು. ಆಸೆಪೋತು ಅನ್ನುವ ಪದದಲ್ಲಿ ಆಸೆ ಹೋಗಿ ಕೇವಲ ಪೋತು ಮಾತ್ರ ಉಳಿಯಬೇಕು. ಆದ್ದರಿಂದ ಅವರವರ ಪ್ರಪಂಚ ಪ್ರತ್ಯೇಕತೆಗಳನ್ನು ಬಿಟ್ಟು, ದೇವರಲ್ಲಿ ಪ್ರತ್ಯೇಕತೆಹೊಂದಿದವರು ನಿಜವಾದ ಪೋತರಾಗುತ್ತಾರೆ. ಅಂದರೆ ಪರುಷನೇ ಆಗುತ್ತಾನೆ. ಪ್ರಕೃತಿ ಅಲ್ಲದವನೆಂಬ ಮಾತು. ಹಾಗಲ್ಲದೆ ಯಾವ ವಿದ್ಯೆಯಲ್ಲಿ ಪೋತಾದರು ಅಷ್ಟರವರೆಗೆ ಗಂಡಸಾಗಲಿ, ಅವನು ಆಧ್ಯಾತ್ಮಿಕ ರೀತಿಯಲ್ಲಿ ಸ್ತ್ರೀ ಎಂದೇ ಹೇಳಬಹುದು. ಆತ್ಮ ಪರವಾಗಿ ಗಂಡಸಾದರೆ ಎಲ್ಲವನ್ನು ಮೀರಿದ ಬ್ರಹ್ಮವಿದ್ಯೆಯಲ್ಲಿಯೇ ನಾನು ಗಂಡಸೆಂದು ಧೈರ್ಯವಾಗಿ ಹೇಳಬಹುದು. ಬ್ರಹ್ಮವಿದ್ಯೆಯಲ್ಲಿ ಆತ್ಮವನ್ನು ತಿಳಿಯದವನು ಉಳಿದ ಯಾವ ವಿದ್ಯೆಗಳು ತಿಳಿದರೂ ಅವುಗಳಲ್ಲಿ ಯಾವ ಪೋತಾದರು ಪ್ರಯೋಜನೆ ಇಲ್ಲ. ನಿಜವಾಗಲು ಅವನು ಸ್ತ್ರೀ ಎಂದೇ ಹೇಳಬಹುದು. ಆದ್ದರಿಂದಲೇ ಮೀರಾಬಾಯಿ ಒಬ್ಬ ಗುರು ಶಿಷ್ಯರಜೊತೆ **"ಶ್ರೀಕೃಷ್ಣನೊಬ್ಬನೇ ಗಂಡಸೆಂದು ಕೊಂಡಿದ್ದೆನು ಇಲ್ಲಿ ನೀವು ನಿಮ್ಮ ಗುರುಗಳು ಗಂಡಸರು ಇದ್ದಾರೆಂದು ನನಗೆ ತಿಳಿದಿಲ್ಲವೇ!"** ಅಂದಳಂತೆ ಆ ಮಾತನ್ನು ಕೇಳಿದ ಗುರುಗಳು ವಾಸ್ತವವನ್ನು ಗ್ರಹಿಸಿದವನಾಗಿ ಆಕೆಗೆ ನಮಸ್ಕರಿಸಿ ನಾವು ಯಾರು ಪುರುಷರು ಅಲ್ಲ. ನಾವೆಲ್ಲರೂ ಪ್ರಕೃತಿಯಲ್ಲಿನ ಸ್ತ್ರೀಯರೇ ಅಂದನಂತೆ. ಗಂಡಸು ಅಲ್ಲವೆಂದು ಅಂತಹ ಗುರುವೇ ಒಪ್ಪಿಕೊಂಡಿದ್ದಾನೆ. ಈಗ ನೀವು ಯಾವುದರಲ್ಲಿ ಪೋತಾಗಿ ಇದ್ದೀರೋ ನಾನು ಪ್ರತ್ಯೇಕಿಸಿ ಹೇಳಬೇಕಾದ ಕೆಲಸವಿಲ್ಲ.

ನೀವು ವಾಸ್ತವವಾದ ಪೋತುಗಳಾಗಿ ಬದಲಾಗಬೇಕೆಂದು ನಾನನ್ನುತ್ತಿದ್ದೇನೆ. ಆದರೆ ವಾಸ್ತವವಾಗಿ ಪುರುಷ ಲಕ್ಷಣಗಳು ನಿಮ್ಮಲ್ಲಿ ಬೆಳೆಯುತ್ತಿಲ್ಲ. ಆದ್ದರಿಂದ ಈಗಿನಿಂದಾದರು ಭೌತಿಕ ಪುರುಷ ಲಕ್ಷಣಗಳ ಮೇಲೆ ಧ್ಯಾಸ ಇಡದೆ, ಪ್ರಕೃತಿ ಲಕ್ಷಣಗಳನ್ನು ಅವುಗಳ ಧರ್ಮವನ್ನು ಬಿಟ್ಟು, ಆತ್ಮ ಪರವಾಗಿ ಪುರುಷತ್ವವನ್ನು ಸಂಪಾದಿಸಿ ಪುರುಷೋತ್ತಮನಾಗಿ ಬದಲಾಗ ಬೇಕೆಂದು ತಿಳಿಸುತ್ತಿದ್ದೇನೆ. ಈಗಲಾದರೂ ನೀನು ಯಾವುದರಲ್ಲಿ ಪೋತನೋ ಹಿಂದಿರುಗಿ ನೋಡಿಕೊಂಡು, ಯಾವುದರಲ್ಲಿ ಪೋತನಾಗಬೇಕೋ ಯೋಚಿಸಿ ಪ್ರಯತ್ನಿಸು.

ಇಲ್ಲಿಯವರೆಗು ನಪುಂಸಕರಾದರೂ ಪರವಾಗಿಲ್ಲ. ನನ್ನ ಹತ್ತಿರ ಗಂಡಸುತನಕ್ಕೆ ಒಳ್ಳೆಯ ಔಷಧಿ ಇದೆಯೆಂದು ಅಂದನಂತೆ ಆ ಗುರು. ಅವರ ಸಂಗತಿ ಹಾಗಿಟ್ಟು ನಮ್ಮ ಸಂಗತಿ ನೋಡಿಕೊಳ್ಳೋಣ. ನಾವೂ ಗಂಡಸರಾಗೋಣ.

# ಅವದೂತ

ಇಂದೂಮತದಲ್ಲಿಯೂ, ಇಸ್ಲಾಮ್ ಮತದಲ್ಲಿಯೂ. ಕ್ರೈಸ್ತವ ಮತದಲ್ಲಿಯೂ ದೂತ ಅನ್ನುವ ಪದ ಪರಿಚಯ ಇರುವುದೇ. ದೂತ ಅಂದರೆ ಸಮಾಚಾರವನ್ನು ತರುವವನೆಂದು ಅರ್ಥ. ಇಸ್ಲಾಮ್ ಮತದಲ್ಲಿ ದೇವರ ಹತ್ತಿರದಿಂದ ಕಳುಹಿಸಿದವನನ್ನು ಮತ್ತು ದೇವರ ಸಮಾಚಾರವನ್ನು ತಂದವನನ್ನು ದೇವದೂತ ಅನ್ನುತ್ತಿದ್ದಾರೆ. ಕ್ರೈಸ್ತವ ಮತದಲ್ಲಿ ಸಹ ಅದೇ ಹೆಸರು, ಅದೇ ಅರ್ಥ ಇದೆ. ಎಲ್ಲಾ ಮತಗಳಲ್ಲಿ ದೇವದೂತ ಅನ್ನುವ ಪದ ಇದೆ. ಒಂದು ಇಂದೂಮತದಲ್ಲಿ ಮಾತ್ರ ಅವದೂತ ಅನ್ನುತ್ತಿದ್ದಾರೆ. ಅವದೂತ ಎಂದರೆ ಇಂದೂ ಮತದಲ್ಲಿ ಮಾತ್ರ ವಾಸ್ತವವಾಗಿ ನಿಜಾರ್ಥ ತಿಳಿದಿಲ್ಲ. ಇಂದೂಮತದಲ್ಲಿ ಅವದೂತ ಎಂದರೆ ಹುಚ್ಚನೆಂದು ಅರ್ಥ ಮಾಡಿಕೊಂಡಿದ್ದಾರೆ. ಆ ಲೆಕ್ಕಪ್ರಕಾರ ಕೊಳಚೆಕಾಲುವೆಯಲ್ಲಿ ನೀರು ಕುಡಿಯುವವನನ್ನು, ಶುಭ್ರತೆ ಸ್ವಲ್ಪವೂ ತಿಳಿಯದಂತೆ ಮಣ್ಣಿನಲ್ಲಿಯೂ, ಮಲದಲ್ಲಿಯೂ ಹೊರಳಾಡುವವನನ್ನು, ಆಹಾರ ಯಾವುದು

ಎಂದು ತಿಳಿಯದವನನ್ನು, ಅಸಲಿಗೆ ಮತಿ ಸ್ಥಿಮಿತವಿಲ್ಲದ ಹುಚ್ಚನನ್ನು ಅವದೂತ ಅನ್ನುವುದು ನಡೆಯುತ್ತಿದೆ. ತನ್ನ ಶರೀರದ ಮೇಲೆ, ಶುಭ್ರತೆ ಅಶುಭ್ರತೆ ಮೇಲೆ ಅವಗಾಹನೆ ಇಲ್ಲದವನನ್ನು ಅವದೂತ ಅನ್ನುವುದೇ ಅಲ್ಲದೆ ಅವನಲ್ಲಿ ದೈವತ್ವ ಇದೆಯೆಂದು, ಮಹಿಮೆ ಇದೆಯೆಂದು ನಮಸ್ಕರಿಸುವುದು, ಅಂತಹವನಿಗೆ ಪೂಜೆಗಳು ಮಾಡುವುದು ಪೂರ್ತಿ ಅಜ್ಞಾನದ ಕೆಲಸವೇ ಆಗುತ್ತದೆ. ಯಾವುದು ಜ್ಞಾನ, ಯಾವುದು ಅಜ್ಞಾನವೆಂದು ತಿಳಿಯದವರು ಹುಚ್ಚರನ್ನು ದೊಡ್ಡ ಜ್ಞಾನಿಗಳು ಅಂದುಕೊಳ್ಳುವುದು, ನಿಜವಾದ ಜ್ಞಾನಿಗಳನ್ನು ಅಜ್ಞಾನಿಗಳಾಗಿ ಹೋಲಿಸಿಕೊಳ್ಳುವುದು ನಡೆಯುತ್ತಿದೆ. ಆದ್ದರಿಂದ **ಎಷ್ಟೋ ದೊಡ್ಡ ಔನ್ನತ್ಯ ಹೊಂದಿದ ಇಂದೂಮತ ಇಂದೂಗಳಿಗೆ ಅರ್ಥವಾಗದೆ ಕೊನೆಗೆ ಹಿಂದೂಮತವಾಗಿ ಬದಲಾಗಿಹೋಗಿದೆ.**

ಅಜ್ಞಾನದಲ್ಲಿ ಮುಳುಗಿ ಹೋಗಿರುವ ಇಂದೂಮತವನ್ನು ಉದ್ಧರಿಸುವುದಕ್ಕೆ ಐದುಸಾವಿರ ವರ್ಷಗಳ ಪೂರ್ವದಲ್ಲಿ ಶ್ರೀಕೃಷ್ಣನು ಬಂದಿದ್ದಾನೆ. ಶ್ರೀಕೃಷ್ಣನು ಇಸ್ಲಾಮ್ ಮತದ ಪ್ರಕಾರ ಪೈಗಂಬರ್ (ಖಲೀಪಾ) ಆದಾಗ, ಕ್ರೈಸ್ತ ಮತದ ಪ್ರಕಾರ ದೇವರ ಕುಮಾರನು ಅಥವಾ ದೇವರ ದೂತ ಎನ್ನಬಹುದು. ಇಂದೂಮತದ ಪ್ರಕಾರ ಅವದೂತ ಅಥವಾ ಭಗವಂತನು ಎನ್ನಬಹುದು. ಭಗವಂತನು ಎನ್ನುವ ಪದಕ್ಕೆ ವಿಪ್ಲವಾತ್ಮಕ ಅರ್ಥವಿರುವಾಗ ಅದು ಯಾರಿಗೂ ತಿಳಿಯದಂತೆ ಹೋಗಿದೆ. ಹಾಗೆ ಅವದೂತ ಎನ್ನುವ ಪದಕ್ಕೂ ಸಹ ಅರ್ಥ ತಿಳಿಯದೆ ಹುಚ್ಚರೆಲ್ಲರನ್ನು ಅವದೂತ ಎಂದು, ಸ್ವಾಮಿಗಳೆಲ್ಲರನ್ನು ಭಗವಂತನೆಂದು ಅನ್ನುವುದು ನಡೆಯುತ್ತಿದೆ. ಎಷ್ಟು ದೊಡ್ಡ ಸ್ವಾಮಿಗಳಾದರು ಭಗವಂತರು ಆಗುವುದಿಲ್ಲ, ಹುಚ್ಚರೆಲ್ಲರೂ ಅವದೂತರು ಆಗುವುದಿಲ್ಲವೆಂದು ತಿಳಿಯಬೇಕು. ಅಣುವಣುವಿನಲ್ಲಿ ಪ್ರಪಂಚವೆಲ್ಲಾ ವ್ಯಾಪಿಸಿದ ಪರಮಾತ್ಮನಿಂದ ಬಂದಿರುವವನನ್ನೆ ಭಗವಂತನೆಂದಾಗಲಿ ಅಥವಾ ಅವದೂತ ಎಂದಾಗಲಿ ಅನ್ನಬಹುದು. ಭಗವಂತನ ಕುರಿತಾದ ವಿವರ ಮೊದಲು ಹೇಳಲಾಗಿದೆ. ಆದ್ದರಿಂದ ಇಲ್ಲಿ ಅವದೂತ ಒಂದರ ವಿವರ ಮಾತ್ರ ತಿಳಿದುಕೊಳ್ಳೋಣ. ದೇವರ ಹತ್ತಿರದಿಂದ

ಬಂದವನನ್ನು, ದೇವರ ಸಮಾಚಾರದೊಂದಿಗೆ ಬಂದಿರುವವನನ್ನು ಅವದೂತ ಅನ್ನುತ್ತಿದ್ದೇವೆ. ದೇವರು ಅಂದರೆ ಪರಮಾತ್ಮ ಪ್ರಪಂಚವೆಲ್ಲಾ ವ್ಯಾಪಿಸಿದ್ದಾನೆಂದು ಹೇಳುತ್ತಿದ್ದೇವೆ. ಆದರೆ ಪ್ರಪಂಚವೆಷ್ಟು ಇದೆಯೋ, ಎಲ್ಲಿಯವರೆಗಿದೆಯೋ ಯಾರಿಗೂ ಗೊತ್ತಿಲ್ಲ. ಜೀವಾತ್ಮಗೂ, ಆತ್ಮಗೂ ಆಕಾರ ಅವಧಿ ಇದೆಯೆಂದು ಹೇಳಿಕೊಳ್ಳುವ ನಾವು, ಪರಮಾತ್ಮಕ್ಕೆ ಆತ್ಮ, ಜೀವಾತ್ಮನಂತೆ ಆಕಾರವಾಗಲಿ ಅವಧಿಯಾಗಲಿ ಇಲ್ಲವೆಂದು ಹೇಳುತ್ತಿದ್ದೇವೆ. ಪರಮಾತ್ಮನಿಗೆ ಅವಧಿಗಳಾಗಲಿ, ಆಕಾರವಾಗಲಿ, ಹೆಸರಾಗಲಿ ಇಲ್ಲ. ಈ ಮಾತನ್ನೇ ಎಲ್ಲಾ ಮತಗಳಲ್ಲಿ ಸಹ ಹೇಳಲಾಗುತ್ತಿದೆ. ಎಲ್ಲೆಗಳಿಲ್ಲದ ಪರಮಾತ್ಮವೊಂದರ ಸಮಾಚಾರವನ್ನು ಪರಮಾತ್ಮ ಹತ್ತಿರದಿಂದ ಹೊತ್ತುಕೊಂಡು ಬಂದವನನ್ನು ದೂತ ಎನ್ನುತ್ತಿದ್ದೇವೆ. ಅವನನ್ನೇ ಅವದೂತ ಎಂದು ಸಹ ಅನ್ನುತ್ತಿದ್ದೇವೆ. ಅವಧಿಗಳಿಲ್ಲದ ಪರಮಾತ್ಮ ವಿಷಯ ಪರಮಾತ್ಮನಿಗೇ ತಿಳಿಯಬೇಕಾಗಲಿ ಸಾಧಾರಣ ಮನುಷ್ಯನಿಗೆ ತಿಳಿದಿಲ್ಲ. ಆದ್ದರಿಂದ ದೂತನಾಗಿ ಹುಟ್ಟಿದವನು ಪರಮಾತ್ಮ ಅಂಶದಿಂದಲೇ ಹುಟ್ಟಿರುತ್ತಾನೆ. ಅಂದರೆ ಅವನು ಸಹ ಪರಮಾತ್ಮದೊಳಗಿರುವವನೇ, ಪರಮಾತ್ಮ ನಂತಹವನೇ, ಪರಮಾತ್ಮನಿಗೂ, ದೂತನಾಗಿ ಬಂದವನಿಗೂ ಬಹಳ ವ್ಯತ್ಯಾಸಗಳಿದ್ದರೂ ದೂತನಲ್ಲಿ ಸಹ ಪರಮಾತ್ಮ ಅಂಶವೇ ಇರುತ್ತದೆ. ಶರೀರವಿಲ್ಲದ ಪರಮಾತ್ಮ ವೊಂದರ ಅಂಶ ಶರೀರ ಧರಿಸಿ ಹುಟ್ಟುವುದೇ ದೂತ ಒಂದರ ಜನ್ಮ. ಅಂತಹ ದೂತನೇ ಪರಮಾತ್ಮನನ್ನು ಕುರಿತು ಅಂದರೆ ತನ್ನನ್ನು ಕುರಿತು ಪೂರ್ತಿ ಸಮಾಚಾರ ವಿವರವಾಗಿ ತಿಳಿಸುತ್ತಾನೆ. ಹಾಗೆ ದೂತ ಅಲ್ಲದವನು ಭೂಮಿ ಮೇಲೆ ಎಷ್ಟು ದೊಡ್ಡ ಸ್ವಾಮಿ ಅದರೂ ಪರಮಾತ್ಮವೊಂದರ ಜ್ಞಾನದ ಬಗ್ಗೆ ಅವಗಾಹನೆ ಇರುವುದಿಲ್ಲ. ಶ್ರೀಕೃಷ್ಣನಂತೆ, ಯೇಸುಪ್ರಭುವಿನಂತೆ ದೂತನಲ್ಲದವನು ದೇಶದಲ್ಲಿ ಎಷ್ಟು ದೊಡ್ಡ ಸ್ವಾಮೀಜಿಯಾದರೂ, ಎಷ್ಟೋ ಚೆನ್ನಾಗಿ ವಿವರವಾಗಿ ಚಾಕಚಕ್ಯವಾಗಿ ಬೋಧನೆಗಳು ಹೇಳುವವನಾದರೂ, ಪರಮಾತ್ಮ ಜ್ಞಾನವನ್ನು ಕುರಿತು ತಿಳಿಯದವನೆಂದೇ ಹೇಳಬಹುದು. ಪರಮಾತ್ಮನ ಬಗ್ಗೆ ವಾಸ್ತವ ಜ್ಞಾನ ಹೇಳುವ ಸಾಮರ್ಥ್ಯ ಪರಮಾತ್ಮನಲ್ಲಿ ಭಾಗವಾಗಿ ಹುಟ್ಟಿದ ಅವದೂತನಿಗೇ ಸಾಧ್ಯವಾಗುತ್ತದೆ. ಎಲ್ಲೆಗಳಿಲ್ಲದ ಅಂದರೆ ಅವಧಿಗಳಿಲ್ಲದವನನ್ನು ಕುರಿತು

ಹೇಳುವವನನ್ನು, ಅವಧಿಗಳಿಲ್ಲದವನ ಸಮಾಚಾರವನ್ನು ಹೊತ್ತುಕೊಂಡು ಬಂದವನನ್ನು ಅವದೂತ ಎನ್ನುವುದು ನಡೆದಿದೆ. ಅವದೂತ ಎಂದರೆ ಅವಧಿಗಳಿಲ್ಲದ ಸಮಾಚಾರ ಇರುವವನೆಂದು ಅರ್ಥ. ಅವಧಿಗಳಿಲ್ಲದ ಸಮಾಚಾರ ಇರುವವನು ಅವದೂತನಾಗಿದ್ದು, ಅವದೂತ ಪರಮಾತ್ಮನಲ್ಲಿ ಭಾಗವಾಗಿದ್ದು ಶರೀರ ಧರಿಸಿ ತಾಯಿಗರ್ಭದಿಂದ ಸಜೀವವಾಗಿ ಹುಟ್ಟುತ್ತಿದ್ದಾನೆ. ಹಾಗೆ ಭಗದಿಂದ ಹುಟ್ಟಿದವನನ್ನು ಭಗವಂತನನ್ನಬಹುದು. ತಾಯಿ ಗರ್ಭದಿಂದ ಹುಟ್ಟಿದವನನ್ನು ಮತ್ತು ಅವಧಿಗಳಿಲ್ಲದ ಸಮಾಚಾರ ಇಲ್ಲದವನನ್ನು ಅವದೂತ ಎಂದಾಗಲಿ, ಭಗವಂತನೆಂದಾಗಲಿ ಅನ್ನಬಾರದು. ಈ ಕಾಲದಲ್ಲಿ ಬಹಳಜನ ಸ್ವಾಮಿಗಳು ಭಗವಾನ್ ಎನ್ನುವ ಪದವನ್ನು ತಮ್ಮ ಹೆಸರಿಗಿಂತ ಮೊದಲೇ ತಗಲಿಸಿ ಕೊಂಡಿದ್ದಾರೆ. ನಿಜವಾದ ಭಗವಂತನು ಭೂಮಿಮೇಲೆ ಹುಟ್ಟಿದಾಗಲೇ ನಾನು ಭಗವಂತನೆಂದು ಅವದೂತನೆಂದು ಹೇಳಿಕೊಳ್ಳಲಿಲ್ಲ. ಅವದೂತನನ್ನು ಅಥವಾ ಭಗವಂತನನ್ನು ಭೂಮಿಮೇಲೆ ಕಂಡುಕೊಳ್ಳಬೇಕೆಂದರೆ ಎಷ್ಟೋ ಜನ್ಮಗಳ ಜ್ಞಾನಸಂಸ್ಕಾರ ಇರಬೇಕು. ಆದ್ದರಿಂದ ಸಾಮಾನ್ಯ ಪ್ರಜೆಗಳು ನಿಜವಾದ ಅವದೂತನನ್ನು ಕಂಡುಕೊಳ್ಳಲಾರರು. ಪರಮಾತ್ಮ ಅಂಶ ಭೂಮಿ ಮೇಲಕ್ಕೆ ಕಳ್ಳನಂತೆ ಬಂದು ಕಳ್ಳನಂತೆ ಯಾರಿಗೂ ತಿಳಿಯದಂತೆ ಹೋಗುತ್ತಾನೆಂದು ಹೇಳಲಾಗಿದೆ. ಈ ವಿಷಯವಾಗಿ ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ **ಅವಜಾನಂತಿ ಮಾಂ ಮೂಢಾ ಮಾನುಷೀಂ ತನು ಮಾಶ್ರಿತಮ್** ಅನ್ನುವ ಶ್ಲೋಕದಲ್ಲಿಯು ಹೇಳಲಾಗಿದೆ. ಅವಧಿಗಳಿಲ್ಲದ ಅವದೂತನನ್ನು ಗುರುತಿಸಲಾರದೆ ಹುಚ್ಚರನ್ನು ಅವದೂತರೆಂದುಕೊಳ್ಳುವುದು ಬಹಳ ತಪ್ಪು. ಅವದೂತನಾದವನು ಅಷ್ಟು ಸುಲಭವಾಗಿ ಅರ್ಥವಾಗುವುದಿಲ್ಲವೆಂದು ತಿಳಿಯಬೇಕು.

# ಹೆಂಗಸರು – ಐದೋತನ

ಜಗತ್‌ಪತಿ ಎಂದರೆ ಜಗತ್ತಿಗೆಲ್ಲಾ ಭರ್ತ (ಪತಿ) ಆಗಿರುವವನೆಂದು ಅರ್ಥ. **ಜ** ಎಂದರೆ ಹುಟ್ಟುವುದು **ಗತಿ** ಎಂದರೆ ಗತಿಸುವುದೆಂದು ಬಹಳಜನರಿಗೆ

ಗೊತ್ತು. ಹುಟ್ಟುವುದು ಗಿಟ್ಟುವು (ಸಾಯುವು) ದನ್ನನುಸರಿಸಿ ಜಗತಿ ಎಂದು ಹೆಸರು ಇಟ್ಟಾಗ, ಹುಟ್ಟಿ ಗಿಟ್ಟುವ ಮಾನವಾಳಿಗೆ ಮತ್ತು ಸಮಸ್ತ ಜೀವರಾಶಿಗಳಿಗೂ ಪತಿ ಒಬ್ಬನು ಇದ್ದಾನೆ. ಅವನನ್ನೇ ಜಗದ್ಭರ್ತ (ಪತಿ) ಅನ್ನುತ್ತಿದ್ದೇವೆ. ಜಗತ್ತಿಗೆಲ್ಲಾ ಪತಿಯಾದವನು ಪರಮಾತ್ಮ ಒಬ್ಬನೇ. ಪ್ರಪಂಚದಲ್ಲಿ ಸ್ತ್ರೀಯರಿಗೆ ತಾಳಿ ಕಟ್ಟಿದವನು ಭೌತಿಕ ಪತಿಯಾದರೆ, ಜ್ಞಾನಪರವಾಗಿ ಜನ್ಮಕೊಟ್ಟ ಪರಮಾತ್ಮನೇ ಎಲ್ಲರಿಗೂ ಪತಿಯೆಂದು ತಿಳಿಯಬೇಕು. ನಾವು ಅಂದುಕೊಂಡರು ಅಂದುಕೊಳ್ಳದೆಹೋದರು ಎಲ್ಲರಿಗೂ ಪತಿ ಆ ಪುರುಷೋತ್ತಮನೇ. ಸ್ತ್ರೀಗೆ ಐದೋತನ ತಾಳಿಕಟ್ಟಿದ ಪತಿ (ಭರ್ತ) ಯಾದರೆ, ಸ್ತ್ರೀಗೂ ಪುರುಷನಿಗೂ ಎಲ್ಲರಿಗೂ ಐದೋತನ ಜಗದ್ಭರ್ತನಾದ ಪರಮಾತ್ಮನೇ. ಪರಮಾತ್ಮ ಪತಿಯಾದರೆ ನಾವೆಲ್ಲರೂ ಒಂದು ವಿಧವಾಗಿ ಹೆಂಗಸರೇ ಎಂಬಮಾತು. ಹೆಂಗಸರೆಂಬ ಹೆಸರು ಹೇಗೆ ಬಂದಿದೆಯೋ ಸ್ವಲ್ಪ ಆಲೋಚಿಸೋಣ.

ಹಿಂದಿ ಉರ್ದು ಮತ್ತುಬಹಳ ಭಾಷೆಗಳಲ್ಲಿ **ಹೆಂಗಸು (ಆಡ)** ಎಂದರೆ ಅಡ್ಡ ಎಂದು ಅರ್ಥ. ಪೂರ್ವದಲ್ಲಿ ತೆಲುಗು ಭಾಷೆಯಲ್ಲಿ ಸಹ ಅಡ್ಡವನ್ನು ಆಡ ಅನ್ನುತ್ತಿದ್ದರು ಕಾಲಕ್ರಮವಾಗಿ ಅಡ್ಡವಾಗಿ ಬದಲಾಗಿದೆ. ಆಡ (ಹೆಣ್ಣು) ಆಗಲಿ ಅಡ್ಡವಾಗಲಿ ಯಾವುದಕ್ಕೆ ಎಂದು ಯೋಚಿಸಿದರೆ ಜ್ಯೋತಿಷ್ಯಶಾಸ್ತ್ರದಲ್ಲಿ 1ನೇ ಸ್ಥಾನಾಧಿಪತಿಗೆ 7ನೇ ಸ್ಥಾನಾಧಿಪತಿ ಎಂದಿಗೂ ವಿರೋಧವಿದ್ದಂತೆ, ಯೋಗಶಾಸ್ತ್ರದಲ್ಲಿ ಪರಮಾತ್ಮನಿಗೆ ಪ್ರಕೃತಿ (ಮಾಯೆ) ಎನ್ನುವುದು ಎಂದಿಗೂ ವಿರುದ್ಧವಾಗಿದೆ. ಜಗತ್ತಿನಲ್ಲಿ ಪರಮಾತ್ಮ ಪಕ್ಷ, ಪ್ರಕೃತಿ ಪಕ್ಷ ಎನ್ನುವ ಎರಡು ಪಕ್ಷಗಳಲ್ಲಿ ನಾವು ಎಂದಿಗೂ ಪ್ರಕೃತಿ ಪಕ್ಷದಲ್ಲಿಯೇ ಇದ್ದೇವೆ. ಯೋಗಶಾಸ್ತ್ರದ ಪ್ರಕಾರ ಪರಮಾತ್ಮನಿಗೆ ಪ್ರಕೃತಿ ವಿರುದ್ಧವಾದಂತೆ, ಪ್ರಕೃತಿ ಪಕ್ಷವಾದ ನಾವು ಪರಮಾತ್ಮನಿಗೆ ವಿರುದ್ಧ ದಿಕ್ಕಿನಲ್ಲಿಯೇ ನಡೆಯುತ್ತಿದ್ದೇವೆ. ನಮ್ಮಲ್ಲಿಂದ ಯಾರಾದರೂ ಪರಮಾತ್ಮ ಕಡೆ ಪ್ರಯಾಣಿಸಬೇಕೆಂದು ಪ್ರಯತ್ನ ಮಾಡಿದರೆ, ಎಲ್ಲರೂ ಅವನಿಗೆ ವಿರುದ್ಧತೆ ತಿಳಿಸುವುದು ವಾಸ್ತವ. ಒಂದು ಮನೆಯಲ್ಲಿ ಪತಿ ದೇವರ ಮಾರ್ಗದಲ್ಲಿ ಹೋಗಬೇಕೆಂದುಕೊಂಡಾಗ ಪತ್ನಿ ಮತ್ತು ಉಳಿದವರು

ಆತಂಕಪಡಿಸುವುದು, ಒಂದುವೇಳೆ ಪತ್ನಿ ದೇವರ ಕಡೆ ಪ್ರಯಾಣಿಸ ಬೇಕೆಂದುಕೊಂಡಾಗ ಪತಿ ಆತಂಕಪಡಿಸುವುದು ನಡೆಯುತ್ತಿರುವ ಸತ್ಯ. ಸ್ತ್ರೀಯರು ಪುರುಷರು ಎಲ್ಲರೂ ಪ್ರಕೃತಿ ಪಕ್ಷದಲ್ಲಿ ಇರುವುದರಿಂದ ಪರಮಾತ್ಮ ಕಡೆ ಹೋಗಬೇಕೆಂದುಕೊಂಡವನನ್ನು ತಡೆಯುವುದು ಸಹಜವೇ ಅಂದಿದ್ದೇವಲ್ಲವೆ! ಆದ್ದರಿಂದಲೇ ಆತಂಕ ಪಡಿಸುವವರೆಲ್ಲರನ್ನು ಪೂರ್ವದಲ್ಲಿ ಹೆಂಗಸರೆಂಬುವುದು ನಡೆದಿದೆ. ಈ ಕಾಲದಲ್ಲಿ ಹೆಂಗಸರೆಂದರೆ ಕೇವಲ ಸ್ತ್ರೀಯರೆ ಅಂದುಕೊಳ್ಳುವುದು ನಡೆಯುತ್ತದೆ. ಅದು ತಪ್ಪು ಹೆಂಗಸರೆಂದರೆ ಪ್ರಕೃತಿ ಕಡೆಯವರೆಂದು ಅರ್ಥಮಾಡಿಕೊಳ್ಳಬೇಕು. ಪರಮಾತ್ಮ ಪುರುಷನು, ಪ್ರಕೃತಿ ಸ್ತ್ರೀಯೆಂದು ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗಯೋಗದಲ್ಲಿ ಸಹ ಹೇಳಿದ್ದಾರೆ. ಪ್ರಕೃತಿಕಡೆ ಇರುವ ಆಡ ಅನ್ನುವ ಪದಕ್ಕೆ ಸ್ತ್ರೀಯರು ಎನ್ನುವ ಅರ್ಥ ಇದೆ. ಇದರಿಂದ ಕೇವಲ ಭೌತಿಕ ಸ್ತ್ರೀಯರೇ ಹೆಂಗಸರೆಂದು, ಭೌತಿಕ ಪುರುಷಾಕಾರರನ್ನು ಪುರುಷರೆಂದುಕೊಳ್ಳುವುದು ತಪ್ಪು. ಹಾಗೆ ಅಂದುಕೊಳ್ಳದೆ ಪ್ರಕೃತಿಕಡೆ ಇರುವ ಸ್ತ್ರೀ ಪುರುಷರೆಲ್ಲರಿಗೂ ಹೆಂಗಸರೆಂಬ ಹೆಸರು ಅನ್ವಯಿಸುತ್ತದೆಂದು ತಿಳಿಯಬೇಕು.

ಸ್ತ್ರೀ ಪುರುಷರೆಲ್ಲರನ್ನು ಹೆಂಗಸರೆಂದುಕೊಳ್ಳುವುದೇನು, ಪ್ರತ್ಯಕ್ಷವಾಗಿ ನಾನು ಪುರುಷನೆಂದು ಕಾಣಿಸುತ್ತಿದ್ದರೆ ಸ್ತ್ರೀಯಾಗಿ ಹೇಗೆ ಹೋಲಿಸಿಕೊಳ್ಳಬೇಕೆಂದು ಕೆಲವರು ಗಂಡಸರಿಗೆ ಸ್ವಲ್ಪ ಬಾಧೆ ಅನಿಸಿರಬಹುದು. ಅದಕ್ಕೆ ಸಮಾಧಾನ ಏನೆಂದರೆ ವಾಸ್ತವವಾಗಿ ನೀನು ಶರೀರ ಅಲ್ಲ. ನೀನು ಕೇವಲ ಜೀವಾತ್ಮನೆ. ನೀನು ವಾಸಿಸುವ ಶರೀರವನ್ನನುಸರಿಸಿ ನಾನು ಪುರುಷನೆಂದು, ನಾನು ಸ್ತ್ರೀ ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ಶರೀರವನ್ನನುಸರಿಸಿ ಪ್ರಪಂಚಪರವಾಗಿ ಸಮಾಜದಲ್ಲಿ ಸ್ತ್ರೀ ಪುರುಷರು ಅಂದುಕೊಳ್ಳಬಹುದು. ಆದರೆ ಆಧ್ಯಾತ್ಮಿಕದ ಪ್ರಕಾರ ಮೇಲಿನ ಲೆಕ್ಕ ಕೆಲಸಕ್ಕೆ ಬರುವುದಿಲ್ಲ. ಹಾಗೆಂದು ಶರೀರ ಭೇದಗಳು ಏತಕ್ಕಿವೆಯೆಂದು ಕೆಲವರಿಗೆ ಪ್ರಶ್ನೆಬರಬಹುದು, ಅದಕ್ಕೆ ಸಮಾಧಾನ ಏನೆಂದರೆ! ಪರಮಾತ್ಮ ಸೃಷ್ಠಿ ಆದಿಯಲ್ಲಿ ಪ್ರಕೃತಿಯನ್ನು ತಯಾರುಮಾಡಿ ತನಗೆ ಸಾಟಿಯಾಗಿ ಇಟ್ಟುಕೊಂಡಿದ್ದಾನೆ. ಪ್ರಕೃತಿಯಿಂದಲೇ ಸಮಸ್ತವನ್ನು ಸೃಷ್ಠಿಸಿದ್ದಾನೆ. ಪರಮಾತ್ಮ

ತನ್ನನ್ನು ಪುರುಷನಾಗಿ, ಪ್ರಕೃತಿಯನ್ನು ಸ್ತ್ರೀಯಾಗಿ ಹೇಳುತ್ತಾ ನನ್ನಿಂದ ಪ್ರಕೃತಿಯಿಂದ ಸಮಸ್ತವೆಲ್ಲಾ ಸೃಷ್ಠಿಸಲ್ಪಟ್ಟಿದೆ ಎಂದು ಹೇಳಿದ್ದಾನೆ. ಸೃಷ್ಠಿಸಲ್ಪಟ್ಟ ಜೀವಾತ್ಮಗಳಿಗೆ ಸ್ತ್ರೀ ಎಂದರೆ ಏನೋ, ಪುರುಷನೆಂದರೆ ಏನೋ ಅರ್ಥವಾಗುವು ದಿಲ್ಲ. ಆದ್ದರಿಂದ ಪರಮಾತ್ಮ ಜೀವಿಗಳಿಗೆ ಸೃಷ್ಠಿ ವಿವರ ತಿಳಿಯುವಂತೆ ಸ್ತ್ರೀ ಗರ್ಭ ಧರಿಸುತ್ತದೆ ಎಂದು, ಪುರುಷನು ಬೀಜದಾತನೆಂದು ಅವರಿಂದಲೇ ಸೃಷ್ಠಿ ನಡೆಯುತ್ತಿದೆ ಎಂದು ತಿಳಿಯುವಂತೆ ಮಾಡಿದ್ದಾನೆ. ನಮಗಿರುವ ಭೌತಿಕ ಶರೀರಗಳು ಪ್ರಕೃತಿ ಪರಮಾತ್ಮರಿಗೆ ಗುರುತುಗಳೆಂದು ತಿಳಿಯದೆ, ಆಧ್ಯಾತ್ಮಿಕದಲ್ಲಿ ಸೃಷ್ಠಿ ವಿವರವನ್ನು ಪ್ರಕೃತಿ ಪುರುಷರ ಗುರುತುನ್ನು ತಿಳಿಸುವವೆಂದು ಗ್ರಹಿಸದೆ, ಶರೀರವನ್ನನುಸರಿಸಿ ನಾನು ಪುರುಷನೆಂದು ಅಂದುಕೊಳ್ಳುವುದು ತಪ್ಪು. ಕೆಲವರು ಶಿಷ್ಯರು ನಮ್ಮ ಗುರು ಪುರುಷನು ಸ್ತ್ರೀಯರಿಗೆ ಪ್ರವೇಶ, ದರ್ಶನ ಇಲ್ಲವೆಂದಾಗ ಮೀರಾಬಾಯಿ ನಗುತ್ತಾ "ನಾನು ಇಲ್ಲಿಯವರೆಗೂ ಒಬ್ಬನೇ ಪುರುಷನೆಂದು ಕೊಂಡಿದ್ದೇನೆ ನಿಮ್ಮ ಗುರು ಸಹ ಪುರುಷನೇನಾ" ಎಂದು ಅಂದಳಂತೆ. ಪರಮಾತ್ಮ ಒಬ್ಬನೇ ಪುರುಷನೆಂದು ಎಲ್ಲರೂ ಸ್ತ್ರೀಯರೆಂದುಕೊಂಡ ಮೀರಾ ಬಾಯಿಗೆ ಆ ಗುರುವು ಪುರುಷನೆನ್ನುತ್ತಲೇ ನಗುತ್ತಾ ಆಶ್ಚರ್ಯವಾಗಿ ಇಲ್ಲಿ ಮತ್ತೊಬ್ಬ ಪುರುಷನಿದ್ದಾನಾ! ಎಂದು ಕೇಳಿದಳಂತೆ. ಆಕೆಯ ಮಾತು ಕೇಳಿದ ಗುರು ಹೊರಗೆ ಬಂದು **ನಾನು ಪುರುಷನು ಅಲ್ಲ ಜಗತ್ತಿನಲ್ಲಿ ಎಲ್ಲರೂ ಸ್ತ್ರೀಯರೇ"** ಎಂದು ಒಪ್ಪಿಕೊಂಡನಂತೆ.

ಪರಮಾತ್ಮ ತನ್ನ ವಿಧಾನವನ್ನು ತಿಳಿಸುವ ನಿಮಿತ್ತ ಸ್ತ್ರೀಪುರುಷ ಶರೀರ ಗಳನ್ನು ತಯಾರುಮಾಡಿದ್ದಾನೆಂದು, ವಾಸ್ತವವಾಗಿ ನಾವು ಹೆಂಗಸರೆ ಎಂದು, ಹೆಣ್ಣಿನ ಪ್ರಕೃತಿಯದೇ ಎಂದು, ಪ್ರಕೃತಿ ಕಡೆಯಿಂದ ಪರಮಾತ್ಮಕಡೆಗೆ ನಾವು ಪ್ರಯಾಣಿಸಬೇಕೆಂದು, ಹಾಗೆ ಪ್ರಯಾಣಿಸುವವರಿಗೆ ನಾವು "ಅಡ್ಡ" ಆಗಬಾರ ದೆಂದು ಗ್ರಹಿಸಬೇಕು. ಸಹಜವಾಗಿ ಹೊರಗಿನ ಪ್ರಪಂಚದಲ್ಲಿ ಸ್ತ್ರೀ ಶರೀರಕ್ಕೆ ಯುಕ್ತವಯಸ್ಸು ಬರುತ್ತಲೇ ಪುರುಷನ ಮೇಲೆ ಧ್ಯಾಸ ಪ್ರಾರಂಭವಾಗುತ್ತದೆ. ಆ ಸ್ತ್ರೀ ಪುರುಷನನ್ನು ಸೇರಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿರುತ್ತಾಳೆ. ಪುರುಷನನ್ನು

ಸೇರಿಕೊಳ್ಳಬೇಕೆಂಬ ಸ್ತ್ರೀಗೆ ಎಂತಹ ಆತಂಕಗಳು ಬಂದರು ಲೆಕ್ಕಮಾಡುವುದಿಲ್ಲ, ಎಷ್ಟು ಆತಂಕಗಳು ಎದುರಾದರು ಪುರುಷನನ್ನು ಸೇರಬೇಕೆಂಬ ಧ್ಯಾಸ ಮಾತ್ರ ಹೋಗುವುದಿಲ್ಲ. ಹಾಗೆಯೇ ನಾವೆಲ್ಲರೂ ಆಧ್ಯಾತ್ಮಿಕ ದೇಶದಲ್ಲಿ ಸ್ತ್ರೀಯರೇ. ಸ್ತ್ರೀಗೆ ಯುಕ್ತವಯಸ್ಸು ಬಂದು ಪುರುಷನ ಧ್ಯಾಸ ಬಂದಂತೆ, ನಮ್ಮಲ್ಲಿ ಯಾರಿಗೋ ಒಬ್ಬನಿಗೆ ಜ್ಞಾನವಯಸ್ಸು ಬಂದು ಪುರುಷೋತ್ತಮನನ್ನು ಸೇರಿಕೊಳ್ಳಬೇಕೆಂಬ ಧ್ಯಾಸ ಬರುತ್ತಿರುತ್ತದೆ. ಅಂತಹವನಿಗೆ ಹೊರಗಿನ ಪತ್ನಿ ಸಂಬಂಧಿಕರು ಎಷ್ಟುಜನ ಆತಂಕಪಡಿಸಿದರು ಲೆಕ್ಕ ಮಾಡುವುದಿಲ್ಲ. ಒಳಗೆ ಮಾತ್ರ ತನ್ನ ಪುರುಷನನ್ನು (ದೇವರನ್ನು) ಸೇರಿಕೊಳ್ಳುವುದಕ್ಕೆ ಶತವಿಧಗಳಲ್ಲಿ ಪ್ರಯತ್ನ ಮಾಡುತ್ತಿರುತ್ತಾನೆ. ಒಂದುವೇಳೆ ನೀನು ನಿನ್ನ ಪುರುಷನನ್ನು ಸೇರಿಕೊಳ್ಳಬೇಕೆಂದುಕೊಂಡಾಗ ನಿನ್ನ ಮನೆಯಲ್ಲಿರುವವರಾಗಲಿ, ನಿನ್ನ ಊರಿನವರಾಗಲಿ, ನಿನ್ನ ಹತ್ತಿರದ ಬಂಧುಗಳಾ ಗಲಿ, ನಿನ್ನನ್ನು ಹೇಳನ ಮಾಡುವುದಾಗಲಿ, ಕೊನೆಗೆ ನಿನ್ನ ಹೆಂಡತಿ ನಿನಗೆ ಅನ್ನ ಇಡದಂತೆ ಹೋಗುವುದಾಗಲಿ ಮತ್ತೇನಾದರು ನಡೆಯಬಹುದು. ಎಷ್ಟು ನಡೆದರೂ, ಎಷ್ಟು ಆತಂಕಗಳು ಅಡ್ಡಬಂದರೂ, ಸ್ತ್ರೀ ಧ್ಯಾಸದಲ್ಲಿ ಪುರುಷನು ಬಂದ ನಂತರ ಆಕಡೆಗೇ ಪ್ರಯಾಣಿಸುವುದಕ್ಕೆ ಯಾವುದೋ ಒಂದು ದಾರಿ ಹುಡುಕುವಂತೆ, ಪರಮಾತ್ಮ ಚಿಂತನೆ ಇರುವವನಿಗೆ ಎಷ್ಟು ಆತಂಕಗಳು ಬಂದರು ಹಿಂಜರಿಯುವುದಿಲ್ಲ.

ಯೋಗಶಾಸ್ತ್ರದ ಪ್ರಕಾರ ನಾವೆಲ್ಲರೂ ಪ್ರಕೃತಿ ಪರವಾಗಿರುವ ಹೆಂಗಸರು. ನಿನಗೂ ನನಗೂ ಎಲ್ಲರಿಗೂ ಪುರುಷನೆಂಬುವವನು ಬೇಕು. ಪುರುಷನನ್ನು ಸೇರಿಕೊಳ್ಳುವವರೆಗೂ ನಮಗೆ ತಪನೆ ನಿಲ್ಲುವುದಿಲ್ಲ. ಅಲ್ಲಿಯವರೆಗೂ ಧನ ಧಾನ್ಯಗಳು ಇದ್ದರೂ, ವಸ್ತು ವಾಹನಗಳಿದ್ದರೂ, ಅಧಿಕಾರ ಗೌರವಗಳು ಎಷ್ಟು ಇದ್ದರು ಏನೋ ಲೋಪ ಇರುತ್ತದೆ. ಐದನೆತನವಾದ ಪತಿ ಲಭಿಸಿದಾಗಲೇ ತೃಪ್ತಿ ಪರಿಪೂರ್ಣತೆ ಏರ್ಪಡುತ್ತದೆ. ಜ್ಞಾನ ತಿಳಿಯದವರಿಗೆ ಈ ಮಾತುಗಳು ಬಹಳ ವಿಚಿತ್ರವಾಗಿ ತೋಚುತ್ತಿರುತ್ತವೆ. ನಮಗೆ ಮದುವೆ ಆಗಿದೆ, ಗಂಡ ಹೆಂಡತಿ ಇದ್ದೇವಲ್ಲವೆ! ಅಂದುಕೊಳ್ಳಬಹುದು. ವಾಸ್ತವವಾಗಿ ನಿನಗೆ ನಡೆದ

ಮದುವೆ ಮದುವೆಯಲ್ಲ. ಅದು ದೈವತ್ವವನ್ನು ತಿಳಿಸುವ ಕಾರ್ಯ. ನೀವು ಗಂಡ ಹೆಂಡತಿ ಅಂದುಕೊಳ್ಳುವುದರಿಂದ ಗಂಡಹೆಂಡತಿ ಅಲ್ಲ. ಗಂಡಹೆಂಡತಿ ಎಂಬ ಮಾತು ಪ್ರಕೃತಿ ಪರಮಾತ್ಮರನ್ನು ತಿಳಿಸುವ ವಿಧಾನ. ಪತಿ (ಭರ್ತ) ಎಂದರೆ ಭರಿಸುವವನೆಂದು, ಪತ್ನಿ ಎಂದರೆ ಭರಿಸಲ್ಪಡುವವಳೆಂದು ಅರ್ಥ. ಈ ಅರ್ಥದ ಪ್ರಕಾರ ಆಲೋಚಿಸುವ ನೀನು ಯಾರನ್ನು ಭರಿಸುತ್ತಿದ್ದೀಯಾ? ನಿಜಕ್ಕೆ ನಿನ್ನನ್ನು ನೀನು ಭರಿಸಿಕೊಳ್ಳಲಿಲ್ಲ. ನಿನ್ನನ್ನು ಭರಿಸುವವನು ನಿನ್ನ ಶರೀರದಲ್ಲಿ ಇದ್ದಾನೆ. ಅವನು ಭರಿಸುವವರೆಗು ಶರೀರದಲ್ಲಿ ನೀನು ಇರುತ್ತಿಯಾ. ಎಲ್ಲರೂ ಹಾಗೆಯೇ ಇದ್ದೇವೆ. ಎಲ್ಲರಿಗೂ ಪತಿ ಇದ್ದಾನೆ. ಅವನೇ ಎಲ್ಲರಿಗೂ ಐದನೆತನ. ಐದನೆತನವೆಂಬ ಮಾತು ಬಹಳ ಕಡೆ ಕೇಳುತ್ತಿದ್ದೇವೆ. ಐದನೆತನ ಎನ್ನುವುದರಲ್ಲಿ ಅರ್ಥವೇನು? ಐದನೆತನವೆಂದು ಏಕೆ ಅನ್ನಬೇಕು? ಪತಿಯನ್ನು ಮೂರೋ ತನವೋ ಅಥವಾ ನಾಲ್ಕನೆತನವೋ ಅನ್ನಬಾರದಾ ಎಂದು ನಾವು ಆಲೋಚಿಸಲಿಲ್ಲ. ತಿಳಿಯದವನು ಪ್ರಶ್ನಿಸಿದರೆ ಯಾವುದೋ ಒಂದು ಹೇಳಿ ಸರಿಮಾಡದೆ ನಿಜಾರ್ಥ ಏನೋ ಆಲೋಚಿಸಿ ನೋಡೋಣ.

ಒಂದುಸಲ ನನ್ನನ್ನು ಒಬ್ಬರು ನೀನೇನು ಓದಿಕೊಂಡಿದ್ದೀಯಾ ಎಂದು ಪ್ರಶ್ನಿಸಿದರು, ಆಗ ನಾನು ಎರಡು ವಿಧಗಳಲ್ಲಿ ಉತ್ತರಕೊಟ್ಟಿದ್ದೇವೆ. ಪ್ರಪಂಚ ಪರವಾಗಿ ಆದರೆ ಹನ್ನೊಂದು ತರಗತಿಗಳು ಓದಿದ್ದೇನೆ. ಪರಮಾತ್ಮ ಪರವಾಗಿ ಆದರೆ ನಾಲ್ಕು ಓದಿಕೊಂಡಿದ್ದೇನೆ ಐದಕ್ಕೆ ಹೋಗಬೇಕೆಂದೆನು. ಈ ಎರಡನೆ ಉತ್ತರವನ್ನು ವಿವರವಾಗಿ ಹೇಳಬೇಕೆಂದರೆ ಈ ವಿಧವಾಗಿದೆ. ನಮ್ಮ ಶರೀರದಲ್ಲಿ ಕ್ರಮವಾಗಿ ಮೂರು ಗುಣಭಾಗಗಳಿವೆ. ನಾಲ್ಕನೆಯದು ಗುಣವಿಲ್ಲದ ಭಾಗ ಸಹ ಇದೆ. ಮಾನವನಿಗೆ ಇವು ತರಗತಿಗಳಂತಹವು. ಜ್ಞಾನದಲ್ಲಿ ಮೂರು ಗುಣಗಳನ್ನು ಅತಿಕ್ರಮಿಸಿದವನು, ಮೂರು ಗುಣಗಳನ್ನು ಜಯಿಸಿದವನು, ಮೂರು ಗುಣಗಳು ಅಂಟದವನು ತ್ರಿಗುಣಾತೀತನೆಂಬ ಮಾತು. ಅಂದರೆ ಮೂರು ತರಗತಿಗಳನ್ನು ದಾಟಿದವನೆಂದು ಅರ್ಥ. ಆ ಮೂರು ತರಗತಿಗಳೇ ತಾಮಸ, ರಾಜಸ, ಸಾತ್ತ್ವಿಕಗಳೆಂಬುವವು. ಇನ್ನು ನಾಲ್ಕನೇ ತರಗತಿಯನ್ನು ಯೋಗ

ಎನ್ನುತ್ತಾರೆ. ಯೋಗವನ್ನು ಪೂರ್ತಿ ತಿಳಿದ ನಂತರ ಯೋಗವನ್ನು ಸಹ ಅತಿಕ್ರಮಿಸಿದವನಾಗುತ್ತಾನೆ. ಅಂತಹವನನ್ನು ಯೋಗೀಶ್ವರನೆಂದು ಅನ್ನುತ್ತಾರೆ. ಹಾಗಲ್ಲದೆ ಯೋಗದಲ್ಲಿ ಇರುವವನನ್ನು ಯೋಗಿ ಎಂದು ಅನ್ನುತ್ತಾರೆ. ನನಗೆ ನಾಲ್ಕು ತರಗತಿಗಳು ಪೂರ್ತಿಯಾಗಿರುವುದರಿಂದ ಯೋಗಿಶ್ವರನಾಗಿ ಐದನೇ ತರಗತಿಗೆ ಹೋಗಬೇಕೆಂದು ಇದ್ದೇನೆಂದಿದ್ದೇನೆ. ನಾಲ್ಕನೆಯದಾದ ಯೋಗದ ನಂತರ ಇರುವುದು ಮೋಕ್ಷ. ಅದನ್ನೇ ಬಯಲೆಂದು, ಅಚೇಲವೆಂದು, ಮುಕ್ತಿಯೆಂದು, ಪರಮಪದವೆಂದು, ಪರಲೋಕ ರಾಜ್ಯವೆಂದು ಅನೇಕ ವಿಧಗಳಾಗಿ ಹೇಳುತ್ತಿರುತ್ತಾರೆ. ನಾಲ್ಕನೆಯದರ ನಂತರ ಇರುವ ಐದನೆತರಗತಿಯಾದ ಮೋಕ್ಷವೇ ಮಾನವನಿಗೆ ಕೊನಯ ತರಗತಿ. ಪ್ರಪಂಚ ಓದುಗಳೆಷ್ಟು ತರಗತಿ ಗಳಾಗಿದ್ದರೂ, ಅವು ಎಲ್ಲವೂ ಯೋಗಶಾಸ್ತ್ರದಲ್ಲಿ ಮೂರು ತರಗತಿಗಳಲ್ಲಿನವೇ ಎಂದು ತಿಳಿಯಬೇಕು. ಎಷ್ಟು ದೊಡ್ಡ ಡಿಗ್ರಿಗಳು ಸಹಿತವು ನಾಲ್ಕನೇ ತರಗತಿವರೆಗೂ ಬರಲಾರವು, ಎಲ್ಲಾ ಮೂರನೇ ತರಗತಿಯಲ್ಲಿರುವವೆ. ನಾನು ಯೋಗಶಾಸ್ತ್ರದಲ್ಲಿ ನಾಲ್ಕು ತರಗತಿಗಳು ಓದಿ, ಕೊನೆಯದಾದ ಐದಕ್ಕೆ ಕಾದುಕೊಂಡಿದ್ದೇವೆ.

ಹಾಗೆಯೇ ಪ್ರತಿ ಮನುಷ್ಯನಿಗೆ ಈ ಐದುತರಗತಿಗಳು ಇವೆ. ಕೊನೆಯದಾದ ಅದನ್ನೆ ಐದೋತನ ಎಂದು ಸಹ ಪೂರ್ವದಲ್ಲಿ ದೊಡ್ಡವರನ್ನುತ್ತಿದ್ದರು. ಆದ್ದರಿಂದಲೇ ಎಲ್ಲದಕ್ಕಿಂತ ಮೀರಿದ ಭಾಗ್ಯವು ಐದೋತನವೆಂದು, ಅದನ್ನೇ ಸೌಭಾಗ್ಯವೆಂದು ಸಹ ಅಂದಿದ್ದಾರೆ. ಸೌಭಾಗ್ಯವೆಂದರೆ ಪತಿಯನ್ನು ಹೊಂದಿರುವುದು. ಪತಿಯನ್ನು ಹೊಂದಿರುವುದೇ ಐದೋತನ. ಹೊರಗಿನ ಶರೀರ ಪತಿ ಐದೋತನ ಅಲ್ಲ. ನಿಜವಾಗಲು ಮೂರನೆತನವೇ ಆಗುತ್ತದೆ. ನಿಜವಾದ ಪತಿ (ಭರ್ತ) ಪರಮಾತ್ಮ. ಆ ಜಗದ್ಭರ್ತನನ್ನು ಹುಡುಕುವುದಕ್ಕೆ ಪ್ರಯತ್ನಿಸಿ ಐದೋತನವನ್ನು ಸಾಧಿಸಿಕೊಳ್ಳಬೇಕು. ಪ್ರಪಂಚದಲ್ಲಿ ಸ್ತ್ರೀ ಪುರುಷರ್ಯಾರಿಗಾದರು ಐದೋತನ ಅಗತ್ಯ. ಬಹಳಜನ ತಾಮಸವಾದ ಒಂದರಲ್ಲಿಯೋ, ರಾಜಸವಾದ ಎರಡರಲ್ಲಿಯೋ, ಸಾತ್ವಿಕವಾದ ಮೂರ ರಲ್ಲಿಯೋ ಇದ್ದಾರೆ. ಕನಿಷ್ಟ ನಾಲ್ಕನೆಯದಾದ ಯೋಗದವರೆಗೂ ಸಹ ಬರಲಿಲ್ಲ.

ಜನಸಂಖ್ಯೆಯಲ್ಲಿ ಹೆಚ್ಚಾಗಿ ಎರಡನೆತರಗತಿಗೇ ದಾಟುವುದಿಲ್ಲ. 99% ರಷ್ಟು ಮೂರನ್ನೇ ದಾಟಲಿಲ್ಲ. ಅಂಥವರು ನಾಲ್ಕು ಯಾವಾಗ ದಾಟುತ್ತಾರೆ. ಒಂದುವೇಳೆ ನಾಲ್ಕರವರೆಗೂ ಬಂದರು, ಎಷ್ಟೋ ಆತಂಕಗಳಿಂದ ಅಲ್ಲಿ ಪಾಸಾಗದೆಹೋ ಗುತ್ತಿದ್ದಾರೆ. ಕೆಲವರೇನೋ ಒಂದರಲ್ಲಿ ಇರುತ್ತಾ, ಐದರಲ್ಲಿ ಕುಳಿತುಕೊಂಡಿದ್ದೇವೆ ಅಂದುಕೊಳ್ಳುತ್ತಿದ್ದಾರೆ. ನಮ್ಮ ಗುರು ಮೋಕ್ಷದಲ್ಲಿ ಕೂರಿಸಿದ್ದಾನೆನ್ನುತ್ತಿದ್ದಾರೆ. ಐದಕ್ಕೆ ಹೋದವನು ಕಣ್ಣಿಗೆ ಕಾಣಿಸದೆ ಪರಮಾತ್ಮನೊಳಗೆ ಐಕ್ಯವಾಗಿಹೋ ಗುತ್ತಾನಲ್ಲವೆ! ಹಾಗಿರುವಾಗ ಕಾಣಿಸುವ ಗುರು, ಕಾಣಿಸುವ ಶಿಷ್ಯರನ್ನು ಮೋಕ್ಷದಲ್ಲಿ ಇಟ್ಟಿದ್ದಾನೆಂದರೆ ಆ ಗುರು ಆ ಶಿಷ್ಯರು ಎಲ್ಲರೂ ಒಂದನೇ ತರಗತಿಯಲ್ಲಿಯೇ ಇದ್ದಾರೆಂಬ ಮಾತು. ಯಾರು ಹೇಗೆ ಹೋದರು ಪರವಾಗಿಲ್ಲ. **ನೀನು ಮಾತ್ರ ನಿನ್ನ ಪತಿಯನ್ನು ನೋಡಿಕೋ, ನಿನ್ನ ಪತಿಗೇ ಮುಗಿ, ನಿನ್ನ ಪತಿಗೆ ಸೇವೆ ಮಾಡು, ನಿನ್ನ ಐದೋತನ ಹೋಗದಂತೆ ನೋಡಿಕೋ, ಮುತ್ತೈದೆಯಾಗಿ ಬದುಕು, ವಿಧವೆಯಾಗಿ ಬದುಕಬೇಡ ನಾವೆಲ್ಲರೂ ಹೆಂಗಸರೇ ಆದ್ದರಿಂದ ನಮ್ಮ ಹೆಂಗಸರೆಲ್ಲರಿಗೂ ಐದೋತನವೇ ಮುಖ್ಯವೆಂದು ತಿಳಿದುಕೋ,**

# ಬ್ರಾಹ್ಮಣ – ನಾಯಿ ಬ್ರಾಹ್ಮಣ

ಬ್ರಾಹ್ಮಣರನ್ನು, ನಾಯಿಬ್ರಾಹ್ಮಣರನ್ನು ತಿಳಿಯದವರಿರುವುದಿಲ್ಲ ಅಂದುಕೊಳ್ಳುತ್ತೇನೆ. ಏಕೆಂದರೆ ಯಾವಾಗೋ ಒಂದುಬಾರಿ ತಪ್ಪದೆ ಅವರ ಬಳಿಗೆ ಹೋಗಬೇಕಾದ ಅವಶ್ಯಕತೆ ಎಲ್ಲರಿಗೂ ಇದೆ. ಮನೆಯಲ್ಲಿ ಯಾರಾದರೂ ಹುಟ್ಟಿದರೆ ಅವರಿಗೆ ನಾಮಕರಣಕ್ಕೋಸ್ಕರ, ಜಾತಕಕ್ಕೋಸ್ಕರ, ಯಾರಾದರೂ ಮರಣಿಸಿದರೆ ಅವರ ಕರ್ಮ ತಂತ್ರಗಳಿಗೋಸ್ಕರ, ಬದುಕಿದಾಗ ಪಂಚಾಂಗ ಕೇಳುವುದಕೋಸ್ಕರ, ಬ್ರಾಹ್ಮಣರ ಹತ್ತಿರಕ್ಕೆ ತಪ್ಪದೆ ಹೋಗಬೇಕಾಗಿದೆ. ನಾಯಿ ಬ್ರಾಹ್ಮಣರ (ಮಂಗಳರ) (ಕ್ಷೌರಿಕರ) ಹತ್ತಿರಕ್ಕಾದರೆ ತಲೆಕೂದಲು ಬೆಳೆದಾಗ, ಗಡ್ಡ ಬೆಳೆದಾಗ ತಿಂಗಳಿಗೊಂದುಸಲವಾದರು ಹೋಗಬೇಕಾಗಿದೆ. ಆದ್ದರಿಂದ ಬ್ರಾಹ್ಮಣರು, ನಾಯಿ ಬ್ರಾಹ್ಮಣರು ಇಬ್ಬರೂ ಪ್ರಜೆಗಳಿಗೆ ಸುಪರಿಚಿತರೇ ಎಂದು

ಹೇಳಬಹುದು. ಈಗಿನ ಕಾಲದಲ್ಲ ಇವರಕೆಲಸ ಎಲ್ಲರಿಗೂ ತಿಳಿದಿರುವುದೆ, ಆದರೂ ಪೂರ್ವಕಾಲದಲ್ಲಿ ಇವರು ಮುಖ್ಯವಾಗಿ ಮಾಡುತ್ತಿರುವ ಕೆಲಸ ಏನು? ಅವರಿಗಾಹೆಸರು ಹೇಗೆ ಬಂದಿದೆ? ಎಂದು ಯೋಚಿಸಿದರೆ ಕೆಲವು ಹೊಸ ವಿಷಯಗಳು ತಿಳಿಯುತ್ತಿವೆ. ಅವು ಏನೋ ನೋಡೋಣ!

ಪೂರ್ವದಲ್ಲಿ ಕೃತಯುಗದ ನಂತರ ತ್ರೇತಾಯುಗದಲ್ಲಿಯೇ ಬ್ರಾಹ್ಮಣ ಕುಲ ದೊಡ್ಡಕುಲವಾಗಿ ಹೆಸರುವಾಸಿಯಾಗಿದೆ. ಎಲ್ಲಾ ಕುಲಗಳಿಗಿಂತ ದೊಡ್ಡ ಕುಲವಾಗಿ ಹೆಸರುವಾಸಿಯಾಗುವುದಕ್ಕೆ ಕಾರಣವೇನೆಂದರೆ ಬ್ರಾಹ್ಮಣರು ಮಾತ್ರ ಬ್ರಹ್ಮವಿದ್ಯೆಯನ್ನು ಕುರಿತು ಬೋಧಿಸುತ್ತಿದ್ದರು. ಎಲ್ಲಾ ವಿದ್ಯೆಗಳಿಗಿಂತ ದೊಡ್ಡ ವಿದ್ಯೆಯಾದ ಬ್ರಹ್ಮವಿದ್ಯೆಯನ್ನು ಬೋಧಿಸುತ್ತಿದ್ದರು, ಆದ್ದರಿಂದ ಆ ಕುಲವನ್ನು ದೊಡ್ಡ ಕುಲವಾಗಿ ಪರಿಗಣಿಸುತ್ತಿದ್ದರು. ಬ್ರಹ್ಮವಿದ್ಯೆಯನ್ನು ಬೋಧಿಸುತ್ತಿದ್ದವರು ಅವರು ಆದ್ದರಿಂದ ಬ್ರಾಹ್ಮಣರೆಂದು ಹೆಸರು ಬಂದಿದೆ. ಅಂದಿನ ರಾಜರಹತ್ತಿರ ಸಹ ಗುರುಗಳಾಗಿ, ಆಸ್ಥಾನಪಂಡಿತರಾಗಿ ಸ್ಥಾನವನ್ನು ಬ್ರಾಹ್ಮಣರು ಹೊಂದಿದ್ದರು. ಬ್ರಾಹ್ಮಣರ ಮಾತಿಗೆ ರಾಜರು ಸಹ ಎದುರು ಹೇಳುವವರಲ್ಲ. ಈ ವಿಧವಾಗಿ ಸ್ವಲ್ಪಕಾಲ ನಡೆಯುತ್ತಾಹೋಗಿ ಭೂಮಿಮೇಲೆ ದೇವಾಲಯಗಳು ಹೆಚ್ಚಾಗಿ ಹೋಗಿವೆ. ಪ್ರತಿ ದೇವರಿಗೆ ಇಬ್ಬರು ಹೆಂಡತಿಯರನ್ನು ದೇವಾಲಯಗಳಲ್ಲಿ ಇಡುವುದು ನಡೆದಿದೆ. ದೇವಾಲಯಗಳನ್ನು ನಿರ್ಮಿಸಿರುವುದು, ಅದರಲ್ಲಿ ಪ್ರತಿಮೆಗಳನ್ನು ಪ್ರತಿಷ್ಠಿಸಿರುವುದು ಬ್ರಾಹ್ಮಣರೆ. ಪ್ರಜೆಗಳಲ್ಲಿ ದೇವತೆಗಳಿಗೆ ಸಮಾನವಾದ ಗೌರವವಿರುವ ಬ್ರಾಹ್ಮಣರು ಸಹ ಗುಡಿಯಲ್ಲಿನ ದೇವತೆಗಳಂತೆ ಇಬ್ಬರು ಹೆಂಡತಿಯರನ್ನು ವಿವಾಹಮಾಡಿಕೊಳ್ಳುವುದು ಆರಂಭಿಸಿದರು. ಗುಡಿಯಲ್ಲಿನ ದೇವರುಗಳಿಗೆ ಇಬ್ಬರು ಹೆಂಡತಿಯರಿರುವಂತೆ ಅಂದಿನ ಬ್ರಾಹ್ಮಣರಿಗೂ ಸಹ ಇಬ್ಬರು ಹೆಂಡತಿಯರು ಇರುವುದರಿಂದ ಬ್ರಾಹ್ಮಣರು ಭೂಮಿಮೇಲೆ ದೇವತೆಗಳೆಂದು, ಭೂಸುರರೆಂದು ಹೆಸರುವಾಸಿಯಾದರು. ಬಹುಪತ್ನಿತ್ವವನ್ನು ಅಂದಿನ ಬ್ರಾಹ್ಮಣರೇ ಹೆಚ್ಚಾಗಿ ಹೊಂದಿರುತ್ತಿದ್ದರು. ಅಷ್ಟೇ ಅಲ್ಲದೆ ಅಂದಿನ ರಾಜರು ಸಹ ಕೆಲವರು ಇಬ್ಬರು ಹೆಂಡತಿಯರನ್ನು ಹೊಂದಿರುತ್ತಿದ್ದರು. ಆಗಿನ

ತ್ರೇತಾಯುಗದಲ್ಲಿಯೇ ದಶರಥನು ಮೂವರು ಹೆಂಡತಿಯರನ್ನು ಹೊಂದಿರುವುದು ಎಲ್ಲರಿಗೂ ತಿಳಿದಿದೆ. ಅಂದಿನ ರಾಜರಾಗಲಿ, ಬ್ರಾಹ್ಮಣರಾಗಲಿ ಮೊದಲ ಹೆಂಡತಿಗೆ ಹುಟ್ಟಿದ ಸಂತಾನಕ್ಕೆ ಹೆಚ್ಚಿನ ಪ್ರಧಾನ್ಯತೆ ಕೊಡುತ್ತಿದ್ದರು. ಅದೇ ವಿಧಾನದಿಂದಲೇ ದೊಡ್ಡ ಹೆಂಡತಿಗೆ ಹುಟ್ಟಿದ ರಾಮನಿಗೆ ರಾಜ್ಯವನ್ನು ಕಟ್ಟಬೇಕೆಂದು ಧಶರಥನು ಅಂದುಕೊಳ್ಳುವುದು, ಅದನ್ನು ಚಿಕ್ಕ ಹೆಂಡತಿ ವಿರೋಧಿಸುವುದು ನಡೆದಿದೆ.

ಅಂದಿನ ಬ್ರಾಹ್ಮಣರಲ್ಲಿಯೂ ಸಹ ಮೊದಲ ಹೆಂಡತಿಯ ಸಂತತಿಗೆ ಪ್ರಾಧಾನ್ಯತೆ ಕೊಡುತ್ತಿದ್ದರೆಂದುಕೊಂಡಿದ್ದೇವಲ್ಲ! ಅದರ ಪ್ರಕಾರವೇ ದೇವಾಲಯ ದಲ್ಲಿ ಬ್ರಹ್ಮಜ್ಞಾನವನ್ನು ಬೋಧಿಸುವ ಕಾರ್ಯವನ್ನು ಎರಡು ವಿಧಗಳಾಗಿ ವಿಭಜಿಸಿ, ಒಂದು ಒಳಗೆ ಬೋಧಿಸುವವರೂ, ಎರಡು ಹೊರಗೆ ಕಾರ್ಯ ರೂಪವಾಗಿ ತೋರಿಸುವವರೂ ಎಂದು ಎರಡು ಕಾರ್ಯಗಳನ್ನಿಟ್ಟಿದ್ದಾರೆ, ಅಂದಿನ ಬ್ರಾಹ್ಮಣರು ಮೊದಲ ಹೆಂಡತಿಯ ಕುಮಾರರಿಗೆ ಒಳಗೆ ಬೋಧಿಸುವ ಸುಲಭವಾದ ಕಾರ್ಯಗಳನ್ನು ಮಾಡಲು ಹೇಳಿ, ಹೊರಗಿನ ಕಾರ್ಯಗಳನ್ನು ಎರಡನೆ ಹೆಂಡತಿಯ ಕುಮಾರರಿಗೆ ಹೇಳಿದ್ದಾರೆ. **ಆಗಿನಿಂದ ಗುಡಿಯಲ್ಲಿನ ಕಾರ್ಯ, ಗುಡಿ ಹೊರಗಿನ ಕಾರ್ಯ ಎರಡೂ ಬ್ರಾಹ್ಮಣರೇ ಮಾಡುತ್ತಿದ್ದಾರೆ.** ಆದರೆ ಕಾಲಕ್ರಮದಲ್ಲಿ ಗುಡಿಯೊಳಗಿನವರು ಬ್ರಾಹ್ಮಣರಾಗಿ, ಗುಡಿ ಹೊರಗಿನವರು ಮಾತ್ರ ನಾಯಿ ಬ್ರಾಹ್ಮಣರಾಗಿದ್ದಾರೆ. ಈಗಿನ ಬ್ರಾಹ್ಮಣ, ನಾಯಿ ಬ್ರಾಹ್ಮಣ ಇಬ್ಬರೂ ತ್ರೇತಾಯುಗದಲ್ಲಿ ಬ್ರಾಹ್ಮಣ ಸಂತತಿಯೇ ಎಂದು ಈ ದಿನ ತಿಳಿಯದಂತೆಹೋಗಿದೆ. ಆದಿನ ತಂದೆ ಮೂಲಕ ಬಂದಿರುವ ಕಾರ್ಯಗಳನ್ನು ಸೋದರ ಬ್ರಾಹ್ಮಣರಾದ ಬ್ರಾಹ್ಮಣ, ನಾಯಿ ಬ್ರಾಹ್ಮಣರು ಇಬ್ಬರು ಕ್ರಮ ತಪ್ಪದೆ ಗುಡಿಯೊಳಗೆ, ಗುಡಿಹೊರಗೆ ಬ್ರಹ್ಮವಿದ್ಯೆಗೆ ಸಂಬಂಧಿಸಿದ ಕೆಲಸವನ್ನು ಮಾಡುತ್ತಲೇ ದ್ವಾಪರಯುಗದ ವರೆಗೂ ಬಂದಿದ್ದಾರೆ. ನಾವು ಅಲ್ಲಿಂದ ವಿವರಿಸಿಕೊಳ್ಳೋಣ.

ಬ್ರಹ್ಮಜ್ಞಾನ ತಿಳಿಸುವವನು ಅಥವಾ ತಿಳಿದವನು ಬ್ರಾಹ್ಮಣನು ಅನ್ನು ವಮಾತು ಪೂರ್ವದಲ್ಲಿತ್ತು ಅಂದಿದ್ದೇವಲ್ಲವೆ! ಆ ಮಾತಿನ ಪ್ರಕಾರವೇ ಬ್ರಾಹ್ಮಣರು ಬ್ರಹ್ಮಜ್ಞಾನವನ್ನು ಇತರರಿಗೆ ತಿಳಿಸುವ ಕೆಲಸವೇ ಮುಖ್ಯವಾಗಿ ಇಟ್ಟುಕೊಂಡು

ಜೀವನಸಾಗಿಸುತ್ತಿದ್ದರು. ಮಾನವ ಜೀವನಧ್ಯೇಯ ಮೋಕ್ಷವನ್ನು ಸಾಧಿಸುವುದೇ ಎಂದು ತಿಳಿಸುತ್ತಿದ್ದರು. ಪುರದಲ್ಲಿ ಜೀವಿಸುವ ಪೌರರಿಗೆ ಜೀವನದಲ್ಲಿ **ದೈವಪ್ರಾಪ್ತಿಗೋಸ್ಕರ ಹಿತವನ್ನು ಬೋಧಿಸುವವರು ಆದ್ದರಿಂದ ಪೌರೋಹಿತರೆಂದು** ಸಹ ಇವರನ್ನು ಕರೆಯುವುದು ಇದೆ. ಪೌರರಿಗೆ ಹಿತವನ್ನು ಬೋಧಿಸುತ್ತಾ ಪೌರೋಹಿತರೆಂದು ಹೆಸರುವಾಸಿಯಾದ ಬ್ರಾಹ್ಮಣರು ಎಲ್ಲರ ತಲೆಯಲ್ಲಿ ದೇವರು ನಿವಾಸವಾಗಿದ್ದಾನೆಂದು, ನಮ್ಮತಲೆಯಲ್ಲಿನ ಗುಣಗಳು ಕೆಲಸಮಾಡುವವರೆಗು ದೇವರನ್ನು ತಿಳಿದುಕೊಳ್ಳಲಾರೆವೆಂದು, ಲೆಕ್ಕಿಸಲಾರದ ಗುಣಗಳೊಂದರ ಆಲೋಚನೆಗಳನ್ನು ಅಡಗಿಸಿಹಾಕಿದಾಗಲೇ, ಶಿರಸ್ಸಿನಲ್ಲಿ ನಿವಾಸವಿರುವ ಆತ್ಮ ಅನುಭವಕ್ಕೆ ಬಂದು ತಿಳಿಯುತ್ತದೆಂದು, ಆತ್ಮ ದರ್ಶನ ಇಲ್ಲದ ಜೀವನ ವ್ಯರ್ಥವೆಂದು ಬೋಧಿಸುತ್ತಿದ್ದರು. ಬ್ರಾಹ್ಮಣರು ಈ ವಿಧವಾಗಿ ಪ್ರಜೆಗಳಿಗೆ ಬೋಧಿಸುತ್ತಾ ಒಳ್ಳೆಯ ಕಾರ್ಯಗಳು ಮಾಡುತ್ತಿರುವಾಗ, ನಾಯಿಬ್ರಾಹ್ಮಣರೆಂದು ಹೆಸರುವಾಸಿಯಾದ ಮಂಗಳರು (ಕ್ಷೌರಿಕರು) ನಿಮಗಿಂತ ನಾವು ಏನು ಕಡಿಮೆ ಇಲ್ಲವೆಂದು, ನೀವು ಆತ್ಮಜ್ಞಾನವನ್ನು ಬೋಧಿಸಿದರೆ ಅದನ್ನು ನಾವು ಅರ್ಥ ವಾಗುವಂತೆ ತೋರಿಸುವವರೆಂದು ಬ್ರಾಹ್ಮಣರಿಗೆ ಪೋಟಿ ಕಾರ್ಯಗಳು ಮಾಡುತ್ತಿದ್ದರು.

ಈ ವಿಧವಾಗಿ ಬ್ರಹ್ಮಜ್ಞಾನವನ್ನು ತಿಳಿಸುವವರು ಎರಡು ಗುಂಪುಗಳಾಗಿ ವಿಭಜಿಸಿಕೊಂಡು ಇರುತ್ತಿದ್ದರು. ಒಂದು ಗುಂಪಿನವರು ಬ್ರಹ್ಮಜ್ಞಾನವನ್ನು ಬಾಯಿಂದ ಬೋಧಿಸಿದರೆ, ಮತ್ತೊಂದು ಗುಂಪಿನವರು ಬಾಯಿಂದ ಬೋಧಿಸದೆ ಕೈಯಿಂದ ಮಾಡಿ ಅರ್ಥವಾಗುವಂತೆ ಮಾಡುತ್ತಿದ್ದರು. ಬೋಧಿಸುವವರಿಗಿಂತ ತೋರಿಸುವವರು ಹೆಚ್ಚೆಂದು ಕೆಲವರೂ, ತೋರಿಸುವವರಿಗಿಂತ ಬೋಧಿಸುವವರೇ ಉತ್ತಮರೆಂದು ಮತ್ತೆಕೆಲವರು ಒಬ್ಬರಿಗೊಬ್ಬರು ವಾದಿಸಿಕೊಳ್ಳುತ್ತಿದ್ದರು. ಯಾವುದು ಏನಾದರೂ ಬ್ರಹ್ಮಜ್ಞಾನ ಯಾವುದೋ ಒಂದು ವಿಧವಾಗಿ ತಿಳಿಸುತ್ತಿದ್ದರು ಆದ್ದರಿಂದ ಎರಡು ಗುಂಪಿನವರಿಗೂ ಸೋದರ ಬ್ರಾಹ್ಮಣರೆಂದು ಹೆಸರು ಇತ್ತು. ಎರಡು ಗುಂಪುಗಳ ಬ್ರಾಹ್ಮಣರು ಅನೇಕ ವಿಷಯಗಳಲ್ಲಿ ಪೋಟಿಬೀಳುತ್ತಾ

ಯಾರಿಗೆ ಅವರು ದೊಡ್ಡವರೆಂದುಕೊಳ್ಳುತ್ತಿದ್ದರು. ಆ ವಿಧವಾಗಿಯೇ ಅನೇಕ ಆಲೋಚನೆಗಳು ನಮ್ಮ ತಲೆಯಲ್ಲಿವೆ ಎಂದು, ಆ ಆಲೋಚನೆಗಳು ಇಲ್ಲದಂತೆ ಮಾಡಿಕೊಂಡರೆ ಆತ್ಮದರ್ಶನವಾಗುತ್ತದೆ ಎಂದು ಬ್ರಾಹ್ಮಣರು ತಿಳಿಸಿದಾಗ ಅನೇಕ ಆಲೋಚನೆಗಳ ಚಿಹ್ನೆಯೆ ತಲೆಮೇಲೆ ಅನೇಕ ಕೂದಲುಗಳೆಂದು, ಆ ತಲೆಕೂದಲು ಪೂರ್ತಿ ಬೋಳಿಸಿದರೆ **ಗುಂಡಾಗಿ** ಬದಲಾಗಿ ಹೊಸ ಆಕಾರ ದರ್ಶನವಾಗುತ್ತದೆಂದು, ಅದೇ ವಿಧವಾಗಿ ಆಲೋಚನೆಗಳು ಇಲ್ಲದ ಸ್ಥಾನದಲ್ಲಿ ಹೊಸದಾಗಿ **ಆತ್ಮ** ದರ್ಶನವಾಗುತ್ತದೆ ಎಂದು ಪೂರ್ತಿ ವಿವರವಾಗಿ ಅರ್ಥವಾಗುವಂತೆ, ಒಬ್ಬ ಮನುಷ್ಯನ ತಲೆಮೇಲೆ ಕೂದಲು ಪೂರ್ತಿ ಬೋಳಿಸಿ ತೋರಿಸಿ, ಒಳಗೂ ಸಹ ಆಲೋಚನೆಗಳು ಇಲ್ಲದಂತೆ ಮಾಡಿಕೊಳ್ಳಿ ಎಂದು ನಾಯಿಬ್ರಾಹ್ಮಣರು ಮಾಡಿ ತೋರಿಸಿದ್ದಾರೆ.

ಹೀಗೆ ಅನೇಕ ವಿಷಯಗಳಲ್ಲಿ ಬ್ರಾಹ್ಮಣ, ನಾಯಿಬ್ರಾಹ್ಮಣ ಅನ್ನುವ ದಾಯಾದಿ ಗುಂಪುಗಳ ಬ್ರಾಹ್ಮಣರು ಪೋಟಿ ಕಾರ್ಯಗಳು ನಿರ್ವಹಿಸುತ್ತಾ ಇರುತ್ತಿದ್ದರು. ಅವುಗಳಲ್ಲಿ ಕೆಲವನ್ನು ಈಗ ವಿವರಿಸಿಕೊಳ್ಳೋಣ. ಬ್ರಾಹ್ಮಣರು ದೇವಾಲಯದೊಳಗೆ ಹೋಗಿ ಅದರಲ್ಲಿನ ಪ್ರತಿಮೆ ಮುಂದೆ ಪ್ರಾತಃಕಾಲದಲ್ಲಿಯೇ ಬ್ರಹ್ಮವಿದ್ಯಾಪಾರಾಯಣ ಮಾಡುತ್ತಾ, ಅನೇಕ ಶ್ಲೋಕಗಳನ್ನು ಓದುತ್ತಾ, ದೇವರನ್ನು ಆರಾಧಿಸುತ್ತಾ ಪ್ರಜೆಗಳೆಲ್ಲರೂ ದೇವರ ಮಂತ್ರೋಚ್ಚಾಟನೆ ಶಬ್ಧದೊಂದಿಗೆ ಮನಸ್ಸು ಲಗ್ನಮಾಡಿ ಆರಾಧಿಸಬೇಕೆಂದು, ಜ್ಞಾನಮಂತ್ರ ಶಬ್ಧ ದೈವಸಮಾನವೆಂದು ಅಂತಹ ನಾದವೇ **ಬ್ರಹ್ಮವೆಂದು** ಬೋಧಿಸಿದಾಗ, ನಾಯಿ ಬ್ರಾಹ್ಮಣರು ಜ್ಞಾನಮಂತ್ರ ಶಬ್ಧಕ್ಕಿಂತ ಉತ್ತಮವಾದ ನಾದವು ಬೇರೆ ಇದೆಯೆಂದು, ಜ್ಞಾನಮಂತ್ರನಾದಕ್ಕಿಂತ ತಾವು ಮೊಳಗಿಸುವ ನಾದ ಬಹಳ ಮಂಗಳಕರವಾದುದೆಂದು ಹೇಳುತ್ತಿದ್ದರು. ಮಂಗಳವಾದ್ಯಗಳಿಂದ ಹುಟ್ಟುವನಾದಗಳಲ್ಲಿ ಮನಸ್ಸು ಲಗ್ನವಾಗಿ, ನಿತ್ಯವೂ ನಮ್ಮನ್ನು ಪೀಡಿಸುವ ಅನೇಕ ವಿಷಯಗಳನ್ನು ಮರೆತುಹೋಗಿ ಉತ್ತಮ ಅನುಭೂತಿಯನ್ನು ಮಾನವನು ಪಡೆಯುತ್ತಾನೆಂದು, ಅದು ದೇವರಿಗೆ ಬಹಳ ಹತ್ತಿರವಾದುದೆಂದು, ಪ್ರಪಂಚ ವಿಷಯಗಳಿಂದ ಸುಲಭವಾಗಿ ಹೊರಬೀಳುವುದಕ್ಕೆ

ಮಂತ್ರನಾದಕ್ಕಿಂತ ನಮ್ಮನಾದವೇ ಮೇಲೆಂದು ಬಾರಿಸಿ, ಮನುಷ್ಯರ ಮನಸ್ಸುಗಳನ್ನು ಆ ನಾದದ ಮೇಲೆಯೇ ನಿಲ್ಲುವಂತೆ ಮಾಡಿದ್ದೇವೆಂದು, ಹಾಗೆ ಮಾಡುವುದರಿಂದ ಆಲೋಚನೆಗಳು ಇಲ್ಲದಂತೆಹೋಗಿ ಹೊಸದಾಗಿ ಆತ್ಮ ದರ್ಶನವಾಗುತ್ತದೆ ಎಂದು ಆ ಅರ್ಥದಿಂದಲೇ ಮನುಷ್ಯರ ತಲೆಕೂದಲು ಬೋಳಿಸಿ ತೋರಿಸಿದ್ದಾರೆ. ಬೋಳಿಸುವುದಕ್ಕೆ ಬೇಕಾದ ಪರಿಕರಗಳು, ಶಬ್ದ ಮಾಡುವುದಕ್ಕೆ ಬೇಕಾದ ವಾದ್ಯಗಳು ಅಂದಿನಿಂದಲೇ ಕೈಗೂಡಿಸಿಕೊಂಡು ಇಟ್ಟುಕೊಂಡಿದ್ದಾರೆ.

ಗುಡಿಯೊಳಗೆ ನೀವು ಮಂತ್ರ ಓದಿದರೆ, ಗುಡಿ ಹೊರಗೆ ನಾವು ವಾದ್ಯಗಳು ಮೊಳಗಿಸುತ್ತೇವೆಂದು ಪೋಟಿಗೆ ಕುಳಿತುಕೊಂಡಿದ್ದಾರೆ. ಹಾಗೆ ವಿವಾಹ ಸಮಯದಲ್ಲಿ ಬ್ರಾಹ್ಮಣರು ಮಂತ್ರಗಳು ಓದಿದರೆ, ನಾಯಿಬ್ರಾಹ್ಮಣರು ವಾದ್ಯಗಳನ್ನು ನುಡಿಸುತ್ತಿದ್ದರು. ಮದುವೆ ನೀವು ಮಾಡಿದರೆ, ಮಧುಮಗನನ್ನಾಗಿ ಮಾಡುವುದು ನಾವೇ ಎಂದು, ನಾವು ಇಲ್ಲದೇ ಮದುವೆ ಕುಮಾರನೇ ಇಲ್ಲ ಎಂದು ಅಂದಿದ್ದಾರೆ. ಈಗಲೂ ನಾಯಿ ಬ್ರಾಹ್ಮಣರು ಮಧುಮಗನನ್ನು ಮಾಡುವುದು ಇದೆ. ಆ ವಿಧವಾಗಿಯೇ ಒಬ್ಬ ಮನುಷ್ಯ ಮರಣಿಸಿದಾಗ ಬ್ರಾಹ್ಮಣರು ಮಂತ್ರಗಳು ಓದಿ ಕರ್ಮತಂತ್ರ ನಿರ್ವಹಿಸಿ ಮರಣಿಸಿದ ಮನುಷ್ಯನಿಗೂ ಬದುಕಿರುವ ಅವರಿಗೂ ಇಲ್ಲಿಗೆ ಸಂಬಂಧ ಮುಗಿದುಹೋಗಿದೆ, ಇಲ್ಲಿಯವರೆಗೂ ಇಲ್ಲಿಯೇ ತಿರುಗುತ್ತಿರುವ ಜೀವಾತ್ಮ ಆ ದಿನದಿಂದ ಪೂರ್ತಿ ಸಂಬಂಧ ಇಲ್ಲದಂತೆ ಹೋಗುತ್ತದೆ ಎಂದು ತಿಳಿಸಿದಾಗ, ನಾಯಿಬ್ರಾಹ್ಮಣರು ಬದುಕಿರುವವರಿಗೆ ಗಡ್ಡ ಬೆಳೆಸಿಕೊಳ್ಳಿ ಎಂದು ಆ ದಿನ ಅವುಗಳನ್ನು ಬೋಳಿಸಿ ಇಲ್ಲಿಯವರೆಗು ನಿಮಗೆ ಅಂಟಿಕೊಂಡಿರುವ ಗಡ್ಡದ ಕೂದಲು, ತಲೆಕೂದಲು ಹೇಗೆ ಈಗ ಸಂಬಂಧ ವಿಲ್ಲದಂತೆ ಹೋಗಿವೆಯೋ, ಹಾಗೆಯೇ ಮರಣಿಸಿದವರ ಜೀವಾತ್ಮ ಇಂದಿನಿಂದ ನಿಮ್ಮಜೊತೆ ಸಂಬಂಧ ಇಲ್ಲದಂತೆ ಹೋಗುತ್ತದೆ ಎಂದು ತಿಳಿಸುತ್ತಾ ಕರ್ಮ ತಂತ್ರಗಳು ಮಾಡುತ್ತಿದ್ದರು. ಹೀಗೆ ಬ್ರಾಹ್ಮಣರ ಕಾರ್ಯ ಇರುವ ಕಡೆಯೆಲ್ಲಾ ದಾಯಾದಿಗಳಾದ ನಾಯಿ ಬ್ರಾಹ್ಮಣರ ಕಾರ್ಯ ಇದೆ ಎಂದು ತಿಳಿಯಬೇಕು.

ಅನೇಕ ಕಡೆ ಸ್ಪರ್ದೆಗಿಳಿದ ಎರಡು ಗುಂಪುಗಳ ಬ್ರಾಹ್ಮಣರು ತಮ್ಮ ತಮ್ಮ ಆಧಿಪತ್ಯವನ್ನು ಸಾರಿಕೊಳ್ಳುತ್ತಾ, ಒಂದು ಗುಂಪಾದ ಬ್ರಾಹ್ಮಣರು ನಾವು **'ಭೂಸುರರೆಂದು'** ಸಾರಿಕೊಂಡರು. ಭೂಮಿಮೇಲೆ ಪ್ರತ್ಯಕ್ಷ ದೇವತೆಗಳೆಂದು ಬ್ರಾಹ್ಮಣರು ಸಾರಿಕೊಂಡಾಗ, ಎರಡನೇ ಗುಂಪಾದ ನಾಯಿಬ್ರಾಹ್ಮಣರು ನಾವು ಬ್ರಾಹ್ಮಣರಿಗಿಂತ ಶುಭಕರವಾದವರೆಂದು ಮಂಗಳ ಪ್ರದವಾದ ನಾವು ಮಂಗಳರೆಂದು (ಶುಭಕರವಾದವರೆಂದು) ಪ್ರಕಟಿಸಿಕೊಂಡರು. ಮೊದಲು ಎರಡು ಗುಂಪಿನವರಿಗೂ ಬ್ರಾಹ್ಮಣರೆಂದು ಹೆಸರಿತ್ತು. ನಾಯಿಬ್ರಾಹ್ಮಣರೆಂಬ ಹೆಸರು ಮಧ್ಯದಲ್ಲಿ ಮಂಗಳಕರವಾದವರಿಗೆ ಬಂದಿದೆ, ಆದರೆ ಮೊದಲು ಇರುತ್ತಿರಲಿಲ್ಲ. ಪೂರ್ವಕಾಲದಲ್ಲಿಯೇ ಬ್ರಾಹ್ಮಣರ ಮಧ್ಯದಲ್ಲಿ ಭೇದಾಭಿಪ್ರಾಯಗಳು ಬಂದಾಗ **'ಭೂಸುರರೆಂದು' ಒಂದು ಗುಂಪಿಗೆ 'ಮಂಗಳರೆಂದು'** ಒಂದು ಗುಂಪಿಗೆ ಹೆಸರು ಬಂದಿದೆ. ಮಂಗಳರೆಂಬ ಹೆಸರು ಒಂದು ಗುಂಪಿಗೆ ಹಾಗೆ ನಿಂತುಹೋಗಿ, ಭೂಸುರರೆಂಬ ಹೆಸರು ಮತ್ತೊಂದು ಗುಂಪಿಗೆ ಅಷ್ಟಾಗಿ ಪ್ರಚಾರವಾಗದೆ ಬ್ರಾಹ್ಮಣರೆಂಬ ಹೆಸರಾಗಿಯೇ ನಿಂತುಹೋಗಿದೆ. ನೀನಾ ನಾನಾ ದೊಡ್ಡವನೆಂದು ಪೋಟಿಬಿಳುತ್ತಾ ಬಂದಿರುವ ಎರಡು ಗುಂಪುಗಳ ಬ್ರಾಹ್ಮಣರು ಒಬ್ಬರಿಗೊಬ್ಬರು ದ್ವೇಷಿಸಿಕೊಳ್ಳುವವರೆಗೂ ಬಂದು, ಯಾರಾದರೂ ಕಾರ್ಯನಿಮಿತ್ತವಾಗಿ ಹೋಗುವಾಗ ಮಂಗಳರು (ಕ್ಷೌರಿಕರು) ಎದುರಾದರು ಅಪಶಕುನವೆಂದು, ಆ ಕಾರ್ಯ ಭಂಗವಾಗಿಹೋಗುತ್ತದೆ ಎಂದು, ಮಂಗಳರನ್ನು ಅಮಂಗಳರನ್ನಾಗಿ ಬ್ರಾಹ್ಮಣರು ಹೇಳಿ ಪ್ರಚಾರ ಮಾಡಿದರು. ಅದನ್ನು ನೋಡಿದ ಮಂಗಳಬ್ರಾಹ್ಮಣರು ಅದೇ ವಿಧವಾದ ಅಪವಾದವನ್ನು ಬ್ರಾಹ್ಮಣರಿಗೆ ಹೊರಸಬೇಕೆಂದು ತಿಳಿದು, ಯಾರಾದರೂ ಕಾರ್ಯನಿಮಿತ್ತವಾಗಿ ಹೋಗುವಾಗ ಬ್ರಾಹ್ಮಣನು ಎದುರಾದರೆ ಅಪಶಕುನವೆಂದು, ಆ ಕಾರ್ಯ ಭಂಗವಾಗಿಹೋಗುತ್ತದೆಂದು, ಪ್ರಚಾರ ಮಾಡಿದರು. ಅಪಶಕುನಗಳಲ್ಲಿ ಇಂದಿಗೂ ಅವು ಪ್ರಚಾರದಲ್ಲಿ ಇವೆ.

ಹೀಗೆ ಕಾಲ ಕಳೆಯುತ್ತಾ ಬಂದು ಹಳಬರು ಹೋಗುತ್ತಾ ಹೊಸಬರು ಬರುತ್ತಾ ಪೂರ್ವದಲ್ಲಿರುವ ಅಭಿಪ್ರಾಯಗಳು ಬದಲಾಗಿಹೋಗಿ ಅವರ

ಹಿರಿಯರು ಏನು ಮಾಡಿದ್ದಾರೋ, ಪೂರ್ವದಲ್ಲಿರುವ ಪದ್ಧತಿಗಳೇನೋ ತಿಳಿಯದೆ, ಬ್ರಾಹ್ಮಣರು ಬ್ರಹ್ಮಜ್ಞಾನವನ್ನು ಬಿಟ್ಟು ಕೇವಲ ಬದುಕು ವುದಕ್ಕೋಸ್ಕರವೇ ಅನ್ನುವಂತೆ ಆಲಯಗಳಲ್ಲಿ ಆರಾಧನೆ ಮೊದಲುಗೊಂಡು, ಸತ್ತವರ ಕರ್ಮ ತಂತ್ರಗಳವರೆಗೂ ಮಾಡುತ್ತಿದ್ದಾರೆ. ಅಂದಿಗೂ ಇಂದಿಗೂ ಅವರು ಮಾಡುವ ಕೆಲಸಗಳಲ್ಲಿ ಸಹ ಬದಲಾವಣೆಗಳು ಮಾಡಿಕೊಂಡಿದ್ದಾರೆ. ಬ್ರಾಹ್ಮಣರು ಬ್ರಹ್ಮಜ್ಞಾನವನ್ನು ಬಿಟ್ಟು ವೇದಮಂತ್ರಗಳಲ್ಲಿ ಬಿದ್ದಿದ್ದಾರೆ. ಹಾಗೆ ಮಂಗಳರಲ್ಲಿ ಸಹ ಅರ್ಥಗಳು ತಿಳಿಯದ ಆಚಾರಗಳು ಉಳಿದುಹೋಗಿವೆ. ಅವರು ಮಾಡುತ್ತಿರುವ ಕೆಲಸಗಳೇ ಈ ದಿನ ಮಾಡುತ್ತಿದ್ದರೂ ಅಂದಿನ ಕೆಲಸಗಳು ಭಾವಯುಕ್ತವಾಗಿರುತ್ತಿದ್ದವು. ಈ ದಿನ ಭಾವರಹಿತವಾಗಿ ಕೇವಲ ವೃತ್ತಿ ವಿದ್ಯೆ ಅನ್ನುವಂತಿವೆ. ಹೀಗೆ ಎರಡು ಗುಂಪಿನವರು ದಾರಿತಪ್ಪಿ ಹಳೆ ವಿಧಾನವನ್ನು ಅರ್ಥವನ್ನು ಬಿಟ್ಟು ಕೆಲಸಗಳು ಮಾಡುತ್ತಿದ್ದಾರೆ.

ಪೂರ್ವಕಾಲದ ಬ್ರಾಹ್ಮಣರು ಮಂಗಳರು (ಕ್ಷೌರಿಕರು) ಸಮಾನವಾಗಿ ಒಬ್ಬರಿಗೊಬ್ಬರು ಪೋಟಿಬೀಳುತ್ತಾ ಬಂದರೂ, ಸ್ವಲ್ಪಕಾಲಕ್ಕೆ ಮಂಗಳರೇ ಹೆಚ್ಚಾಗಿ ಪ್ರಚಾರದೊಳಗೆ ಬಂದು, ಅವರದೇ ರಾಜರ ಹತ್ತಿರವೂ ಪ್ರಜೆಗಳ ಹತ್ತಿರವೂ ಮೇಲ್‌ಗೈಯಾಗಿ ಬದಲಾಗಿದೆ. ಅದನ್ನು ನೋಡಿದ ಬ್ರಾಹ್ಮಣರು ಪಟ್ಟುಹಿಡಿದು ಮಂಗಳರನ್ನು ಕೆಳಗೆ ಕಳುಹಿಸಿ ತಾವು ಮೇಲಕ್ಕೆ ಬರಬೇಕೆಂದು ಬುದ್ಧಿಯನ್ನು ಉಪಯೋಗಿಸಿ ಅದಕ್ಕೆ ತಕ್ಕ ಉಪಾಯವನ್ನು ಯೋಚಿಸಿದರು. ತಾವು ಸಹ ರಾಜರಜೊತೆ ಸ್ನೇಹ ಮಾಡಿ, ಅಧಿಕಾರವನ್ನು ತಮ್ಮಕಡೆ ಉಪಯೋಗಿಸಿಕೊಂಡು ತಮ್ಮ ಪ್ರಾಬಲ್ಯವನ್ನು ಸಂಪಾದಿಸಿಕೊಳ್ಳ ಬೇಕೆಂದುಕೊಂಡರು. ಅಂದಿನಿಂದ ಹೆಚ್ಚಾಗಿ ರಾಜರ ಸಾನ್ನಿಧ್ಯದಲ್ಲಿ ಸೇರಿ, ಅವರಿಗೆ ಅನೇಕ ವಿಷಯಗಳು ಬೋಧಿಸುತ್ತಾ, ರಾಜರ ಹತ್ತಿರ ಆಸನವನ್ನು ಸಂಪಾದಿಸಿ ರಾಜಗುರುಗಳ ಗೌರವ ಹೊಂದಿ ಚಲಾವಣೆ ಆಗುತ್ತಾ, 'ಮಂಗಳರಿ' ಗಿಂತ ಹೆಚ್ಚಿನ ಪ್ರಾಬಲ್ಯವನ್ನು ಎಲ್ಲಾ ವಿಧಗಳ ದೊಡ್ಡ ಸ್ಥಾನವನ್ನು ಸಂಪಾದಿಸಿಕೊಂಡರು. ಯಾವ ಪಥಕ ಇಲ್ಲದಂತೆ ಸಾಧಾರಣವಾಗಿ ತಮ್ಮ ಕೆಲಸಗಳು ಮಾಡುತ್ತಾ ಬಂದು ಸ್ವಲ್ಪಕಾಲಕ್ಕೆ

ತಾವು ಬ್ರಾಹ್ಮಣರಿಗಿಂತ ಬಹಳ ಕಡಿಮೆಯವರಾಗಿ ಇರುವಂತೆ, ತಮಗಿಂತ ಅವರು ಎಷ್ಟೋ ಪಟ್ಟು ಹೆಚ್ಚಾಗಿರುವಂತೆ ಮಂಗಳರು ತಿಳಿದುಕೊಂಡರು. ತಾವು ಹೇಗಾದರು ಬ್ರಾಹ್ಮಣರಿಗೆ ಸಮಾನವಾಗಿರಬೇಕೆಂದು ತಿಳಿದು, ತಾವು ಸಹ ಅವರಂತೆ ರಾಜರ ಹತ್ತಿರವೇ ಸ್ಥಾನ ಸಂಪಾದಿಸಿಕೊಳ್ಳಬೇಕೆಂದು ಯೋಚಿಸಿದರು. ಒಂದುದಿನ ಶ್ರೀಕೃಷ್ಣದೇವರಾಯರ ಆಸ್ಥಾನದಲ್ಲಿ ಮಂಗಳಿ ಒಬ್ಬನು " ನಾವು ಸಹ ಒಂದುಕಾಲದಲ್ಲಿ ಬ್ರಾಹ್ಮಣರೆ, ನಮ್ಮನ್ನು ಸಹ ಬ್ರಾಹ್ಮಣರ ಸ್ಥಾನ ಕಲ್ಪಿಸಿ ಆದರಿಸಬೇಕೆಂದು" ಶ್ರೀಕೃಷ್ಣದೇವರಾಯರನ್ನು ಕೋರಿದಾಗ ಆಗ ಅವರ ಪೂರ್ವ ವಿಚಾರಗಳು ತಿಳಿಯದ ರಾಯರು, ಬ್ರಾಹ್ಮಣರನ್ನು ನೋಡಿ ಈತನನ್ನು ಸಹಾ ಬ್ರಾಹ್ಮಣನನ್ನಾಗಿ ಮಾಡೆಂದನಂತೆ. ಆಗ ಅವರು ರಾಯರ ಆಜ್ಞೆಯ ಪ್ರಕಾರ ಆತನನ್ನು ತುಂಗಭದ್ರಾನದಿಗೆ ತೆಗೆದುಕೊಂಡುಹೋಗಿ ಮಂತ್ರಗಳು ಓದುತ್ತಾ, ನೀರನ್ನು ಹಾಕುತ್ತಾ ಇಂದಿಗೆ ನೀಚತ್ವ ಹೋಗಿ ಬ್ರಾಹ್ಮಣತ್ವ ಬರಬೇಕೆಂದು ಸಂಸ್ಕೃತದಲ್ಲಿ ಮಂತ್ರಗಳನ್ನು ಹೇಳುತ್ತಿದ್ದರಂತೆ. ಆ ವಿಷಯ ಬ್ರಾಹ್ಮಣರ ಕುಲಸ್ಥನಾದ ತೆನಾಲಿ ರಾಮಕೃಷ್ಣನಿಗೆ ತಿಳಿಯಿತು. **ಮಂಗಳರು** ನಮಗೆ ಸಾಟಿಯಾ ಎಂದು ಆಗ್ರಹಿಸಿದ ರಾಮಕೃಷ್ಣನು ಆ ಕಾರ್ಯವನ್ನು ಭಂಗ ಮಾಡುವುದಕ್ಕೆ ಯೋಚಿಸಿ, ಒಂದು 'ನಾಯಿ'ಯನ್ನು ತನ್ನ ಹಿಂಬದಿ ಇಟ್ಟುಕೊಂಡು ತಾನು ಸಹ ತುಂಗಭದ್ರಾನದಿಗೆ ಹೋದನು. ಅಲ್ಲಿ ನಡೆಯುತ್ತಿರುವ ತಂತನ್ನು ನೋಡಿ, ತಾನು ಅವರಿಗಿಂತ ಕೆಲವು ಗಜಗಳ ಮೇಲ್ಭಾಗಕ್ಕೆ ಹೋಗಿ, ನಾಯಿ ಕತ್ತಿನಲ್ಲಿ ಹಗ್ಗವನ್ನು ಕಟ್ಟಿ ಹಗ್ಗವನ್ನು ಕಾಲಿನ ಕೆಳಗೆ ಅದಿಮಿಟ್ಟುಕೊಂಡು ತಾನು ಮಂತ್ರಗಳು ಹೇಳುತ್ತಾ, ಈ ನಾಯಿ ಕಾಮಧೇನಾ (ಹಸುವಾ)ಗಿ ಬದಲಾಗಬೇಕೆಂದು ಹೇಳುತ್ತಾ ನಾಯಿಯ ಮುಖದ ಮೇಲೆ ನೀರು ಚಲ್ಲುತ್ತಿದ್ದನಂತೆ. ಆಗ ಆ ನಾಯಿಗೆ ನೀರು ತಾಕುವುದರಿಂದ ಸಹಿಸಿಕೊಳ್ಳಲಾರದೆ ಅರಚುತ್ತಾ ನೀರಿನಲ್ಲಿ ಎಗರುವುದಕ್ಕೆ ಪ್ರಾರಂಭಿಸಿತು. ನೀರು ಬೀಳುವುದು ಮೇಲ್ಭಾಗದಲ್ಲಿ ಇರುವುದರಿಂದ ನಾಯಿ ತುಳಿದ ನೀರು ಉಳಿದ ಬ್ರಾಹ್ಮಣರಕಡೆ ಬರುತ್ತಿದ್ದವು. ಮೇಲಾಗಿ ನಾಯಿ ಅಲ್ಲಿ ಅರಚುವುದು, ನೀರು ಎಲ್ಲವೂ ಕೊಳೆಯಾಗುವುದು ಅವರಿಗೆ ಸರಿಹೋಗದೆ ರಾಮಕೃಷ್ಣನನ್ನು ದೂರವಾಗಿ ಹೋಗೆಂದು, ನಿನ್ನಿಂದ ನಮ್ಮ ಕಾರ್ಯ

ಕೆಟ್ಟುಹೋಗುತ್ತಿದೆ ಎಂದು, ನಾಯಿ ಶರೀರದ ಮೇಲೆ ಬಿದ್ದಿರುವ ನೀರು ತಮ್ಮಕಡೆ ಹರಿಯುತ್ತಿದೆಂದು, ಎಷ್ಟು ಹೇಳಿದರೂ ರಾಮಕೃಷ್ಣ ಕೇಳಲಿಲ್ಲ. ಮೇಲಾಗಿ ತೆನಾಲಿ ರಾಮಕೃಷ್ಣನೇ ಅವರ ಮೇಲೆ ವಾದನೆಗೆ ಇಳಿದನು. ಆಗ ಮಾಡುವುದೇನಿಲ್ಲದೆ ಆ ವಿಷಯವನ್ನು ರಾಜರಿಗೆ ತಿಳಿಸಿ ನಮ್ಮ ಕಾರ್ಯ ರಾಮಕೃಷ್ಣನಿಂದ ಭಂಗವಾಗಿದೆ ಎಂದರು. ಆಗ ರಾಯರು ರಾಮಕೃಷ್ಣ ಮಾಡಿದ ಕೆಲಸಕ್ಕೆ ಆಗ್ರಹಿಸಿ ಸಭೆಯೊಳಗೆ ಆತನನ್ನು ಕರೆಸಿದನು. ನಾನು ಮಂಗಳನನ್ನು ಬ್ರಾಹ್ಮಣನಾಗಿ ಮಾಡೆಂದು ಹೇಳಿದಾಗ ಅವರಕೆಲಸಕ್ಕೆ ಏಕೆ ಅಡ್ಡ ಹೋಗಿದ್ದೀಯಾ ಎಂದು ರಾಮಕೃಷ್ಣನನ್ನು ದಂಡಿಸಿದನು. ಆಗ ರಾಮಕೃಷ್ಣನು ವಿನಯವಾಗಿ ನಾಯಿಯನ್ನು ಹಸುವಾಗಿ ಮಾಡಬೇಕೆಂದು ಅಲ್ಲಿಗೆಹೋಗಿ ನಾಯಿಯನ್ನು ಮಂತ್ರೋದಕದಿಂದ ಶುದ್ಧಿ ಮಾಡುತ್ತಿದ್ದೆನು. ಅವರಿಗೆ ನಾನೇನು ಅಡ್ಡ ಬರದೆ ನನ್ನ ಕೆಲಸವನ್ನು ನಾನು ಮಾಡಿಕೊಳ್ಳುತ್ತಿದ್ದೇನೆಂದನು. ಆ ಮಾತು ಕೇಳಿದ ರಾಯರು ಆಶ್ಚರ್ಯಪಟ್ಟು ಮಂತ್ರೋದಕದಿಂದ ಶುದ್ಧಿ ಮಾಡಿದರೆ ನಾಯಿ ಗೋವಿನಂತೆ ಹೇಗೆ ಬದಲಾಗುತ್ತದೆ? ಎಂದು ಕೇಳಿದನು. ಅದಕ್ಕೆ ರಾಮಕೃಷ್ಣ ಜಾಣ್ಮೆಯಿಂದ ಮಂತ್ರೋದಕದಿಂದ ಶುದ್ದಿ ಮಾಡಿದರೆ **'ಮಂಗಳನು' 'ಬ್ರಾಹ್ಮಣನಾಗಿ'** ಹೇಗೆ ಬದಲಾಗುತ್ತಾನೋ, ಹಾಗೆ ನಾಯಿ ಸಹ ಬದಲಾಗುತ್ತದೆಂದು ಸಮಾಧಾನ ಹೇಳಿದನು. ರಾಯರು ವಿಚಿತ್ರವಾಗಿ "ಏನು ಮಾಡಿದರೂ ನಾಯಿ ಹಸುವಾಗಿ ಬದಲಾಗುವುದು ಅಸಂಭವ" ಅಂದನು. ತಕ್ಷಣ ರಾಮಕೃಷ್ಣ "ಆದರೆ ಏನು ಮಾಡಿದರೂ ಮಂಗಳನು ಬ್ರಾಹ್ಮಣನಾಗಿ ಬದಲಾಗುವುದು ಅಂಸಂಭವ" ಎಂದು ಸಮಾಧಾನ ಹೇಳಿದ್ದಾನೆ. ರಾಮಕೃಷ್ಣ ಒಂದರ ವಾಕ್ ಚಾತುರ್ಯಕ್ಕೆ ರಾಯರು ಮೆಚ್ಚಿಕೊಂಡು ನಾನು ಮಂಗಳನಿಗೆ ಕೊಟ್ಟಿರುವ ಮಾತು ಏನಾಗಬೇಕೆಂದಾಗ? ಅದಕ್ಕೆ ರಾಮಕೃಷ್ಣನು ಮಾರ್ಗ ಯೋಚಿಸಿ ರಾಜರಿಗೆ ಸಂತೋಷ ಆಗುವಂತೆ "ಪ್ರಭೂ! ಮಂಗಳನನ್ನು ಬ್ರಾಹ್ಮಣನಾಗಿ ಬದಲಾವಣೆ ಮಾಡುತ್ತೇನೆಂದು ತಾವು ಮಾತು ಕೊಟ್ಟಿದ್ದೀರಾ. ಹಾಗೆ ಬದಲಾಗುವುದಕ್ಕೆ ನನ್ನ ನಾಯಿ ಅಡ್ಡಬಂದ ಮಾತು ನಿಜವೇ. ರಾಜರ ಮಾತು ವ್ಯರ್ಥವಾಗದಂತೆ ಇರುವುದಕ್ಕೆ ನಾಯಿ ಕಾರಣದಿಂದ ಆ ಕಾರ್ಯ ನಿಂತುಹೋಗಿದೆ ಆದ್ದರಿಂದ, ಇಂದಿನಿಂದ

ಮಂಗಳನನ್ನು **ನಾಯಿಬ್ರಾಹ್ಮಣ** ಎಂದು ಕರೆಯುವಂತೆ ಊರೂರು ಡಂಗೂರ ಹಾಕಿಸಬೇಕೆಂದು ನನ್ನ ಮನವಿ. ಮಂಗಳನು ಬ್ರಾಹ್ಮಣನಾಗಿ ಬದಲಾಗುವುದಕ್ಕೆ ನಾಯಿಅಡ್ಡ ಬಂದಿರುವ ಕಾರಣದಿಂದ ನಾಯಿಬ್ರಾಹ್ಮಣ ಎಂದು ಇಂತಹ ರಾಯರ ಕಾಲದಲ್ಲಿ ಈ ಕಾರ್ಯ ನಡೆದು ಈ ಹೆಸರು ಬಂದಿದೆ ಎಂದು ತಮ್ಮ ಹೆಸರು ಸ್ಥಿರಸ್ಥಾಯಿಯಾಗಿ ಇರುವಂತೆ ಇದೇ ತಕ್ಕ ಹೆಸರು" ಎಂದು ಹೇಳಿದನು. ರಾಮಕೃಷ್ಣನ ತಿಳುವಳಿಕೆಗೆ ಸಂತೋಷಿಸಿದ ರಾಯರು ಅಂದಿನಿಂದ **ಮಂಗಳನನ್ನು** ನಾಯಿ ಬ್ರಾಹ್ಮಣನಾಗಿ ಕರೆಯುವಂತೆ ಡಂಗೂರ ಹೊಡೆಸಿದನು. ಹೀಗೆ ಪೂರ್ವದಿಂದ ನಾಯಿಬ್ರಾಹ್ಮಣ ಅನ್ನುವ ಹೆಸರು ಇಲ್ಲದಿದ್ದರೂ, ರಾಯರ ಕಾಲದಿಂದ ಆ ಹೆಸರು **ಮಂಗಳರಿಗೆ** ಬಂದಿದೆ.

ಪೂರ್ವದಲ್ಲಿ ವಾಸ್ತವಕ್ಕೆ ಬ್ರಾಹ್ಮಣರೆ ಅದರೂ, ಆಚಾರ ವ್ಯವಹಾರಗಳಲ್ಲಿ ಬೇರೆಯಾಗಿ ಮತ್ತೊಂದು ಗುಂಪಾಗಿ ಬದಲಾದ ಅವರು ಈ ದಿನ ಮಂಗಳರಾಗಿ ಕರೆಯಲ್ಪಟ್ಟರೂ, ನಾಯಿಬ್ರಾಹ್ಮಣ ಅನ್ನುವ ಹೆಸರು ಅಂಟಿಸಲ್ಪಟ್ಟಿದೆ. ರಾಯರ ಆಸ್ಥಾನ ಹಂಪೆ, ಹಂಪೆ ಈದಿನ ಕರ್ನಾಟಕದಲ್ಲಿ ಇದೆ. ಆದಿನ ಹಂಪೆಯು ಸಹ ಆಂಧ್ರದಲ್ಲಿಯೇ ಇತ್ತು. ಆಗ ಕನ್ನಡ ಭಾಷೆ ಸ್ವಲ್ಪ ಹಂಪೆಯಲ್ಲಿ ಇತ್ತು. ಈ ದಿನ ಬ್ರಾಹ್ಮಣರು ಸಂಘದಲ್ಲಿ ಗೌರವವಾಗಿ ಇದ್ದರೆ, ನಾಯಿಬ್ರಾಹ್ಮಣರು ಅವರಿಗಿಂತ ಕಡಿಮೆಯವರಾಗಿದ್ದಾರೆ. ಇದೆಲ್ಲವೂ ಕಾಲಕ್ರಮವಾಗಿ ಬದಲಾದ ವಿಚಿತ್ರವೆಂದು ತಿಳಿಯಬೇಕು. ಆದರೆ ಪ್ರಜೆಗಳಿಗೇನೋ ಹಣ ತೆಗೆದುಕೊಂಡರೂ ಪ್ರತಿಫಲವಾಗಿ ಕೈಗಳ ರೂಪದಲ್ಲಿ ಉಪಯೋಗಪಡುವವರು ನಾಯಿ ಬ್ರಾಹ್ಮಣ ರೆಂದು, ಕೇವಲ ಮಾತುಗಳು ಹೇಳಿ ಸರಿಮಾಡುವವರು ಬ್ರಾಹ್ಮಣರೆಂದು ಪ್ರಜೆಗಳು ಅಂದುಕೊಳ್ಳುತ್ತಿದ್ದಾರೆ.

ಅದೇ ವಿಷಯವನ್ನೇ ವೇಮನಯೋಗಿ ಸಹ ತನ್ನ ಪದ್ಯದಲ್ಲಿ ಮಂತ್ರಜಲಕ್ಕಿಂತ ಮಂಗಳಜಲ ಹೆಚ್ಚು ಅಂದಿದ್ದಾನೆ. ಬ್ರಾಹ್ಮಣನು ಹಣ ತೆಗೆದುಕೊಂಡು ಮಂತ್ರದ ನೀರನ್ನು ತಲೆಮೇಲೆ ಚಲ್ಲಿದರೆ ಅದರಿಂದ ಸುಖ ಕಾಣಿಸುವುದಿಲ್ಲ. ಅದೇ ಹಣ ತೆಗೆದುಕೊಂಡು ತಲೆಬೋಳಿಸುವುದಕ್ಕೆ ಕ್ಷೌರಿಕನು

ನೀರು ಚಲ್ಲಿ ತಲೆಮೇಲೆ ಕೈ ಹಿಡುತ್ತಲೇ ಎಷ್ಟೋ ಹಾಯಾಗಿರುತ್ತದೆ. ಆದ್ದರಿಂದಲೇ ವೇಮನ ಹಾಗೆ ಹೇಳಿದ್ದಾನೆ. ಈ ದಿನ ಸಮಾಜದಲ್ಲಿ ಬ್ರಾಹ್ಮಣರಿಗಿಂತ ಮಂಗಳರೇ ಹೆಚ್ಚಾಗಿ ಉಪಯೋಗಪಡುತ್ತಿದ್ದಾರೆ. ಹಾಗಿದ್ದರೂ ಪೂರ್ವ ವಿಚಾರಗಳು ತಿಳಿಯದಿರುವುದರಿಂದ ಬ್ರಾಹ್ಮಣರು, ಮಂಗಳರು ಒಂದೇ ಜಾತಿ ಎಂದು ತಿಳಿಯದಂತೆ ಹೋಗಿದೆ. ತಮ್ಮ ವಿಷಯ ತಮಗೇ ತಿಳಿಯದ ಮಂಗಳರು ಈಗ ಇದ್ದಾರೆ. ಬ್ರಾಹ್ಮಣ ಅನ್ನುವ ಹೆಸರಿಗಿಂತ ಮಂಗಳ ಎನ್ನುವ ಹೆಸರು ದೊಡ್ಡದೆಂದು ತಿಳಿಯದ ಕ್ಷೌರಿಕರು ಈ ದಿನ ಇದ್ದಾರೆ. ಬ್ರಾಹ್ಮಣ ಅಂದರೆ ಕೇವಲ ಜ್ಞಾನವೆಂದು, ಮಂಗಳ ಎಂದರೆ ಮೋಕ್ಷವೆಂದು, ಜ್ಞಾನ ಮಾರ್ಗವಾಗಿದರೆ ಗಮ್ಯ ಮೋಕ್ಷವೆಂದು ತಿಳಿಯದ ಮಂಗಳರು ಈ ದಿನ ಇದ್ದಾರೆ. ಪ್ರಪಂಚದಲ್ಲಿಯೇ ಅತ್ಯುನ್ನತವಾದ ಶಬ್ಧ ಮಂಗಳವೆಂಬ ಶಬ್ಧವೆಂದು, ಅದೇ ಮಂಗಳವೆಂಬ ಮಾತನ್ನು ದೇವಾಲಯಗಳಲ್ಲಿ ಸಹ ದೇವರ ಆರಾಧನೆಯ ಕೊನೆಯಲ್ಲಿ ಆರತಿಯಲ್ಲಿ ಕೊನೆಯದಾಗಿ ಹೇಳುತ್ತಿರುತ್ತಾರೆಂದು ತಿಳಿಯದವರಿರುವುದರಿಂದ, ಮಂಗಳರು ಬ್ರಾಹ್ಮಣರಿಗಿಂತ ಎಲ್ಲಾ ವಿಧಗಳಲ್ಲಿ ಕೆಳಮಟ್ಟದಲ್ಲಿದ್ದಾರೆ. ಪೂರ್ವದಲ್ಲಿ ಗುಡಿಯಲ್ಲಿ ಪ್ರಾರಂಭವಾದ ತಲೆಬೋಳಿಸುವ ಕಾರ್ಯ ಈ ದಿನ ಬದುಕುವುದಕ್ಕೋಸ್ಕರ ವೆಂಬಂತೆ ಬಜಾರಿನಲ್ಲಿನ ಷಾಪುಗಳಿಗೆ ಬದಲಾಗಿದೆ. ಮುಖ್ಯವಾಗಿ ಹೇಳಿಕೊಳ್ಳು ವಂತಹ ಸಂಗತಿ ಏನೆಂದರೆ! ಗೌರವಪ್ರದವಾದ ಮತ್ತು ಪವಿತ್ರವಾದ ಮಂಗಳವೆಂಬ ಪದವನ್ನು ಬಿಟ್ಟು, ಅಗೌರವವಾದ ಮತ್ತು ಅಪವಿತ್ರವಾದ **"ನಾಯಿ"** ಅನ್ನುವ ಹೆಸರನ್ನು ತಗಲಿಸಿಕೊಂಡು **ನಾಯಿಬ್ರಾಹ್ಮಣ"** ಎಂದು ಹೆಸರು ಇಟ್ಟುಕೊಳ್ಳುವುದು ವಿಚಿತ್ರ ತಾನೆ! ಯಾವ ಷಾಪುಗಳಲ್ಲಿ ನೋಡಿದರೂ ನಾಯಿ ಬ್ರಾಹ್ಮಣ ಸಂಘ ಎಂದು ಬೋರ್ಡ್ ಇಟ್ಟುಕೊಳ್ಳುವುದು ಹಾಸ್ಯಾಸ್ಪದವಲ್ಲವೆ! ಓದು ಬಾರದ ಕೆಲವು ಜನರಿಗೆ ನಾಯಿ ಎಂದರೆ ಏನೆಂದು ಅರ್ಥ ತಿಳಿಯದೆ ಆ ಹೆಸರು ಇಟ್ಟುಕೊಂಡಿರಬಹುದು. ಆದರೆ ಓದಿಕೊಂಡವರು ಎಷ್ಟೋ ಜನ ಆ ಕುಲದಲ್ಲಿ ಇದ್ದು, ಇದು ನಮಗೆ ಒಳ್ಳೆಯ ಹೆಸರಾ ಕೆಟ್ಟಹೆಸರಾ ಎಂದು ಯೋಚಿಸದೆ ಹೋಗುವುದು ವಿಚಿತ್ರವಲ್ಲವೆ! ಅಂತಹ ಅರ್ಥದಿಂದ ನಮ್ಮದು ನಾಯಿ ಬ್ರಾಹ್ಮಣ ಸಂಘವೆಂದು ಬೋರ್ಡ್ ಇಟ್ಟುಕೊಳ್ಳುವುದು

ಒಳ್ಳೆಯದಾ? ಈಗಲಾದರೂ ಕಣ್ತೆರೆದು ಸಮಾಜದಲ್ಲಿ ಅವಮಾನವನ್ನು ಉಂಟುಮಾಡುವ ಆ ಹೆಸರನ್ನು ಬಿಟ್ಟು ಪೂರ್ವದ ಆಚರಣೆಯಿಂದ ಅರ್ಥದಿಂದಲೇ ಇದ್ದೂ, ಮೊದಲಿನ ರೀತಿಯಲ್ಲಿಯೇ ಮಂಗಳಪ್ರದವಾದ ಬ್ರಾಹ್ಮಣರಾಗಿ ತಮ್ಮಕೆಲಸ ಪವಿತ್ರವಾದುದೆಂದು, ನಮ್ಮ ಹೆಸರು ನಾಯಿಬ್ರಾಹ್ಮಣರು ಅಲ್ಲವೆಂದು ಸಮಾಜಕ್ಕೆ ಸಾರಬೇಕು. ಹಾಗೆ ಸಾರುವುದಕ್ಕೆ ಮೊದಲು ಜ್ಞಾನವನ್ನು ತಿಳಿದುಕೊಂಡು ಕುಲ ಆಚಾರವಾದ ನಾದವನ್ನು ಮೊಳಗಿಸುವುದಕ್ಕೂ, ತಲೆಬೋಳಿಸುವುದಕ್ಕು ದೈವಸಂಬಂಧ ಅರ್ಥವನ್ನು ಹೇಳಿ ನಿಜವಾದ ಮಂಗಳ ಪ್ರದಾತರಾಗಿ ಮಂಗಳರು ಇರಬೇಕೆಂದು ತಿಳಿಸುತ್ತಿದ್ದೇನೆ.

# ಗುರುಪೌರ್ಣಮಿ

ಕೊನೆ ಅಥವಾ ಅಂತ್ಯ ಎಂದರೆ ಎಲ್ಲರಿಗೂ ತಿಳಿದಿದೆ. ಪ್ರಪಂಚದಲ್ಲಿ ಎಲ್ಲದಕ್ಕೂ ಮೊದಲು ಕೊನೆ ತಪ್ಪದೆ ಇರುತ್ತವೆ. ಪ್ರಪಂಚದಲ್ಲಿ ಮೊದಲು ಅಂತ್ಯ ಇಲ್ಲದಿರುವವು ಯಾವು ಇಲ್ಲ. ಪ್ರಪಂಚವೇ ಆದಿ ಅಂತ್ಯದಿಂದ ಕೂಡಿಕೊಂಡಿದೆ. ಹೆಸರಿಗೂ ಊರಿಗೂ, ಗೀತೆಗೂ ಬರಹಕ್ಕೂ, ಕೆಲಸಕ್ಕೂ ಕಾರ್ಯಕ್ಕೂ, ಆಟಕ್ಕು ಪಾಠಕ್ಕು, ಹೊಲಕ್ಕು ಸಾಲಿಗೂ ಎಲ್ಲದಕ್ಕೂ ಮೊದಲು ಕೊನೆ ಇದ್ದೇ ಇವೆ. ಆದ್ದರಿಂದಲೇನೋ ಯಾರನ್ನಾದರು ಏನನ್ನಾದರು ನಿನ್ನ ಅಂತ್ಯನೋಡುತ್ತೇನೆ ಅನ್ನುತ್ತಿರುತ್ತೇವೆ. ಇದರಿಂದ ಕೊನೆ ಎಲ್ಲರಿಗೂ, ಅಂತ್ಯ ಎಲ್ಲವುಗಳಿಗೂ ಇದೆಯೆಂದು ತಿಳಿಯುತ್ತಿದೆ. ಎಲ್ಲದಕ್ಕೂ ಅಂತ್ಯ ಇದ್ದರೂ, ಒಂದೇ ಒಂದಕ್ಕೆ ಅಂತ್ಯವಿಲ್ಲ. ಅದೇ ಗೋಳ ಅಥವಾ ಗುಂಡಾಕೃತಿ. ಗುಂಡು ಅನ್ನುವ ಪದದಿಂದ ಗುರು ಅನ್ನುವ ಪದವೂ ಸಹ ಹುಟ್ಟಿದೆ. ಪರಮಾತ್ಮನಿಗೂ ಸಹ ಆದಿ ಅಂತ್ಯವು ಇಲ್ಲ. ಆದಿ ಮಧ್ಯ ಅಂತ್ಯ ರಹಿತನಾದ ಪರಮಾತ್ಮ ಭೂಮಿಮೇಲೆ ಸಾಕಾರರೂಪದಿಂದ ಭಗವಂತನಾಗಿ ಹುಟ್ಟಿದಾಗ ಆತನನ್ನೇ ಗುರು ಅನ್ನುತ್ತಿದ್ದೇವೆ. ಆದಿ ಅಂತ್ಯಗಳಿಲ್ಲದಿರುವುದು ಆದ್ದರಿಂದ ಅದನ್ನೇ ಗುರು ಅನ್ನುತ್ತಿದ್ದೇವೆ. ಪರದಲ್ಲಿನ ಪರಮಾತ್ಮನಿಗು, ಇಹದಲ್ಲಿನ ಗುರುವಿಗು ಮೊದಲು

ಕೊನೆಗಳು ಇಲ್ಲವೆಂದು ತಿಳಿಯಬೇಕು. ಇದರಿಂದ ಪರಮಾತ್ಮ ಎಂದರೂ, ಭಗವಂತನೆಂದರೂ, ಗುರು ಎಂದರೂ ಮೂವರು ಒಂದೇ ಎಂದು ತಿಳಿಯುತ್ತಿದೆ.

ಪೂರ್ವದಲ್ಲಿ ಕೆಲವರು ಹಿರಿಯರು ಗುರು ಗುಂಡುಕಲ್ಲಿನಂತಹವನೆಂದು ಗಾದೆಯಾಗಿ ಅನ್ನುತ್ತಿದ್ದರು. ಗುಂಡುಕಲ್ಲಿಗೂ ಸಹ ಮೊದಲು ಕೊನೆಗಳಿರುವುದಿಲ್ಲ. ಆದ್ದರಿಂದ ಗುರುವನ್ನು ಗುಂಡುಕಲ್ಲಿಗೆ ಹೋಲಿಸಿದ್ದಾರೆ. ಗುರು ಎಂದರೆ ಕೇಂದ್ರ ಎಂದು ಸಹ ಅರ್ಥ ಇದೆ. ಜ್ಞಾನಕ್ಕೆ ಕೇಂದ್ರವಾದವನು ಗುರು. ಜ್ಞಾನವೆಂಬುವುದು ಎಲ್ಲಿ ಯಾರಿಂದ ತಿಳಿಯಲ್ಪಡುತ್ತಿದ್ದರೂ, ಅಂದರೆ ಎಲ್ಲಾದರು ಯಾವ ಬೋಧಕರು ಹೇಳುತ್ತಿದ್ದರೂ ಅದು ಮೊದಲ ಜ್ಞಾನಕೇಂದ್ರವಾದ ಗುರುವಿನಿಂದಲೇ ಬಂದಿರುತ್ತದೆ. ಅಪಾರ ಜ್ಞಾನಕೇಂದ್ರ, ವಾಸ್ತವ ಧರ್ಮನಿಲಯ ಗುರುವೇ ಆಗುತ್ತಾನೆ. ಪರಮಾತ್ಮ ಭೂಮಿಮೇಲೆ ಅವತರಿಸಿದಾಗ ಭಗದಿಂದ ಹುಟ್ಟಿದವನಾದ್ದರಿಂದ ಭಗವಂತನೆಂದು, ಆದಿ ಅಂತ್ಯಗಳು ಇಲ್ಲದವನು ಆದ್ದರಿಂದ ಗುರುವೆಂದು ಹೇಳಲ್ಪಡುತ್ತಿದ್ದಾನೆ. ಜ್ಯೋತಿಷ್ಯಶಾಸ್ತ್ರದ ಪ್ರಕಾರ ಜ್ಞಾನಕ್ಕೆ ಚಿಹ್ನೆ ಚಂದ್ರನು, ಸಂಪೂರ್ಣ ಜ್ಞಾನಕ್ಕೆ ಚಿಹ್ನೆ ಪೌರ್ಣಮಿ ದಿನ ಬಂದಿರುವ ದುಂಡನೆಯ ಚಂದ್ರನು. ಪೌರ್ಣಮಿ ಚಂದ್ರನು. ಪೂರ್ಣ ಜ್ಞಾನಕ್ಕೆ ಗುರುತು. ಮಾನವರು ದೈವವಾದ ಗುರುವನ್ನು ಗುರುತು ಮಾಡಿಕೊಳ್ಳುವಂತೆ ವರ್ಷಕ್ಕೊಂದು ಪೌರ್ಣಮಿಯನ್ನು ಗುರುಪೌರ್ಣಮಿಯಾಗಿ ಹಿರಿಯರು ನಿರ್ಣಯಿಸಿದ್ದಾರೆ.

ಆದಿ ಅಂತ್ಯಗಳು ಇಲ್ಲದವನೆಂಬ ಅರ್ಥಹೊಂದಿದ ಗುರುವನ್ನು ಗುರುತು ಮಾಡಿಕೊಂಡು, ಸಂಪೂರ್ಣ ಜ್ಞಾನವಾಗಿ ಹುಣ್ಣಿಮೆ ಚಂದ್ರನ ದಿನವಾದ ಪೌರ್ಣಮಿಯನ್ನು ಗುರುಪೌರ್ಣಮಿಯಾಗಿ ತಿಳಿದು, ಭಗವಂತನಾದ ಗುರುವನ್ನು ಆರಾಧಿಸುವುದೇ ಗುರುಪೌರ್ಣಮಿ ಒಂದರ ಅಂತರಾರ್ಥ. ಆಚಾರವಿದ್ದು ಅರ್ಥತಿಳಿಯದ ಪ್ರಜೆಗಳಿಗೆ ಗುರುವೆಂದರೆ ಏನೋ, ಗುರುಪೌರ್ಣಮಿ ಎಂದರೆ ಏನೋ ತಿಳಿದಿಲ್ಲ. ಅರ್ಥ ಅಂತರಾರ್ಥ ತಿಳಿಯದ ಪ್ರಜೆಗಳಿಗೆ ದೇವರ್‍ಯಾರೋ, ದೆವ್ವ ಯಾವುದೆೊ, ಗುರುಯಾರೋ, ಬೋಧಕನ್ಯಾರೋ ತಿಳಿಯದು. ಆ ಸಂದರ್ಭದಲ್ಲಿ ತಿಳಿಯದತನವನ್ನು ಆಸರೆಯಾಗಿ ಮಾಡಿಕೊಂಡು ಮಾಯೆ

ತಾನೇ ಗುರುವೆಂದು ಎಲ್ಲರಿಗೂ ತಿಳಿಯುವಂತೆ ಪ್ರಚಾರ ಮಾಡಿಕೊಂಡಿದೆ. ಜ್ಞಾನ ಧರ್ಮ ತನ್ನಹತ್ತಿರ ಇಲ್ಲದಿದ್ದರೂ, ತನ್ನ ಮಹಿಮೆಗಳೇ ಜ್ಞಾನವೆಂದು, ತಾನು ಮಾಡುವ ದಾನಗಳನ್ನೇ ಧರ್ಮಗಳೆಂದು, ಎಲ್ಲರಿಗೂ ಅರ್ಥವಾಗುವಂತೆ ಮಾಡಿ ಎಲ್ಲರನ್ನು ತನ್ನ ಕಡೆಗೆ ಮರಳಿಸಿಕೊಂಡಿದೆ. ತಾನೇ ಗುರುವೆಂದು ತಿಳಿಯುವಂತೆ ಮಾಯೆ ಮಾಡುವುದರಿಂದ ಪ್ರಜೆಗಳು ನಿಜವಾದ ದೈವ ಗುರುವನ್ನು ಬಿಟ್ಟು ಮಾಯೆ ಗುರುವನ್ನು ಆಶ್ರಯಿಸುವುದು, ಆ ಗುರುವನ್ನೇ ಗುರುಪೌರ್ಣಮಿ ದಿನದಂದು ಗುರುತು ಮಾಡಿಕೊಳ್ಳುವುದು, ಆರಾಧಿಸುವುದು ನಡೆಯುತ್ತಿದೆ. ಗುರುಪೌರ್ಣಮಿ ದಿನ ಕೆಲವು ಲಕ್ಷಗಳ ಕಡೆ ಗುರುಪೂಜೆಗಳು ನಡೆಯುತ್ತಿದ್ದರೂ, ಕನಿಷ್ಠ ಒಂದುಕಡೆಯೂ ಸಹ ನಿಜಗುರುವೊಂದರ ಪೂಜೆ ನಡೆಯುತ್ತಿದೆ ಎಂಬ ನಂಬಿಕೆಯಿಲ್ಲ. ಪರಮಾತ್ಮನಿಗೆ ವಿರುದ್ಧವಾದ ಮಾಯೆ ಪರಮಾತ್ಮಕಡೆ ಯಾರು ಹೋಗದಂತೆ ತನ್ನಕಡೆ ಎಲ್ಲರೂ ಇರುವಂತೆ, ಎಷ್ಟೋ ಉಪಾಯಗಳಿಂದ ಪ್ರಜೆಗಳಿಗೆ ಮೇಲು ಮಾಡುತ್ತಾ ಎಲ್ಲರನ್ನು ತನ್ನಕಡೆ ಸೆಳೆದುಕೊಳ್ಳುತ್ತಿದೆ. ಮಾಯೆಯಲ್ಲಿ ಬಿದ್ದಿರುವ ಎಷ್ಟೋ ಜನ ಗುರುಗಳನ್ನು ಗುರುತಿಸಲಾರದೆ ಹೋಗುವುದಲ್ಲದೆ, ದೇವರನ್ನು ಗುರು ಅಲ್ಲವೆಂದು ನಿಂದಿಸುವುದು, ಅವಮಾನಪಡಿಸುವುದು ಮಾಡುತ್ತಾ ಮಾಯೆಯನ್ನು ಗುರುವಾಗಿ ಲೆಕ್ಕಿಸಿ ಆನಂದದಿಂದ ಆರಾಧಿಸುವುದು ನಡೆಯುತ್ತಿದೆ. ಭಕ್ತಿಯೆಂಬುದು ಇದ್ದರೂ ಪ್ರತಿಯೊಬ್ಬನು ತಮ್ಮ ಭಕ್ತಿಯನ್ನು ದೇವತೆಗಳಕಡೆ, ಮಹಿಮೆಗಳು ತೋರಿಸುವ ಬಾಬಾಗಳಕಡೆ, ಪುರಾಣಗಳು ಬೋಧಿಸುವ ಬೋಧಕರಕಡೆ ತೋರಿಸುತ್ತಾ ಗುರುವನ್ನು ಅಗೌರವಪಡಿಸುತ್ತಿದ್ದಾರೆ. ಕ್ಷುದ್ರದೇವತೆಗಳಿಗೆ ಮುಗಿಯುವ ಒಬ್ಬ ಸಾಮಾನ್ಯನು ಪದವಿಯಲ್ಲಿ ಇದ್ದರೆ ದೇವತೆಗಳಿಗೆ ದೇವರಾದ ಗುರುವನ್ನು ತನ್ನ ಮುಂದೆ ನಿಲ್ಲಿಸಿಕೊಂಡು ಕನಿಷ್ಠ ಕುಳಿತುಕೊಳ್ಳಲು ಹೇಳದೆ ಹೇಳನವಾಗಿ ಮಾತನಾಡುವುದು ನಡೆಯುತ್ತಿದೆ. ಮಾಯೆ ಪ್ರಭಾವ ಮನುಷ್ಯರಲ್ಲಿ ಇರುವವರೆಗೂ ಅವರಿಗೆ ಮಾಯಾಗುರುಗಳು ದೊಡ್ಡದಾಗಿ ಕಾಣಿಸುವುದು, ಭಗವಂತನಾದ ನಿಜಗುರು ನೀಚವಾಗಿ ಕಾಣಿಸುವುದು ಸಹಜವೇ. ಮಾಯೆಗು ಪರಮಾತ್ಮನಿಗು ನಡೆಯುತ್ತಿರುವ ಆಟದಲ್ಲಿ ಸಮಸ್ತವೂ ಮಾಯೆಕಡೆ ಇರುವಾಗ, ಒಂದೇ ಒಂದು

ಜ್ಞಾನ ಧರ್ಮ ಮಾತ್ರ ಪರಮಾತ್ಮಕಡೆ ಇದೆ. ಮಾಯೆಕಡೆ ಮಹಿಮೆಗಳು, ದಾನ, ಧನಿಕರನ್ನು ಮಾಡುವುದು, ಕೋರಿದ ಕಾರ್ಯಗಳು ನೆರವೇರಿಸುವುದು ಇಂತಹ ಎಷ್ಟೋಸಾವಿರಾರು ಆಯುಧಗಳು ಇರುವಾಗ ಪರಮಾತ್ಮ ಕಡೆ ಧರ್ಮಗಳು ಎನ್ನುವ ಆಯುಧ ಒಂದೇ ಇದೆ. ಈ ವಿಷಯಕ್ಕೆ ಉದಾಹರಣೆಯಾಗಿ ದ್ವಾಪರಯುಗದಲ್ಲಿ ಭಾರತ ಯುದ್ಧದಲ್ಲಿ ನನಗೆ ಸಮಾನವಾದ ಹತ್ತುಸಾವಿರಜನ ಯೋಧರೆಲ್ಲರು ಒಂದುಕಡೆ, ನಾನೊಬ್ಬನು ಒಂದುಕಡೆ ಇರುತ್ತೇನೆಂದಿದ್ದಾನೆ. ಹತ್ತುಸಾವಿರಜನ ಯೋಧರು ಆಯುಧಗಳು ಹಿಡಿದು ಹೋರಾಡಿದಾಗ ನಾನು ಆಯುಧ ಹಿಡಿಯದೆ ಸುಮ್ಮನೆ ಮಾತುಗಳು ಹೇಳುವವನಾಗಿರುತ್ತೇನೆ ಅಂದಿದ್ದಾನೆ. ಆ ದಿನ ಹೇಳಿದ ಅಂತರಾರ್ಥವೇನೆಂದು ಯೋಚಿಸಿದರೂ ನನ್ನಿಂದ ತಯಾರು ಮಾಡಲಾದ ನನ್ನ ಮಾಯೆ ನನ್ನಿಂದಲೇ ಎಷ್ಟೋ ಪ್ರಜಾನುಕೂಲ ಸಂಘಟನೆ ಗಳೆಂಬ ಆಯುಧಗಳಿಂದ ಹೋರಾಡುತ್ತಾ ಜೀವಿಗಳನ್ನು ತನ್ನಕಡೆ ಸೆಳೆದುಕೊಂಡು ಯುದ್ಧದಲ್ಲಿ ಗೆಲ್ಲಬೇಕೆಂದು ನೋಡುತ್ತಿದೆ. ನಾನು ಮಾತ್ರ ಯಾವ ಸಂಘಟನೆ ಗಳೆಂಬ ಆಯುಧಗಳು ಹಿಡಿಯದೆ ಧರ್ಮಗಳೆಂಬ ಮಾತುಗಳ ಆಯುಧ ಗಳಿಂದಲೇ ಹೋರಾಡುತ್ತೇನೆಂದು ತಿಳಿಸಿದಂತಿದೆ.

ಈ ಕಾಲದಲ್ಲಿ ಮಾಯೆ ಅನೇಕ ಮಾರ್ಗಗಳಲ್ಲಿ ಮನುಷ್ಯರನ್ನು ತನ್ನ ಕಡೆ ಸೆಳೆದುಕೊಳ್ಳುತ್ತಾ, ತಾನೇ ದೇವರಾಗಿ ಲೆಕ್ಕಿಸಲ್ಪಡುತ್ತಾ, ಎಷ್ಟೋ ದೇವಾಲಯಗ ಳನ್ನು ಸಹಿತವು ಕಟ್ಟಿಸಿಕೊಂಡು, ದೈವವಾಗಿಯೇ ಬಣ್ಣ ಬದಲಿಸಿಕೊಂಡು ಕಾಣಿಸುತ್ತಿದೆ. ಮನುಷ್ಯರ್ಯಾರು ಗುರುತಿಸಲಾರದ ಮಾಯೆಯನ್ನು ಪರಮಾತ್ಮನೇ ಗುರುತಿಸಬೇಕು. ಪರಮಾತ್ಮ ಇದು ಮಾಯೆಯೆಂದು ಹೇಳಿದ್ದರೂ, ಪರಮಾತ್ಮ ನಂತಿರುವ ಮಾಯೆಯನ್ನು ಪರಮಾತ್ಮನೇ ಎಂದು ನಂಬುತ್ತಾ, ಪರಮಾತ್ಮನನೇ ಮಾಯೆಯಾಗಿ ತಿಳಿಯುವವರು ಇದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ನಾವಿದ್ದೇವೆ. ಈ ಸ್ಥಿತಿಯಲ್ಲಿ ಮಾಯೆ ಯಾರೋ ಗುರು ಯಾರೋ ಗುರುತಿಸುವುದು ಬಹಳ ಕಷ್ಟ. ಒಂದು ವೇಳೆ ನೀನು ಮಾಯೆಯನ್ನು ಬಿಟ್ಟು ದೇವರಕಡೆ ಹೋಗುತ್ತಿದ್ದೇನೆಂದು ಅಂದುಕೊಂಡರು, ನಿಜಗುರುವನ್ನು ಎಷ್ಟೋ ವರ್ಷಗಳಿಂದ

ಗುರುತಿಸಿದರೂ, ಮಾಯೆ ಅಂದುಕೊಂಡರೆ ನಿಜ ಗುರುವನ್ನು ಮಾಯೆಯೆಂದು, ಮಾಯೆಯನ್ನು ನಿಜಗುರುವೆಂದು ನಿನ್ನಿಂದಲೇ ಹೇಳಿಸುತ್ತದೆ. ದೇವರು ಎಲ್ಲಾ ಆಯುಧಗಳನ್ನು ಮಾಯೆಗೆಕೊಟ್ಟಿದ್ದಾನೆ. ದೇವರವು ಬರೀ ಮಾತುಗಳು ಹೊರತು ಏನೂ ಇಲ್ಲ. ಬರೀ ಮಾತುಗಳಿಂದ ನಮಗೇನು ಲಾಭವೆಂದು ತುಂಬಿದ ಘಂಟುಗಳು ಕೊಡುವ ಮಾಯೆಕಡೆ ಹೋಗುತ್ತೀರೋ, ಖಾಲಿಘಂಟು ಇರುವ ಪರಮಾತ್ಮಕಡೆ ಹೋಗುತ್ತೀರೋ ನೀವೇ ನಿರ್ಣಯಿಸಿಕೊಳ್ಳಿ. ಸರ್ವರಿಗೂ ಪ್ರಕೃತಿ ಅಮ್ಮ, ಪರಮಾತ್ಮ ತಂದೆಯೆಂದು ತಿಳಿದಿದೆಯೆಂದುಕೊಳ್ಳುತ್ತೇನೆ. ಒಟ್ನಲ್ಲಿ ತಾಯಿ ಘಂಟು, ತಂದೆ ಘಂಟು ಎರಡು ಇವೆ. ಅಮ್ಮ ಘಂಟು ತುಂಬಿರುವುದು, ತಂದೆ ಘಂಟು ಖಾಲಿ ಇರುವುದು. ಪ್ರಪಂಚದಲ್ಲಿ ತುಂಬಿದಘಂಟಾದ ನಿಮ್ಮ ಅಮ್ಮ ಘಂಟುಬೇಕೋ ಖಾಲಿಘಂಟಾದ ತಂದೆ ಘಂಟು ಬೇಕೋ ನೀವೇ ನಿರ್ಣಯಿಸಿಕೊಳ್ಳಿ.

# ಉಪನಿಷತ್ತುಗಳು

ಉಪನಿಷತ್‌ಗಳೆಂಬ ಮಾತು ಬಹಳಮಟ್ಟಿಗೆ ಕೇಳಿರುತ್ತೀರಾ. ಉಪನಿಷತ್ ಗಳನ್ನು ಎಷ್ಟೋಜನ ಜ್ಞಾನಿಗಳು, ವೇದಾಂತಿಗಳು, ಋಷಿಗಳು ಬರೆದಿದ್ದಾರೆ. ಬಹಳಜನರಿಂದ ಬರೆಯಲಾದ ಉಪನಿಷತ್‌ಗಳು ಖಚಿತವಾಗಿ ಇಷ್ಟು ಇವೆಯೆಂದು ಹೇಳಲಾರೆವು ಆದರೆ 1108 ಇವೆಯೆಂದು ಪ್ರತೀತಿ. ಇಷ್ಟು ಉಪನಿಷತ್‌ಗಳು ಓದುವುದಕ್ಕೆ ಮಾನವನಿಗೆ ಬಹಳ ಕಾಲ ಹಿಡಿಯುತ್ತದೆಂದೋ ಅಥವಾ ಮತ್ತೆಯಾವ ಯೋಚನೆಯಿಂದಲೋ 1108 ಉಪನಿಷತ್‌ಗಳಲ್ಲಿ ಮುಖ್ಯವಾದವು 108 ಮಾತ್ರವೇ ಎಂದು ಕೆಲವರು ಹೇಳಿದ್ದಾರೆ. ವೇದಗಳಿಗಿಂತ ದೊಡ್ಡವೆಂದು, ವೇದಗಳ ಕೊನೆಯವೆಂದು, ವೇದಾಂತಗಳೆಂದು, ದೇವರನ್ನು ತಿಳಿಸುತ್ತವೆಂದು ಹೇಳುತ್ತಾ, ಅವುಗಳಲ್ಲೇ ಕೆಲವು ಮುಖ್ಯವಾದವೆಂದು, ಕೆಲವು ಮುಖ್ಯ ಅಲ್ಲದಿರುವವೆನ್ನುವುದು ಬಹಳ ವಿಚಿತ್ರ. ಈ ಮಾತುಗಳು ಕೇಳಿದ ಸಾಮಾನ್ಯ ಮಾನವನು ಯೋಚಿಸಿದರೆ ಇದೇನು ಎಲ್ಲವುದಕ್ಕಿಂತ

ಉತ್ತಮವಾದವುಗಳಲ್ಲಿಯೇ ಕೆಲವು ಮುಖ್ಯವಲ್ಲದಿರುವವು ಇದ್ದರೆ, ಅವುಗಳೊಂದರ ದೊಡ್ಡತನ ಏನು? ಅನ್ನುವ ಪ್ರಶ್ನೆ ಉದ್ಭವಿಸುತ್ತದೆ. ಕೆಲವು ಮುಖ್ಯ ಅನ್ನುವುದರಲ್ಲಿಯೇ ಮತ್ತೆ ಕೆಲವುಗಳಲ್ಲಿ ಲೋಪವಿದೆ ಎಂದು ಅನುಮಾನ ಉಂಟಾಗುತ್ತಿದೆ. ಆದ್ದರಿಂದ ಅವು ಮಾನವನಿಗೆ ಉಪಯೋಗಪಡುವವೇನಾ ಅನ್ನುವ ಪ್ರಶ್ನೆಯು ಸಹ ಒಂದುಕಡೆ ಉಂಟಾಗುವಂತಿರುವಾಗ, 108 ರಲ್ಲಿ ಸಹ ಕೆಲವು ಮಾತ್ರ ಮುಖ್ಯವೆಂದು ಕೇವಲ ಹತ್ತನ್ನು ಮಾತ್ರ ಸೂಚಿಸುವುದು ಮತ್ತಷ್ಟು ವಿಚಿತ್ರ. ಆ ದಶೋಪನಿಷತ್‌ಗಳ ಹೆಸರುಗಳು ಹೀಗಿವೆ.

| | | | |
|---|---|---|---|
| 1. | ಈಶಾವಾಸ್ಯಾಪನಿಷತ್ | 2. | ಕೇನೊಪನಿಷತ್ |
| 3. | ಕಠೋಪನಿಷತ್ | 4. | ಪ್ರಶ್ನೋಪನಿಷತ್ |
| 5. | ಮುಂಡಕೋಪನಿಷತ್ | 6. | ಮಾಂಡೂಕ್ಯೊಪನಿಷತ್ |
| 7. | ತೈತ್ತರಿಯಾಪನಿಷತ್ | 8. | ಐತರೇಯಾಪನಿಷತ್ |
| 9. | ಚಾಂದೊಗ್ಯೋಪನಿಷತ್ | 10. | ಬೃಹದಾರಣ್ಯಕೋಪನಿಷತ್ |

ಎಷ್ಟೋ ಉಪನಿಷತ್‌ಗಳಲ್ಲಿ ಕೇವಲ ಹತ್ತು ಹೆಸರುಗಳನ್ನು ಹೇಳುವುದು ವಿಚಿತ್ರವಾದರೆ ಎಲ್ಲವನ್ನು ಮೀರಿದ ದೊಡ್ಡ ವಿಚಿತ್ರ ಮತ್ತೊಂದು ಇದೆ. ಅದು ಏನೆಂದರೆ ಉಪನಿಷತ್ತಾಗಿ ಹೇಳುವ ಭಗವದ್ಗೀತೆ ಮುಖ್ಯವಾದ ಅವುಗಳಲ್ಲಿ ಇಲ್ಲದಿರುವುದೇ! ದಶೋಪನಿಷತ್‌ಗಳಲ್ಲೇ ಅಲ್ಲದೆ 108 ರಲ್ಲಿ ಸಹ ಭಗವದ್ಗೀತೆಗೆ ಸ್ಥಾನ ಇಲ್ಲದೆಹೋಗುವುದು ಬಹಳ ಶೋಚನೀಯ. ಮುಖ್ಯಸ್ಥಾನ ವಹಿಸಿದ 108 ಉಪನಿಷತ್‌ಗಳ ಹೆಸರುಗಳು ಕೆಳಗೆ ಕೊಡಲಾಗಿವೆ.

| | | | |
|---|---|---|---|
| 1. | ಈಶಾವಾಸ್ಯೋಪನಿಷತ್ | 2. | ಕೇನೋಪನಿಷತ್ |
| 3. | ಕಠೋಪನಿಷತ್ | 4. | ಪ್ರಶ್ನೋಪನಿಷತ್ |
| 5. | ಮುಂಡಕೋಪನಿಷತ್ | 6. | ಮಾಂಡೂಕ್ಯೋಪನಿಷತ್ |
| 7. | ತೈತ್ತರೀಯೋಪನಿಷತ್ | 8. | ಐತರೇಯೋಪನಿಷತ್ |
| 9 | ಚಾಂದೋಗ್ಯೋಪನಿಷತ್ | 10. | ಬೃಹದಾರಣ್ಯಕೋಪನಿಷತ್ |

11 ಬ್ರಹ್ಮೋಪನಿಷತ್ತು 12 ಕೈವಲ್ಯೋಪನಿಷತ್ತು

13 ಜಾಬಾಲೋಪನಿಷತ್ತು 14 ಶ್ವೇತಾಶ್ವತರೋಪನಿಷತ್ತು

15 ಹಂಸೋಪನಿಷತ್ತು 16 ಆರುಣಿಕೋಪನಿಷತ್ತು

17 ಗರ್ಭೋಪನಿಷತ್ತು 18 ನಾರಾಯಣೋಪನಿಷತ್ತು

19 ಪರಮಹಂಸೋಪನಿಷತ್ತು 20 ಅಮೃತಬಿಂದೂಪನಿಷತ್ತು

21 ಅಮೃತನಾದೋಪನಿಷತ್ತು 22 ಅಥರ್ವಶಿರೋಪನಿಷತ್ತು

23 ಅಥರ್ವಶಿಖೋಪನಿಷತ್ತು 24 ಮೈತ್ರಾಯಣ್ಯುಪನಿಷತ್ತು

25 ಕೌಷಿತಕಿಬ್ರಾಹ್ಮಣೋಪನಿಷತ್ತು 26 ಬೃಭಜ್ಜಾಬಾಲೋಪನಿಷತ್ತು

27 1. ನೃಸಿಂಹ ಪೂರ್ವತಾಪಿನ್ಯುಪನಿಷತ್ತು

2. ನೃಹಿಂಹೋತ್ತರತಾಪಿನ್ಯುಪನಿಷತ್ತು

28 ಕಾಲಾಗ್ನಿರುದ್ರೋಪನಿಷತ್ತು 29 ಮೈತೇಯೋಪನಿಷತ್ತು

30 ಸುಬಾಲೋಪನಿಷತ್ತು 31 ಕ್ಷುರಿಕೋಪನಿಷತ್ತು

32 ಮನ್ತ್ರಿಕೋಪನಿಷತ್ತು 33 ಪಕ್ವಸರೋಪನಿಷತ್ತು

34 ನಿರಾಲಂಲೋಪನಿಷತ್ತು 35 ಶುಕರಹಾಸ್ಯೋಪನಿಷತ್ತು

36 ವಜ್ರಸೂಚಿಕೋಪನಿಷತ್ತು 37 ತೇಜೋಬಿಂದೂಪನಿಷತ್ತು

38 ನಾದಬಿಂದೂಪನಿಷತ್ತು 39 ಧ್ಯಾನಬಿಂದೂಪನಿಷತ್ತು

40 ಬ್ರಹ್ಮವಿದ್ಯೋಪನಿಷತ್ತು 41 ಯೋಗತತ್ತ್ವೋಪನಿಷತ್ತು

42 ಆತ್ಮಬೋಧೋಪನಿಷತ್ತು 43 ನಾರದಪರಿವ್ರಾಜಕೋಪನಿಷತು

44 ತ್ರಿಶಿಖಿಬ್ರಾಹ್ಮಣೋಪನಿಷತ್ತು 45 ಸೀತೋಪನಿಷತ್ತು

46 ಯೋಗಚೂಡಾಮಣ್ಯುಪನಿಷತ್ತು 47 ನಿರ್ವಾಣೋಪನಿಷತ್ತು

48 ಮಂಡಲಬ್ರಾಹ್ಮಣೋಪನಿಷತ್ತು 49 ದಕ್ಷಿಣಾಮೂರ್ತ್ಯುಪನಿಷತ್ತು

50 ಶರಭೋಪನಿಷತ್ತು 51 ಸ್ಕನ್ಧೋಪನಿಷತ್ತು

52 ತ್ರಿಪಾದ್ವಿಭೂತಿಮಹಿನಾರಾಯಣೋಪನಿತ್ತು

53 ಅದ್ವಯತಾರಕೋಪನಿಷತ್ತು
54 ರಾಮರಹಾಸ್ಯೋಪನಿಷತ್ತು
55 ರಾಮತಾಪಿನ್ಯುಪನಿಷತ್ತು
56 ಶಾಂಡಿಲ್ಯೋಪನಿಷತ್ತು
57 ಮುದ್ಗಲೋಪನಿಷತ್ತು
58 ಶಾಂಡಿಲ್ಯೋಪನಿಷತ್ತು
59 ಪೈಜ್ಗಲೋಪನಿಷತ್ತು
60 ಭಿಕ್ಷುಕೋಪನಿಷತ್ತು
61 ಮಹೋಪನಿಷತ್ತು
62 ಶಾರೀರಕೋಪನಿಷತ್ತು
63 ಯೋಗಶಿಖೋಪನಿಷತ್ತು
64 ತುರೀಯಾತೀತೋಪನಿಷತ್ತು
65 ಸನ್ಯಾಸೋಪನಿಷತ್ತು
66 ಪರಮ ಹಂಸಪರಿವ್ರಾಜಕೋಪನಿಷತ್ತು
67 ಅಕ್ಷಮಾಲಿಕೋಪನಿಷತ್ತು
68 ಅವ್ಯಕ್ತೋಪನಿಷತ್ತು
69 ಅನ್ನಪೂರ್ಣೋಪನಿಷತ್ತು
70 ಸೂರ್ಯೋಪನಿಷತ್ತು
71 ಏಕಾಕ್ಷರೋಪನಿಷತ್ತು
72 ಅಕ್ಷುಪನಿಷತ್ತು
73 ಅಧ್ಯಾತ್ಮೋಪನಿಷತ್ತು
74 ಕುಂಡಿಕೋಪನಿಷತ್ತು
75 ಸಾವಿತ್ರ್ಯುಪನಿಷತ್ತು
76 ಆತ್ಮೋಪನಿಷತ್ತು
77 ಪಾಶುಪತಬ್ರಹ್ಮೋಪನಿಷತ್ತು
78 ಪರಬ್ರಹ್ಮೋಪನಿಷತ್ತು
79 ಅವಧೂತೋಪನಿಷತ್ತು
80 ತ್ರಿಪೂರಾತಾಪಿನ್ಯುಪನಿಷತ್ತು
81 ದೇವ್ಯುಪನಿಷತ್ತು
82 ತ್ರಿಪುರೋಪನಿಷತ್ತು
83 ಕಠರುದ್ರೋಪನಿಷತ್ತು
84 ಭಾವನೋಪನಿಷತ್ತು
85 ರುದ್ರಹೃದಯಯೋಪನಿಷತ್ತು
86 ಯೋಗಕುಂಡಲ್ಯುಪನಿಷತ್ತು
87ಭಸ್ಮಜಾಬಾಲೋಪನಿಷತ್ತು
88 ರುದ್ರಾಕ್ಷಜಾಬಾಲೋಪನಿಷತ್ತು
89 ಗಣಪತ್ಯುಪನಿಷತ್ತು
90 ದರ್ಶನೋಪನಿಷತ್ತು
91 ತಾರಸಾರೋಪನಿಷತ್ತು
92 ಮಹಾವಾಕ್ಯೋಪನಿಷತ್ತು
93 ಪಂಚ ಬ್ರಹ್ಮೋಪನಿಷತ್ತು
94 ಪ್ರಾಣಾಗ್ನಿಹೋತ್ರೋಪನಿಷತ್ತು

95 ಗೋಪಾಲತಾಪಿನ್ಯುಪನಿಷತ್ತು 96 ಕೃಷ್ಣೆಪನಿಷತ್ತು
97 ಯಾಜ್ಞವಲ್ಕ್ಯೋಪನಿಷತ್ತು 98 ವರಾಹೋಪನಿಷತ್ತು
99 ಶಾಟ್ಯಾಯನಿಯೋಪನಿಷತ್ತು 100 ಮಾಯಗ್ರೀವೋಪನಿಷತ್ತು
101 ದತ್ತಾತ್ರೇಯೊಪನಿಷತ್ತು 102 ಗಾರುಡೋಪನಿಷತ್ತು
103 ಕಲಿಸಂತರಣೋಪನಿಷತ್ತು 104 ಜಾವಾಲ್ಯುಪನಿಷತ್ತು
105 ಸೌಭಾಗ್ಯಲಕ್ಷ್ಮೀಪನಿಷತ್ತು 106 ಸರಸ್ವತೀರಹಸ್ಯೋಪನಿಷತ್ತು
107 ಬಹ್ವೃಚೋಪನಿಷತ್ತು 108 ಮುಕ್ತಿಕೋಪನಿಷತ್ತು
109 ಆತ್ಮೋಪನಿಷತ್ತು

ಯೋಗಶಾಸ್ತ್ರವಾಗಿ ಹೆಸರುಹೊಂದಿರುವುದು, ಸಾಕ್ಷಾತ್ತು ಪರಮಾತ್ಮನೇ ಹೇಳಿರುವುದಾದ **ಭಗವದ್ಗೀತೋಪನಿಷತ್** ಮುಖ್ಯವಾದವುಗಳಲ್ಲಿ ಇಲ್ಲದೆ ಹೋಗಿರುವುದೇನೆಂಬ ಆಲೋಚನೆ ಯೋಚಿಸುವ ಎಲ್ಲರಿಗೂ ಆಧಾರ ತೋರಿಸಬಲ್ಲದು. ಯೋಚಿಸುವವನಿಗೆ ಹೀಗೆ ಒಂದು ಪ್ರಶ್ನೆ ಬಂದಿದೆಂದು ಕೊಳ್ಳೋಣ. ಅದರಪಕ್ಕದಲ್ಲಿಯೇ ಮತ್ತೊಂದು, ಮತ್ತೆ ಅದರಹಿಂದೆಯೇ ಇನ್ನೊಂದು, ಹೀಗೆ ಸರಿಯಾದ ಸಮಾಧಾನ ಸಿಗುವವರೆಗು ಪ್ರಶ್ನೆಗಳು ಬರುತ್ತವೆ.

ಯಾರಿಗೆ ಹೇಗೆ ಯೋಚನೆಗಳು ಬಂದರೂ ನಾವು ತಿಳಿದುಕೊಳ್ಳ ಬೇಕಾಗಿರುವುದು ಸ್ವಲ್ಪ ಇದೆ. ಅದು ಏನೆಂದರೆ! ಉಪನಿಷತ್ ಎಂದರೆ ಅರ್ಥವೇನು? ಉಪನಿಷತ್‌ಗಳು ಯಾರಿಂದ ಬರೆಯಲ್ಪಟ್ಟಿವೆ? ಉಪನಿಷತ್‌ಗಳಲ್ಲಿ ಏನು ಇದೆ? ಏನು ಇರಬೇಕು? ಉಪನಿಷತ್‌ಗಳು ಶಾಸ್ತ್ರಗಳಾ? ಅಶಾಸ್ತ್ರೀ ಯಗಳಾ? ಹೀಗೆ ಎಷ್ಟೋ ಪ್ರಶ್ನೆಗಳಿಗೆ ಸಮಾಧಾನಗಳು ನಾವು ತಿಳಿದುಕೊಳ್ಳಬೇ ಕಾಗಿದೆ. ಈ ವಿಧವಾದ ಪ್ರಶ್ನೆಗಳಿಗೆ ಉತ್ತರಗಳು ತಿಳಿಯದಿರುವಾಗ ಉಪನಿಷತ್ತು ಗಳ ವಿಷಯದಲ್ಲಿ ಕುರುಡರಂತೆ ನಂಬಿದವರಾಗುತ್ತೇವೆ. ಹಾಗೆ ಆಗದೆ ಯಾರೋ ಹೇಳಿದ್ದಾರೆಂದು ಕುರುಡರಂತೆ ನಂಬದೆ ಸತ್ಯಕ್ಕೇ ಬೆಲೆಕೊಡುವವರಾಗಿ ಅಸತ್ಯವೆಷ್ಟು ದೊಡ್ಡದಾದರು ಅದನ್ನು ವಿಸರ್ಜಿಸುವವರಾಗಿ ಇರಬೇಕೆಂದು ಕೋರುತ್ತಿದ್ದೇವೆ.

ಈಗ ಉಪನಿಷತ್ ಎನ್ನುವ ಶಬ್ಧಕ್ಕೆ ಅರ್ಥ ತಿಳಿದುಕೊಳ್ಳೋಣ. ಉಪನಿಷತ್ ಅನ್ನುವ ಪದವನ್ನು ವಿಭಜಿಸಿ ನೋಡಿದಾಗ ಅದು ಮೂರು ಭಾಗಗಳಾಗಿ ಇದೆ. ಅದು ಏನೆಂದರೆ ಉಪ+ನಿ+ಷತ್ ಎಂದು ಹೇಳಬಹುದು. 1) ಉಪ ಎಂದರೆ ಸಮೀಪ (ಪಕ್ಕದಲ್ಲಿ) 2) ನಿ ಎಂದರೆ ಸರಿಯಾಗಿ (ಚೆನ್ನಾಗಿ) 3) ಷತ್ ಎಂದರೆ ಸೇರಿಸುವುದು ಅಥವಾ ಹೊಂದಿಸುವುದು. ಪೂರ್ತಿ ಅರ್ಥ ಬರೆದರೆ ಸಮೀಪವಾಗಿರುವುದನ್ನು ಸರಿಯಾಗಿ ಹೊಂದುವಂತೆ ಮಾಡುವುದು ಉಪನಿಷತ್. ನಾವು ಜೀವಾತ್ಮವಾಗಿ ನಮಗೆ ಬಹಳ ಸಮೀಪದಲ್ಲಿ ಪಕ್ಕದಲ್ಲಿಯೇ ಇರುವುದು ಆತ್ಮ. ಜೀವಾತ್ಮಗಳಾದ ನಾವು ಪಕ್ಕದಲ್ಲೇ ಇರುವ ಆತ್ಮದೊಂದಿಗೆ ಐಕ್ಯತೆ ಹೊಂದುವುದಕ್ಕೆ ಉಪಯೋಗಪಡುವಂತೆ ಮಾಡುವುದೇ ಉಪನಿಷತ್. **'ತ್ರೈಗುಣ್ಯ ವಿಷಯಾ ವೇದಾ'** ಮೂರು ಗುಣಗಳ ವಿಷಯಗಳೇ ವೇದಗಳೆಂದು ಗೀತೆಯಲ್ಲಿ ಸಾಂಖ್ಯಯೋಗದಲ್ಲಿ ಇದೆ. ಆದ್ದರಿಂದ ಗುಣಗಳಿಗೆ ಅತೀತವಾಗಿ ಗುಣಗಳ ಅಂತ್ಯದಲ್ಲಿರುವ ಆತ್ಮವನ್ನು ತಿಳಿಸುವುದು ಉಪನಿಷತ್ತು. ವೇದಗಳ ನಂತರ ಎಂದರೆ ಗುಣಗಳ ನಂತರ ಇರುವುದನ್ನು ತಿಳಿಸುವುದು, ಆದ್ದರಿಂದ ಅದನ್ನು ವೇದಾಂತವೆಂದು ಸಹ ಅಂದಿದ್ದಾರೆ. ನಿನಗೆ ಸಮೀಪದಲ್ಲಿರುವುದನ್ನು ಚೆನ್ನಾಗಿ ತಿಳಿಸಿ ಹೊಂದಿಸುವುದೆಂದು ಉಪನಿಷತ್ತು ಅರ್ಥವನ್ನೊಳಗೊಂಡಿರುವಾಗ, ಅಂತಹ ಉಪನಿಷತ್ತುಗಳಲ್ಲಿ ಎಲ್ಲವೂ ಆತ್ಮವನ್ನು ತಿಳಿಸುವ ಧರ್ಮಗಳೇ ತುಂಬಿರುತ್ತವೆಂದು ಅರ್ಥವಾಗುತ್ತಿದೆ. ಉಪನಿಷತ್ತು ಅರ್ಥದ ಪ್ರಕಾರ ಇಲ್ಲದ ಪುಸ್ತಕವನ್ನು ಉಪನಿಷತ್ ಅನ್ನಬಾರದು. ಉಪನಿಷತ್ತು ಅರ್ಥದಿಂದ ಕೂಡಿಕೊಂಡಿರುವ ಯಾವ ಪುಸ್ತಕವಾದರು ಉಪನಿಷತ್ತೇ ಆಗುತ್ತದೆ. ಅರ್ಥವನ್ನನುಸರಿಸಿ ಯಾವುವು ಉಪನಿಷತ್ತುಗಳೊ, ಯಾವುವು ಉಪನಿಷತ್ತುಗಳು ಅಲ್ಲವೊ ನೀವೆ ನಿರ್ಣಯಿಸಿಕೊಳ್ಳಬಹುದು.

ಎಷ್ಟೋ ಮಹಾನುಭಾವರು ಉಪನಿಷತ್ತುಗಳನ್ನು ಬರೆದಿದ್ದಾರೆ. ಬರೆದವರ ಹೆಸರುಗಳನ್ನನುಸರಿಸಿಯೇ ಆಯಾ ಉಪನಿಷತ್ತುಗಳಿಗೆ ಹೆಸರುಗಳು ಇಡಲಾಗಿದೆ. ಹಾಗೆ ಎಷ್ಟೋ ಹೆಸರುಗಳನ್ನು ನೀವು ನೋಡಿದ್ದೀರಾ. 108 ರಲ್ಲಿ

ಸಹ ಭಗವದ್ಗೀತೆ ಸ್ಥಾನ ಮಾಡಿಕೊಂಡಿಲ್ಲ ಎಂದರೆ ಭಗವದ್ಗೀತೆ ಉಪನಿಷತ್ತು ಒಂದರ ಅರ್ಥಕ್ಕೆ ಸರಿಹೋಗುವುದಿಲ್ಲವಾ ಎಂದು ನೋಡಿದರೆ, ಗೀತೆ ಎಲ್ಲಾ ವಿಧಗಳ ಆತ್ಮ ಧರ್ಮಗಳನ್ನು ಬೋಧಿಸುತ್ತಿದೆ ಆದ್ದರಿಂದ ಅದನ್ನು ಮೀರಿದ ಉಪನಿಷತ್ತು ಇಲ್ಲವೆನಿಸುತ್ತದೆ. ಉಳಿದ 108 ಉಪನಿಷತ್ತುಗಳನ್ನು ಅದೇ ದೃಷ್ಟಿಯಿಂದ  ಪರಿಶೀಲಿಸಿದರೆ ಅವುಗಳಲ್ಲೇ ಕೆಲವು ಲೋಪಗಳು ಕಾಣಿಸಿ, ಇವು ಉಪನಿಷತ್‌ಗಳು ಅಲ್ಲವೇನೋ ಎಂದು ಅನಿಸುತ್ತಿದೆ. ಆದರೆ ಇರುವ ಸತ್ಯವನ್ನು ಹೇಳಿದರೆ, ಮುಖ್ಯವಾದವುಗಳಲ್ಲಿ ತಪ್ಪು ತೋರಿಸಿದರೆ ನಮ್ಮನ್ನೇ ಅಸಹಿಸಿಕೊಳ್ಳುವವರು, ಹೀಯಾಳಿಸಿಕೊಳ್ಳುವವರು ಇದ್ದಾರೆಂದು ನನಗೆ ತಿಳಿದಿದೆ. ಯಾರೊ ಅಸಹಿಸಿಕೊಳ್ಳುತ್ತಾರೆಂದು ಇರುವ ಸತ್ಯವನ್ನು ಮುಚ್ಚಿಡುವವರಲ್ಲ ನಾವು. ಗೀತೆಗೆ ಮುಖ್ಯಸ್ಥಾನ ಇಲ್ಲದಿದ್ದರು ಇದು ಏನೆಂದು ಪ್ರಶ್ನಿಸಿ ಕೇಳದವರೆಲ್ಲರೂ ಉಪನಿಷತ್‌ಗಳು ಮುಖ್ಯವಲ್ಲವೆಂದು ಅವುಗಳಲ್ಲಿ ಲೋಪಗಳು ಇವೆಯೆಂದು ಕೇಳುತ್ತಲೇ ಹುರಿದುಬೀಳುತ್ತಿದ್ದಾರೆ. ಪಾಠಕರಾಗಿ ಈ ಸಮಸ್ಯೆಗೆ ನೀವೆ ತೀರ್ಪು ಹೇಳಿ ಯಾವುವು ಧರ್ಮಗಳನ್ನು ಬೋಧಿಸುತ್ತಿರುವ ನಿಜವಾದ ಉಪನಿಷತ್‌ಗಳೊ, ಯಾವುವು ಉಪನಿಷತ್ತೆಂದು ಹೆಸರಿಟ್ಟುಕೊಂಡು ಅಧರ್ಮಗಳನ್ನು ಬೋಧಿ ಸುತ್ತಿವೆಯೋ ನಿರ್ಣಯಿಸಿರಿ.

ಉದಾಹರಣೆಗೆ ಒಂದು ಉಪನಿಷತ್ತಿನಲ್ಲಿನ ವಿಷಯವನ್ನು ವಿವರಿಸಿ ಕೊಳ್ಳೋಣ. ಅದು ಉಪನಿಷತ್ತೋ ಅಲ್ಲವೊ ನಾವೇ ಯೋಚಿಸೋಣ. ನಮ್ಮ ಶರೀರ ಎರಡು ಭಾಗಗಳಾಗಿ ಇದೆ. ಒಂದು ಸ್ಥೂಲ ಎರಡು ಸೂಕ್ಷ್ಮ. ಸ್ಥೂಲಭಾಗ ಎಂದರೆ ಕಣ್ಣಿಗೆ ಕಾಣಿಸುವುದೆಂದು, ಸೂಕ್ಷ್ಮಭಾಗ ಎಂದರೆ ಕಣ್ಣಿಗೆ ಕಾಣಿಸದಿರುವು ದೆಂದು ಅರ್ಥ. ಮೇಲೆ ಕಣ್ಣಿಗೆ ಕಾಣಿಸುವ ಶರೀರವೆಲ್ಲವೂ ಸ್ಥೂಲಶರೀರ ಅನ್ನುತ್ತೇವೆ. ನಮ್ಮ ಶರೀರದಲ್ಲಿರುವ 25 ಭಾಗಗಳಲ್ಲಿ ಕಣ್ಣಿಗೆ ಕಾಣಿಸುವ ಭಾಗದಲ್ಲಿ ಇರುವವುಗಳನ್ನು ತಿಳಿದುಕೊಂಡರೆ **ಜ್ಞಾನೇಂದ್ರಿಯಗಳು ಐದು ಅಂದರೆ 1) ಕಣ್ಣು 2) ಕಿವಿ 3) ಮೂಗು 4) ನಾಲಿಗೆ 5) ಚರ್ಮ.  ಕರ್ಮೇಂದ್ರಿಯಗಳು ಐದು ಎಂದರೆ 1) ಕಾಲು 2) ಕೈ 3) ಬಾಯಿ 4) ಯೋನಿ ಅಥವಾ ಲಿಂಗ**

**5) ಗುದ.** ಇವು ಮೇಲ್ನೋಟಕ್ಕೆ ಕಾಣಿಸುವ ಹತ್ತು ಭಾಗಗಳಾದ್ದರಿಂದ ಇವುಗಳನ್ನು ಸ್ಥೂಲಶರೀರವೆಂದು ಅನ್ನಬಹುದು. ಕಾಣಿಸದೆ 15 ಭಾಗಗಳಿವೆ **ಅವು ಪಂಚವಾಯುವುಗಳು ಐದು ಎಂದರೆ 1) ವ್ಯಾನ 2) ಸಮಾನ 3) ಉದಾನ 4) ಪ್ರಾಣ 5) ಅಪಾನವಾಯುಗಳು. ಹಾಗೆ ಐದು ತನ್ಮಾತ್ರಗಳು ಎಂದರೆ ಜ್ಞಾನೇಂದ್ರಿಯಗಳ ಹಿಂದೆ ಕಾಣಿಸದೆ ಇರುವ ಶಕ್ತಿಗಳು 1) ದೃಷ್ಟಿ 2) ಶಬ್ದ 3) ಘ್ರೂಣ 4) ರುಚಿ 5) ಸ್ಪರ್ಶ. ಹಾಗೆ ಐದು ಅಂತರೇಂದ್ರಿಯಗಳು 1) ಮನಸ್ಸು 2) ಬುದ್ಧಿ 3) ಚಿತ್ತವು 4) ಅಹಮ್ 5) ಜೀವಿ.** ಇವು ಒಟ್ಟು 15 ಕಣ್ಣಿಗೆ ಕಾಣಿಸುವುದಿಲ್ಲ. ಆದ್ದರಿಂದ ಸೂಕ್ಷ್ಮ ಎನ್ನುತ್ತೇವೆ. ಹೀಗೆ ವಿವರಿಸಿಕೊಂಡ ನಂತರ ಚಿಕ್ಕಮಗುವಾದರು ಇದು ಸೂಕ್ಷ್ಮ, ಇದು ಸ್ಥೂಲವೆಂದು ಹೇಳಬಲ್ಲನು. ಉದಾಹರಣೆಗೆ ಮನಸ್ಸು ಅಂದಿದ್ದೇವೆಂದುಕೊಳ್ಳಿ ಅದು ಕಣ್ಣಿಗೆ ಕಾಣಿಸುವುದಿಲ್ಲ ಆದ್ದರಿಂದ ಅದನ್ನು ಸೂಕ್ಷ್ಮವೆಂದು ಹೇಳುತ್ತೇವೆ. ಹಾಗೆ ಕಾಲುಗಳು ಅಂದಿದ್ದೇವೆಂದುಕೊಳ್ಳಿ ಅವು ಕಣ್ಣಿಗೆ ತಿಳಿಯುವವಾದ್ದರಿಂದ ಸ್ಥೂಲವೆಂದು ಹೇಳಬಹುದು. ಈಗ ಶರೀರವನ್ನು ಕುರಿತು ನಿಮಗೂ ಸಹ ಅರ್ಥವಾಗಿರುತ್ತದೆ. ಸ್ಥೂಲ ಸೂಕ್ಷ್ಮಗಳನ್ನು ಕುರಿತು ಈಗ ಅಸಲು ವಿಷಯಕ್ಕೆ ಬರೋಣ. ಮುಖ್ಯವಾದ 108 ಉಪನಿಷತ್ತುಗಳಲ್ಲಿ **ಯೋಗಚೂಡಾಮಣ್ಯುಪನಿಷತ್ತು** ಸಹ ಒಂದು ಇದೆ. ಅದರಲ್ಲಿ ಒಂದು ಶ್ಲೋಕ ಹೀಗಿದೆ. ***'ಜ್ಞಾನ ಕರ್ಮೇಂದ್ರಿಯೈಹಾ ಪ್ರಾಣಾದಿ ಪಂಚವಾಯು ಮನೋಬುದ್ಧಿಚ್ಛ ಸೂಕ್ಷ್ಮಲಿಂಗಮತ್ಯುಚ್ಛತೇ'*** ಜ್ಞಾನೇಂದ್ರಿಯಗಳೈದು, ಕರ್ಮೇಂದ್ರಿಯಗಳೈದು, ಪ್ರಾಣವಾಯು ಮೊದಲಾದ ವಾಯುಗಳು ಐದು, ಮತ್ತು ಮನಸ್ಸು ಒಂದು ಬುದ್ಧಿ ಒಂದು ಒಟ್ಟು 17 ಭಾಗಗಳು ಸೂಕ್ಷ್ಮಶರೀರವೆಂದು ಮೇಲಿನ ಶ್ಲೋಕವೊಂದರ ಅರ್ಥ. ಕಾಲು ಕೈ ಮೊದಲಾದ ಕರ್ಮೇಂದ್ರಿಯಗಳು ಕಾಣಿಸದಿರುವವಾ? ಕಾಣಿಸುವವಾ? ಅನ್ನುವ ವಿಷಯ ನಿಮ್ಮೆಲ್ಲರಿಗೂ ತಿಳಿದಿದೆ. ಮನಸ್ಸು ಬುದ್ಧಿ ಎರಡು ಪಂಚವಾಯುಗಳು ಕಣ್ಣಿಗೆ ಕಾಣಿಸದ ಸೂಕ್ಷ್ಮಗಳೆಂದು ಎಲ್ಲರಿಗೂ ತಿಳಿದಿದೆ. ಹಾಗೆ ಕಣ್ಣಿಗೆ ಕಾಣಿಸುವ ಕರ್ಮೇಂದ್ರಿಯಗಳು ಜ್ಞಾನೇಂದ್ರಿಯಗಳು ಕಣ್ಣಿಗೆ ಕಾಣಿಸುವ ಸ್ಥೂಲವೆಂದು ತಿಳಿದ ಸತ್ಯವೇ. ಅಂತಹದ

ರಲ್ಲಿ ಎಲ್ಲರಿಗೂ ತಿಳಿದ ಸತ್ಯವನ್ನು ಮುಚ್ಚಿಟ್ಟು ಜ್ಞಾನ ಕರ್ಮೇಂದ್ರಿಯಗಳನ್ನು ಸೂಕ್ಷ್ಮವೆಂದು ಹೇಳುವುದು ಎಷ್ಟು ಅಸತ್ಯವೋ ನೋಡಿರಿ. 17 ಭಾಗಗಳು ಸೂಕ್ಷ್ಮವಾದಾಗ ಉಳಿದ 8 ಸ್ಥೂಲವಾಗಿ ಲೆಕ್ಕಿಸಬೇಕಾಗಿದೆ. ಆ ಉಳಿದವುಗಳಾದ ಜೀವಾತ್ಮ ಕಣ್ಣಿಗೆ ಕಾಣಿಸುವವನಾ? ಚಿತ್ತ ಕಾಣಿಸುವುದಾ? ಅಹಮ್ ಕಾಣಿಸುವುದಾ? ಎಂಟರಲ್ಲಿ ಯಾವುವು ಕಾಣಿಸುವುದಿಲ್ಲ. ಆದರೂ ಕಾಣಿಸುವ ವೆಂದು ಇಂತಹ ಪ್ರತ್ಯಕ್ಷ ಅಸತ್ಯವನ್ನು ಹೇಳುವುದು ಒಂದು ಉಪನಿಷತ್ ಆದರೆ, ಅದು ಮುಖ್ಯವಾದ 108 ರಲ್ಲಿ ಇದ್ದರೆ ಎಷ್ಟು ವಿಚಿತ್ರವೋ ನೋಡಿರಿ. 108 ರಲ್ಲಿಯೇ ಹೀಗಿದ್ದರೆ ಮುಖ್ಯವಲ್ಲವೆಂದು ಬಿಟ್ಟುಹಾಕಿದ 1000 ಉಪನಿಷತ್ತುಗಳಲ್ಲಿ ವಾಸ್ತವ ಎಷ್ಟಿರುತ್ತದೋ ನೀವೆ ಯೋಚಿಸಿರಿ.

ಹೀಗೆ ಪರಿಶೀಲಿಸುತ್ತಾ ಹೋದರೆ ನಿರೂಪಣೆಗೆ ಬಾರದ ವಿಷಯಗಳಲ್ಲಿ ಎಷ್ಟೋ ಉಪನಿಷತ್ತುಗಳಿವೆ. ಇಂತಹ ಅಸತ್ಯ ವಿಷಯಗಳಿಂದ ತುಂಬಿರು ವವುಗಳನ್ನು ಅಸಲು ಉಪನಿಷತ್‌ಗಳನ್ನಬೇಕಾ? ಅವುಗಳಿಗಾ ಹೆಸರು ಸರಿಯಾಗುತ್ತಾ? ಎಂದು ಯೋಚಿಸಿದರೆ ಸ್ವಲ್ಪವೂ ಸರಿಯಲ್ಲ. ಸತ್ಯಾನ್ವೇಷಣೆ ದೃಷ್ಟಿಯಿಲ್ಲದ ಕೆಲವರು ನಾವು ಅಂದ ಈ ಮಾತನ್ನು ಹೇಳನವಾಗಿ ತೆಗೆದುಕೊಳ್ಳ ಬಹುದು. ಮೊದಲು ಬಂದಿರುವ ಕಿವಿಗಳಿಗಿಂತ ಹಿಂದೆಬಂದ ಕೋಡುಗಳು ದೊಡ್ಡವಾ ಎನ್ನಬಹುದು. ಮೊದಲು ಬಂದ ಕಿವಿಗಳು ವಯಸ್ಸಿನಲ್ಲಿ ದೊಡ್ಡವಾದರೂ ಉದ್ದದಲ್ಲಿ ಚಿಕ್ಕವೆ. ಹಿಂದೆ ಬಂದ ಕೋಡುಗಳು ವಯಸ್ಸಿನಲ್ಲಿ ಚಿಕ್ಕವಾದರು ಉದ್ದದಲ್ಲಿ ದೊಡ್ಡವೆ. ಹಾಗೆ ಅಸತ್ಯವನ್ನು ಹೇಳಿದವರು ಎಂತಹ ಮೊದಲಿನವರಾದರು ಸತ್ಯವನ್ನು ಹೇಳುವವರಿಗಿಂತ ಚಿಕ್ಕವರೇ ಎಂದು ತಿಳಿಯಬೇಕು. ಮಹರ್ಷಿಗಳು ಹೇಳಿದ್ದಾರೆಂದು ಅಸತ್ಯವನ್ನು ನಂಬಬೇಕಾಗಿಲ್ಲ. ಹೇತುಬದ್ಧವಾಗಿ ವಿಮರ್ಶಿಸಿ ನೋಡಿ ಸತ್ಯವಾದಾಗಲೇ, ನಿರೂಪಣೆಗೆ ಬಂದಾಗಲೇ, ಶಾಸ್ತ್ರಬದ್ಧವಾದಾಗಲೇ ಅದನ್ನು ಆರಿಸಿಕೊಳ್ಳಬೇಕು, ಹಾಗಲ್ಲದೆ ಕುರುಡರಂತೆ ನಂಬಿದರೆ ಹೇಗಾದರು ಆಗಬಹುದು.

"ಮಗು ಸತ್ತರೂ, ತೊಟ್ಟಿಲ ಮರೆವು ಹೋಗಲಿಲ್ಲವೆಂಬ" ಗಾದೆಯ ಪ್ರಕಾರ ಇವು ಸತ್ಯವಲ್ಲ ಅಸತ್ಯವೆಂದು ತಿಳಿದುಹೋದರೂ, ಅವುಗಳ ಮೇಲಿರುವ ಅಭಿಮಾನದಿಂದ ಕೆಲವರು ಅವುಗಳ ದೊಡ್ಡತನವನ್ನು ಕುರಿತು ಮೊರಟಾಗಿ ವಾದಿಸುತ್ತಲೇ ಇರುತ್ತಾರೆ. ಕ್ರಮ ನಿಯಮ ಹಾಗೂ ಸೂತ್ರಬದ್ಧವಿಲ್ಲದವರ ವಾದನೆಯನ್ನು ಬಿಟ್ಟು ಸತ್ಯವನ್ನು ಆಯ್ಕೆ ಮಾಡಿಕೊಂಡು, ಯಾವುದು ಸತ್ಯವನ್ನು ಬೋಧಿಸುತ್ತಿದೆಯೋ ಯೋಚಿಸಬೇಕು. ಹಾಗೆ ಯೋಚಿಸಿದಾಗಲೇ ಸತ್ಯ ತಿಳಿದು ಪರಮಾತ್ಮನನ್ನು ಸೇರುತ್ತಾರೆ. ನೀವು ಯೋಚಿಸುವುದಕ್ಕೋಸ್ಕರ ಉದಾಹರಣೆ ಯಾಗಿ ಒಂದು ಉಪನಿಷತ್‌ನಲ್ಲಿನ ವಿಷಯವನ್ನು ತಿಳಿಸಿದ್ದೇನೆ. ಇಂತಹ ಮಾರ್ಗದಲ್ಲಿ ಯೋಚಿಸುತ್ತಾಹೋದರೆ ಎಲ್ಲಾ ಉಪನಿಷತ್‌ಗಳಿಗಿಂತ ಭಗವದ್ಗೀತೆ ಮುಖ್ಯವಾದ ಉಪನಿಷ್ತ್ತಾಗಿ ತಿಳಿಯುತ್ತಿದೆ. ಅದರಲ್ಲಿನ ಎಲ್ಲಾ ಧರ್ಮಗಳು ಪಕ್ಕದಲ್ಲಿರುವುದನ್ನು (ಆತ್ಮವನ್ನು) ಸರಿಯಾಗಿ ತಿಳಿದುಕೊಳ್ಳುವುದಕ್ಕೆ ಬರಿಯಲ್ಪಟ್ಟಿ ರುವವೆ. ಕೆಲವು ಉಪನಿಷತ್‌ಗಳಲ್ಲಿ ಭಗವದ್ಗೀತೆಗೆ ವಿರುದ್ಧವಾದ ವಿಷಯಗಳು ಇರುವುದು ಗಮನಿಸಬಹುದು. ಅವು ಎಲ್ಲವೂ ಕೊನೆಗೆ ಅಸತ್ಯಗಳಾಗಿಹೋಗಿ ಭಗವದ್ಗೀತೆ ಯಲ್ಲಿನ ಧರ್ಮಗಳೇ ಸತ್ಯವಾಗುವುದರಿಂದ ಎಲ್ಲವನ್ನು ಮೀರಿದ ಉಪನಿಷತ್ **ಭಗವದ್ಗೀತೆಯೆಂದೇ** ಹೇಳಬಹುದು. ಪೂರ್ತಿಯಾಗಿ ಉಪನಿಷತ್ ಅರ್ಥ ತಿಳಿದು, ಯಾವುದು ಉಪನಿಷತ್ತೋ ತಿಳಿದುಕೊಂಡವರು **'ಉಪದೇಶ'** ಒಂದರ ಅರ್ಥ ಸಹ ತಿಳಿಯುತ್ತಾರೆ. ಸಂಸಾರ ಸಮುದ್ರದಲ್ಲಿ ಉಪನಿಷತ್ ದೋಣಿ ಆದರೆ, ಉಪದೇಶ ವಿದೇಶಿ ತೀರವಂಥದ್ದು. ಉಪನಿಷತ್ತಿನ ಆಧಾರದಿಂದ ಉಪದೇಶವೆಂಬ ಎರಡನೇ ದೇಶವೊಂದರ ಮೇರೆ (ದಡ) ಸೇರಿದರೆ, ನಂತರ ಆ ದೇಶದೊಳಗೆ ಪ್ರವೇಶಿಸಬಹುದು. ಅಸಲು ದೋಣಿ ಇಲ್ಲದೆಯೇ, ಗಟ್ಟು ಸೇರದೆಯೇ, ಇತರ ದೇಶದಲ್ಲಿ ನಾವು ಸಂಚರಿಸಲಾರೆವು ತಾನೆ! ಅದಕ್ಕೆಂದು ಉಪನಿಷತ್‌ನ್ನು ತಿಳಿದು, ಹಾಗೆಯೇ ಉಪದೇಶವನ್ನು ತಿಳಿದು, ಕೊನೆಗೆ ಮೋಕ್ಷವನ್ನು ಹೊಂದಬೇಕೆಂದು ಕೋರುತ್ತಿದ್ದೇನೆ.

# ಯುಗಾದಿ

ಕಣ್ಣಿಗೆ ಕಾಣಿಸುವ ಈ ಜಗತ್ತೆಲ್ಲವೂ ಒಂದು ದಿನ ಪ್ರಾರಂಭವಾಗಿ ಅಂದಿನಿಂದ ಕೊನೆಸಾಗುತ್ತಲೇ ಇದೆ. ಪ್ರಪಂಚಕ್ಕೂ ಸಹ ಸಾವು ಹುಟ್ಟುಗಳು ಇವೆ. ಆದ್ದರಿಂದಲೇ ಈ ಪ್ರಪಂಚವೆಲ್ಲವನ್ನು ಜಗತಿ ಅನ್ನುತ್ತಿದ್ದಾರೆ. **'ಜ' ಎಂದರೆ ಹುಟ್ಟುವುದೆಂದು 'ಗತಿ'** ಎಂದರೆ ಸಾಯುವುದೆಂದು ಅರ್ಥ ಇದೆ. ಜಗತ್ತು ಅನ್ನುವ ಶಾಶ್ವತ ನಾಮವನ್ನು ಹೊಂದಿದ ಈ ಪ್ರಪಂಚ ಯಾವುದೋ ಒಂದು ದಿನ ಹುಟ್ಟಿ, ಯಾವುದೋ ಒಂದುದಿನ ಇಲ್ಲದಂತೆ ಹೋಗುವುದೆಂದು ಎಲ್ಲರೂ ತಿಳಿದುಕೊಳ್ಳಬೇಕು. ಒಬ್ಬ ಮನುಷ್ಯ ಹುಟ್ಟಿ ಸ್ವಲ್ಪಕಾಲವಿದ್ದು ಸತ್ತುಹೋಗುವುದು ಎಲ್ಲರಿಗೂ ತಿಳಿದ ಸತ್ಯವೇ. ಆತನು ಇರುವ ಸ್ವಲ್ಪಕಾಲವನ್ನು ಆತನ ಆಯಸ್ಸು ಅನ್ನುತ್ತಿದ್ದೇವೆ. ಮನುಷ್ಯನ ಆಯಸ್ಸಿಗೆ ಕಾಲಮಾನವಾಗಿ ನಿಮಿಷಗಳು ಮೊದಲುಗೊಂಡು ವರ್ಷಗಳ ವರೆಗೂ ಇವೆ. ಹಾಗೆ ಹುಟ್ಟಿ ಸ್ವಲ್ಪ ಕಾಲವಿದ್ದು ಹೋಗುವ ಪ್ರಪಂಚಕ್ಕು ಸಹ ಆಯಸ್ಸು ಇದೆ. ಅದರ ಕಾಲಮಾನ ಯುಗಗಳ ಲೆಕ್ಕದಲ್ಲಿರುತ್ತದೆ. ಮನುಷ್ಯ ಹುಟ್ಟಿದ ದಿನವನ್ನು ಜನ್ಮದಿನವೆಂದೂ, ಜಾತಕವೆಂದೂ ಹೇಳುತ್ತಿರುತ್ತಾರೆ. ಹಾಗೆ ಪ್ರಪಂಚ ಹುಟ್ಟಿದ ದಿನವನ್ನು **ಯುಗ ಆದಿ'** ಅನ್ನುತ್ತಿದ್ದರು. ಅದನ್ನೇ ಸ್ವಲ್ಪಕಾಲಕ್ಕೆ **'ಯುಗಾದಿ'** ಅನ್ನುತ್ತಿದ್ದರು. ಕಾಲ ಕಳೆದಂತೆಲ್ಲ ಯುಗಾದಿ ಸಹ ಹೋಗಿ **'ಉಗಾದಿ'** ಆಗಿದೆ. ಬರುವ ಕಾಲಕ್ಕೆ ಇನ್ನೂ ಯಾವ ಹೆಸರಾಗಿ ಬದಲಾಗಿಹೋಗುತ್ತದೋ ತಿಳಿದಿಲ್ಲ.

ಈಗಿನ ಕಾಲದಲ್ಲಿ ಕೆಲವರು ತಮ್ಮ ಹುಟ್ಟಿದದಿನದಂದು ಪ್ರತಿ ವರ್ಷದಲ್ಲಿ ಹಬ್ಬ ಮಾಡಿಕೊಳ್ಳುತ್ತಿರುತ್ತಾರೆ. ಸಿಹಿ ಪದಾರ್ಥಗಳು ಹಂಚಿ ತನ್ನ ಹುಟ್ಟಿದ ದಿನವೆಂದು ತಿಳಿಸುತ್ತಿದ್ದಾರೆ. ಜನ್ಮದಿನ ಉತ್ಸವಗಳು ಪ್ರಸ್ತುತ ಕಾಲದಲ್ಲಿ ಪ್ರಬಲಿಹೋಗಿವೆ. ಆದರೆ ಪೂರ್ವದಲ್ಲಿ ಯಾರು ತಮ್ಮ ಜನ್ಮದಿನ ಉತ್ಸವಗಳನ್ನು ನಡೆಸಿಕೊಂಡಂತೆ ಚರಿತ್ರೆಯಲ್ಲಿ ಇಲ್ಲ. ಶ್ರೀಕೃಷ್ಣಾಷ್ಟಮಿ, ಶ್ರೀರಾಮನವಮಿ ಅವರು ಬದುಕಿರುವಾಗ ಅವರು ಮಾಡಿಕೊಂಡಂತೆ ಆಧಾರಗಳು ಇಲ್ಲ. ಪೂರ್ವಕಾಲದಲ್ಲಿ ವ್ಯಕ್ತಿಗತ ಹುಟ್ಟಿದ ದಿನಗಳು ಯಾರು ನಡೆಸಿಕೊಳ್ಳದೆ, ಸಮಿಷ್ಠಿಯಾಗಿ ಪ್ರಪಂಚ ವೊಂದರ ಹುಟ್ಟಿದ ದಿನವನ್ನು ಮಾಡಿಕೊಳ್ಳುತ್ತಿದ್ದರು. ಆ ದಿನಕ್ಕೆ **'ಯುಗ ಆದಿ'**

ಎಂದು ಹೆಸರಿಟ್ಟು ಎಲ್ಲವುದಕ್ಕಿಂತ ಹೆಚ್ಚಾಗಿ, ಅದಕ್ಕಿಂತ ಮೀರಿದ ಹಬ್ಬವಿಲ್ಲ ವೆನ್ನುವಂತೆ ಮಾಡಿಕೊಳ್ಳುತ್ತಿದ್ದರು. ಕಾಲ ಕಳೆದಂತೆಲ್ಲ ನಂತರ ಬಹಳ ಹಬ್ಬಗಳು ತಯಾರಾಗಿ ಎಲ್ಲವುಗಳಂತೇ ಇದು ಒಂದು ಹಬ್ಬವಾಗಿದೆ. ಇನ್ನೂ ಸ್ವಲ್ಪಕಾಲ ಹೋದರೆ ಈ ಹಬ್ಬ ಇಲ್ಲದಂತೆ ಹೋಗುವ ಸ್ಥಿತಿ ಏರ್ಪಡುತ್ತದೇನೋ! ಈಗಲೇ ಸ್ವಲ್ಪ ಹೆಸರು ಬದಲಾಗಿದೆ, ಸ್ವಲ್ಪ ಆಚರಣೆಯು ಬದಲಾಗಿದೆ. ವಿದೇಶಿ ಸಾಂಪ್ರ ದಾಯವಾದ ಜನವರಿ ಸಂವತ್ಸರಾದಿಯಾಗಿದೆ. ಬರುವ ಸಮಾಜದಲ್ಲಿ ಯುಗಾದಿ ಇರುತ್ತದೋ ಇಲ್ಲವೋ ಹೇಳಲಾರೆವು.

ಇಂದೂಗಳು ಹಿಂದುಗಳಾಗಿ ಬದಲಾಗಿ ಅವರ ಸಂಸ್ಕೃತಿಯನ್ನೇ ಮರೆತುಹೋದರೂ, ಆದಿಯಲ್ಲಿ ಹುಟ್ಟಿದ ಇಂದೂಗಳ ಜಾತಿ ಮತ್ತೆ ಯಾವ ಇತರೆ ಮತಗಳಾಗಿ ಬದಲಾಗಿಹೋದರೂ, ಇಂದೂ ಸಂಸ್ಕೃತಿಯನ್ನು ಮಾನವರು ಬಿಟ್ಟರೂ, ಆ ಸಂಸ್ಕೃತಿ ಮನುಷ್ಯರನ್ನು ಬಿಡಲಿಲ್ಲವೆಂದು ಹೇಳುವುದಕ್ಕೆ ಕೆಲವು ಆಧಾರಗಳು ಉಳಿದಿವೆ. ಅವುಗಳಲ್ಲಿ ಮುಖ್ಯವಾದ ಒಂದನ್ನು ವಿವರಿಸಿಕೊಳ್ಳೋಣ.

ಭೂಮಂಡಲದಲ್ಲಿ ಎಷ್ಟೋ ದೇಶಗಳು ಇವೆ. ಹಾಗೆ ಎಷ್ಟೋ ಮತಗಳೂ, ಎಷ್ಟೋ ಸಂಸ್ಕೃತಗಳೂ, ಎಷ್ಟೋ ಭಾಷೆಗಳೂ, ಎಷ್ಟೋ ಸಾಂಪ್ರ ದಾಯಗಳು ಇವೆ. ಭೂಮಿ ಮೇಲೆ ಮಾನವರೆಲ್ಲರೂ ಎಷ್ಟು ವಿಧಗಳಾಗಿದ್ದರೂ, ಎಲ್ಲರಿಗೂ ಹಗಲು ರಾತ್ರಿ ಒಂದೇ. ಅಷ್ಟೇ ಅಲ್ಲದೆ ವಾರಕ್ಕೆ ಏಳು ದಿನಗಳು, ತಿಂಗಳಿಗೆ ಮೂವತ್ತುದಿನಗಳು, ವರ್ಷಕ್ಕೆ ಹನ್ನೆರಡು ತಿಂಗಳುಗಳು ಸರ್ವ ಸಾಧಾರಣವಾಗಿ ಇವೆ. ಇನ್ನೂ ಮುಖ್ಯವಾಗಿ ತಿಳಿದುಕೊಳ್ಳಬೇ ಕಾಗಿರುವುದುದೇ ನೆಂದರೆ! ಪ್ರಪಂಚಕ್ಕೆಲ್ಲಾ ವಾರದಲ್ಲಿನ ಹೆಸರುಗಳು ಒಂದಾಗಿಯೇ ಇವೆ. ಯಾವ ದೇಶದವನಿಗಾದರು, ಯಾವ ಮತದವನಿಗಾದರು ವಾರದಲ್ಲಿನ ದಿನಗಳ ಹೆಸರುಗಳು ಆದಿ, ಸೋಮ, ಮಂಗಳ, ಬುಧ. ಗುರು, ಶುಕ್ರ, ಶನಿವಾರ ಆಗಿರುವುದು ವಿಶೇಷ. ಪ್ರಪಂಚದಲ್ಲಿ ಇಂದೂಗಳು ಮೊಟ್ಟಮೊದಲು ಏರ್ಪಡಿಸಿದ ಹೆಸರುಗಳೇ ಒಟ್ಟು ಪ್ರಪಂಚಕ್ಕೆಲ್ಲಾ ಅನ್ವಯಿಸುವುದರಿಂದ ಇಂದೂಗಳು ಯಾರಾದರೂ ಗರ್ವಿಸಬೇಕಾದ ವಿಷಯ.

ಪೂರ್ವದಲ್ಲಿ ಸೃಷ್ಟಿ ಆರಂಭವಾದ ದಿನ ವಾರದಲ್ಲಿ ಮೊದಲ ದಿನವಾಗಿರುವುದರಿಂದ, ಆ ದಿನವನ್ನು ಪ್ರತಿವಾರ ಚಿಕ್ಕ ಹಬ್ಬವಾಗಿ ಮಾಡಿಕೊಳ್ಳುತ್ತಿದ್ದರು. ಪ್ರಪಂಚ ಆದಿಯಲ್ಲಿ ಆರಂಭವಾದ ದಿನಕ್ಕೆ ಆದಿವಾರವೆಂಬ ಹೆಸರು ಇಟ್ಟಿದ್ದಾರೆ. ಅಂದರೆ ಮೊದಲ ದಿನವೆಂದು ಅರ್ಥ. ಆದಿವಾರದಿಂದ ಆರಂಭವಾಗುವುದರಿಂದ ಆ ದಿನ ಎಲ್ಲರಿಗೂ ಚಿಕ್ಕ ಹಬ್ಬದಂತೆ ಇರುತ್ತಿತ್ತು. ಆ ದಿನ ಕೆಲಸಗಳು ಬಿಟ್ಟು ಸಂತೋಷವಾಗಿ ಕಾಲವನ್ನು ಕಳೆಯುತ್ತಾ ಹಿಟ್ಟಿನಿಂದ ತಯಾರಾಗುವ ಸಿಹಿ ಅಡಿಗೆಗಳನ್ನು ಮಾಡಿಕೊಂಡು, ದೇವರಿಗೆ ನೈವೇದ್ಯ ಇಟ್ಟು ತಾವು ತಿನ್ನುತ್ತಿದ್ದರು. ವಾರದಲ್ಲಿ ಆರು ದಿನಗಳು ಕೆಲಸಮಾಡಿ ಒಂದು ಮೊದಲ ದಿನ ಕೆಲಸಮಾಡದೆ ಹಬ್ಬ ಮಾಡಿಕೊಳ್ಳುತ್ತಿದ್ದರು. ಪೂರ್ವದಲ್ಲಿ ಪ್ರತಿ ಆದಿವಾರ ಹಬ್ಬದ ವಾತಾವರಣ ತುಂಬಿರುತ್ತಿತ್ತು. ಈಗಲೂ ಸ್ವಲ್ಪ ಬದಲಾವಣೆಯಿಂದ ಪ್ರತಿ ಆದಿವಾರ ವಿಶ್ರಾಂತಿ ದಿನವಾಗಿ ಮಾಂಸಾಹಾರಿಗಳಿಗೆ ಹಬ್ಬದಂತೆಯೇ ಇದೆ. ಪೂರ್ವದಲ್ಲಿ ಆದಿವಾರವೆಂದರೆ ಸೃಷ್ಠಿ ಮೊದಲ ದಿನವೆಂದು ಪವಿತ್ರಭಾವವು ಎಲ್ಲರಿಗೂ ಇದ್ದು ಆ ದಿನವನ್ನು ಪವಿತ್ರವಾಗಿಯೇ ಕಳೆಯುತ್ತಿದ್ದರು. ಈ ದಿನ ಆದಿವಾರ ಎಂದರೆ ದುರಭ್ಯಾಸಪರರಿಗೆ ಇಷ್ಟಾರಾಜ್ಯ ವಾಗಿದೆ. ಹೇಗಾದರೇನು ಒಟ್ಟಿನಲ್ಲಿ ಆದಿವಾರವೊಂದರ ಪ್ರತ್ಯೇಕತೆ ಇಂದಿಗೂ ಉಳಿದಿದೆ. ಹೀಗೆ ಭೂಮಿ ಮೇಲೆ ಎಲ್ಲಾ ದೇಶಗಳ ಪ್ರಜೆಗಳಿಗೆ ವಾರಗಳು ಏಳಾಗಿ, ಅದರಲ್ಲಿ ಆದಿವಾರ ಮೊದಲಿನಂತೆ ಪ್ರತ್ಯೇಕತೆ ಹೊಂದಿರುವುದು ಗಮನಿಸಿದರೆ, ಕಾಲ ಗಮನದಲ್ಲಿ ಯಾರು ಹೇಗೆಬದಲಾದರೂ ಇಂದೂಗಳ ಪವಿತ್ರದಿನ ಇಂದಿಗೂ ಎಲ್ಲರಿಗೂ ಸ್ವಲ್ಪ ಹಬ್ಬದಂತಿರುವುದು ನೋಡಿದರೆ, ಮನುಷ್ಯರು ಸಾಂಪ್ರದಾಯವನ್ನು ಬಿಟ್ಟರೂ, ಸಾಂಪ್ರದಾಯ ಮನುಷ್ಯರನ್ನು ಬಿಡಲಿಲ್ಲವೆಂದು ತಿಳಿಯುತ್ತಿದೆ. ಪ್ರಪಂಚವೆಲ್ಲಾ ಇಂದೂಗಳ ಸಾಂಪ್ರದಾಯಗಳು ಹೀಗೆ ಎಲ್ಲರ ಹತ್ತಿರ ಇರುವುದನ್ನನುಸರಿಸಿ ಸೃಷ್ಠ್ಯಾದಿಯಲ್ಲಿ ಇಂದೂಗಳೇ ಇದ್ದರೆಂದು, ನಂತರ ಅದು ಬದಲಾಗುತ್ತಾ ಕೊನೆಗೆ ಅನೇಕ ಮತಗಳಾದರೂ ಬಟ್ಟೆಯಲ್ಲಿನ ಇಂಗು ಹೋದರು ಬಟ್ಟೆಗೆ ಇಂಗು ವಾಸನೆ ಹೋಗಲಿಲ್ಲವೆಂಬಂತೆ, ಮನುಷ್ಯರಲ್ಲಿ ಇಂದೂತ್ವ ಹೋದರು ಇಂದೂತ್ವ ವಾಸನೆ ಮನುಷ್ಯರಲ್ಲಿ ಹೋಗದಂತೆ ಸ್ವಲ್ಪವಾದರು ಉಳಿದಿದೆ.

ಆದಿಯಲ್ಲಿ ದೇವರಿಂದ ನೆಲೆಗೊಳಿಸಿದ ಜ್ಞಾನದಿಂದ ತಯಾರಾಗಿರುವುದೇ ಇಂದುತ್ವ. ಇಷ್ಟು ಭೂಮಂಡಲದ ಮೇಲೆ, ಇಷ್ಟು ದೇಶಗಳ ಮಧ್ಯೆ ಪ್ರತ್ಯೇಕಿಸಿ ನಾವು ವಾಸಿಸುವ ಈ ದೇಶದಲ್ಲಿಯೇ ಇಂದೂಗಳು ಪ್ರಕಾಶಿಸಿದ್ದಾರೆ. ಆದ್ದರಿಂದ ಈ ದೇಶ ಇಂದೂದೇಶವಾಗಿದೆ. ಈ ನೆಲೆಯಮೇಲೆ ನಾವು ವಾಸವಿದ್ದು, ನಮ್ಮ ಪೂರ್ವಿಕರಿಗೆ ವಾರಸರಾಗಿ ಇದ್ದೂ, ನಮ್ಮ ಸಂಪ್ರದಾಯವೇನೋ ನಮಗೆ ತಿಳಿಯದಂತೆಹೋಗುವುದು, ಸೃಷ್ಟ್ಯಾದಿಯಲ್ಲಿ ಯಾವ ದಿನ ಮೊದಲಾಗಿದೆಯೋ ಅದರ ಪ್ರತ್ಯೇಕತೆ ಏನೊ ತಿಳಿಯದಂತೆಹೋಗುವುದು, ಕೊನೆಗೆ ವಾರಕ್ಕೊಂದುಸಲ ಬರುವ ಆದಿವಾರ ಸಹ ಏನೋ ನಮಗೆ ತಿಳಿಯದಂತೆಹೋಗಿ ಕೇವಲ ರಜಾದಿನವೆಂದುಕೊಳ್ಳುವುದೂ, ಆದಿವಾರವೇ ರಜಾದಿನ ಏಕಾಗಿದೆ ಎಂದು ಯೋಚಿಸದೆಹೋಗುವುದು, ಈ ವಿಷಯವನ್ನು ಸ್ವಾಮಿಗಳು, ಗುರುಗಳು, ಪೀಠಾಧಿಪತಿಗಳು ಹೇಳದಿರುವುದು, ಎಲ್ಲವನ್ನು ಪರಿಶೀಲಿಸಿ ನೋಡಿದರೆ ನಮ್ಮನ್ನು ನೋಡಿ ನಮ್ಮ ಪೂರ್ವಿಕರು ದುಃಖಪಡಬೇಕಾಗಿದೆ. ಅವರ ವಾರಸರಾಗಿರುವುದಕ್ಕೆ ನಾವು ನಾಚಿಕೆಪಡಬೇಕಾಗಿದೆ.

ಈಗಲಾದರೂ ಮೀರಿಹೋಗಿರುವುದು ಇಲ್ಲ. **ಆದಿಯಲ್ಲಿ** ಪ್ರಾರಂಭವಾಗಿದೆ ಆದ್ದರಿಂದ ಆ ದಿನಕ್ಕೆ **'ಆದಿ'** ವಾರವೆಂದು ಹೆಸರು ಬಂದಿದೆ ಎಂದು ತಿಳಿದವರಾಗಿ, ಸೃಷ್ಠಿ ಆದಿಯಲ್ಲಿ ಪ್ರಾರಂಭವಾದ ಆದಿವಾರವೇ ಯುಗಾದಿಯಾಗಿ ಈಗ ಮತ್ತೆ ಬರುತ್ತಿದೆ ಎಂದು, ಉಳಿದ ದಿನಗಳಲ್ಲಿ ಬರುವ ಯುಗಾದಿಗಳಿಗಿಂತ ಆದಿವಾರ ಬರುವ ಯುಗಾದಿಯೇ ಸ್ವಚ್ಛವಾದ **ಯುಗಾದಿ** ಎಂದು ನೀನು ತಿಳಿದುಕೊಂಡು ಇತರರಿಗೆ ತಿಳಿಸುವುದಕ್ಕೆ ಪ್ರಯತ್ನಿಸಬೇಕು. ನೀನು ನಿಜವಾಗಲು ಇಂದೂವಿನ ವಾರಸನಾದರೆ, ಆದಿಯಲ್ಲಿ ಆದಿವಾರದಿಂದ ಪ್ರಾರಂಭವಾದ ಯುಗಾದಿ ಮತ್ತೆ ಈಗ ಬರುತ್ತಿರುವುದರಿಂದ ಆ ದಿನವನ್ನು ಪವಿತ್ರವಾಗಿ ಕಳೆಯಬೇಕೆಂದು ಪ್ರಯತ್ನಿಸು. ಆದಿಯಲ್ಲಿನ ರಹಸ್ಯಗಳನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸು. ಆ ದಿನ ಕಾಲವನ್ನು ಕಥೆಗಳಿಂದ, ಕವಿತೆಗಳಿಂದ, ಹಾಡುಗಳಿಂದ, ಪದ್ಯಗಳಿಂದ, ನಾಟಕಗಳಿಂದ ವ್ಯರ್ಥವಾಗಿ ಕಳೆಯದೆ ಅಸಲಾದ ಇಂದೂ

ವಾರಸನಾಗುವುದಕ್ಕೆ, ಇಂದೂವಾಗಿ ಜೀವಿಸುವುದಕ್ಕೆ ನಿನ್ನಲ್ಲಿ ಇಂದೂತ್ವವು ಸ್ವಲ್ಪವಾದರು ಸಜೀವವಾಗಿ ಇರಬೇಕು ಯುಗಾದಿ ಅನ್ನುವ ಹೆಸರು ಸಹ ಭ್ರಷ್ಟು ಹಿಡಿದು ಉಗಾದಿಯಾಗಿ ಕರೆಯಲ್ಪಡುವ ಈಗಿನಕಾಲದಲ್ಲಿ ಮತ್ತೆ **ಯುಗಆದಿ** ಯೊಂದರ ಪ್ರತ್ಯೇಕತೆಗಳನ್ನು ಸಾರುತ್ತೀರೆಂದು ಆ ದಿನ ಹೊಸಬಟ್ಟೆಗಳು ಧರಿಸುವುದೇ ಅಲ್ಲದೆ, ಅದು ಸೃಷ್ಟಿ ಆದಿಯಲ್ಲಿಯೇ ಹೊಸ ದಿನವೆಂದು, ಮೊದಲು ಪ್ರಾರಂಭವಾದ ದಿನವೆಂದು ವಿವರಿಸಿ ತಿಳಿಯದವರಿಗೆ ತಿಳಿಸಿರೆಂದು ಕೋರುತ್ತಿದ್ದೇವೆ.

# ಆತ್ಮ ಸರ್ವಜೀವಿಗಳ ಬಳಿ ಸಮಾನವಾ?

ಒಂದು ಜೀವಾತ್ಮ ತನ್ನಲ್ಲಿನ ಆತ್ಮವನ್ನು ನೋಡಿದರು ಅದು ಹೇಗೆ ತಿಳಿಯುತ್ತದೋ, ಅದೇ ವಿಧವಾಗಿ ಎಲ್ಲಾ ಜೀವರಾಶಿಗಳ ಶರೀರದಲ್ಲಿನ ಆತ್ಮಗಳು ತಿಳಿಯಬಲ್ಲವು. **ಜೀವಿಗಳ ದೃಷ್ಠಿಯಲ್ಲಿ ಆತ್ಮಗಳು ಸರ್ವಸಮಾನ. ಆತ್ಮಗಳ ದೃಷ್ಠಿಯಲ್ಲಿ ಜೀವರಾಶಿಗಳು ಸಮಾನ ಅಲ್ಲ**. ಸರ್ವಜೀವರಾಶಿಗಳ ಶರೀರಗಳಲ್ಲಿ ಇರುವ ಆತ್ಮಗಳಿಗೆ ಕರ್ಮಗಳು ಇಲ್ಲ. ಜೀವಾತ್ಮಗಳಿಗೆ ಮಾತ್ರವೇ ಕರ್ಮಗಳು ಇವೆ. ಆದ್ದರಿಂದ ಜೀವಾತ್ಮಗಳೊಂದಿಗೆ ಶರೀರದಲ್ಲಿರುವ ಆತ್ಮಗಳೆಲ್ಲವೂ ಸಮಾನ ಅಂಶ ಇರುವವಾಗಿದ್ದು, ಜೀವಾತ್ಮಗಳ ಕರ್ಮವನ್ನನುಸರಿಸಿ ಕೆಲಸ ಮಾಡಿಸುವ ಧರ್ಮಗಳಿರುವವಾಗಿ ಇವೆ. ಆದ್ದರಿಂದ ಜೀವಾತ್ಮಗಳಿಗೆ ಆತ್ಮಗಳು ಸಮಾನ ವಾದರೂ, ಆತ್ಮಗಳು ಜೀವಾತ್ಮಗಳ ಬಳಿ ಸಮಾನವಾಗಿ ಇಲ್ಲ. ಆಕಾರದಲ್ಲಿ ಆತ್ಮಗಳು ಜೀವರಾಶಿಗಳ ಶರೀರ ಆಕೃತಿಗಳನ್ನನುಸರಿಸಿ ಅನೇಕ ಆಕಾರಗಳಿಂದ ಇದ್ದರೂ, ಅವುಗಳ ಅಂಶ ಧರ್ಮಗಳೆಲ್ಲವೂ ಒಂದೇ ವಿಧವಾಗಿ ಇರುತ್ತದೆ. ಆದ್ದರಿಂದ ಒಂದು ಶರೀರದಲ್ಲಿನ ಜೀವಾತ್ಮ ತನ್ನ ಶರೀರದಲ್ಲಿನ ಆತ್ಮವನ್ನು ತಿಳಿದುಕೊಂಡರು, ಸರ್ವಜೀವರಾಶಿಗಳ ಶರೀರಗಳಲ್ಲಿನ ಆತ್ಮಗಳನ್ನು ತಿಳಿ ದುಕೊಂಡಂತೆ ಆಗುತ್ತದೆ. ಸರ್ವ ಶರೀರಗಳಲ್ಲಿನ ಆತ್ಮ ಒಂದೇ ಅಂಶ ಧರ್ಮ ದಿಂದ ಕೂಡಿರುವುದಾದ್ದರಿಂದ ಆತ್ಮ ಎಂದರೆ ಏನೋ, ಅದು ಎಲ್ಲಾ ಶರೀರಗಳಲ್ಲಿ

ಎಲ್ಲಾ ಆತ್ಮಗಳಾಗಿ ಹೇಗಿದೆಯೋ, ತನ್ನ ಶರೀರದಲ್ಲಿ ಆತ್ಮವನ್ನು ನೋಡಿದವನಿಗೆ ಅರ್ಥವಾಗಿಹೋಗುತ್ತದೆ.

ಪ್ರಪಂಚದಲ್ಲಿನ ಎಲ್ಲಾ ಜೀವರಾಶಿಗಳಲ್ಲಿನ ಆತ್ಮಗಳು ಒಂದೇ ಅಂಶ ಒಂದೇ ಧರ್ಮ ಹೊಂದಿವೆ. ಆದ್ದರಿಂದ ಅವುಗಳೆಲ್ಲವನ್ನು ಬಿಡಿಬಿಡಿಯಾಗಿ ಹೇಳಿಕೊಳ್ಳಬಹುದು ಅಥವಾ ಎಲ್ಲವನ್ನು ಸೇರಿಸಿ ಒಂದಾಗಿ ಹೇಳಿಕೊಳ್ಳಬಹುದು. ಅರ್ಥವಾಗುವುದಕ್ಕೆ ಬಿಡಿಬಿಡಿಯಾಗಿ ಹೇಳಿಕೊಳ್ಳುವುದೇ ಒಳ್ಳೆಯದೆಂದು ಕೊಳ್ಳುತ್ತೇವೆ. ಸರ್ವರ ಆತ್ಮಗಳು ಅವರವರ ಶರೀರ ಆಕಾರವನ್ನು ಹೊಂದಿ ರೂಪದಲ್ಲಿ ಭೇದಗಳಾಗಿ ಇರುವವುಗಳಾದರೂ, ಅವುಗಳಲ್ಲಿರುವ ಅಂಶ ಧರ್ಮ ಗಳಲ್ಲಿ ವ್ಯತ್ಯಾಸಗಳು ಇಲ್ಲ. ಉದಾಹರಣೆಗೆ ಕೊಲಿಮೆಯಲ್ಲಿಟ್ಟಿರುವ ಕಬ್ಬಿಣದ ವಸ್ತುವಿನೊಳಗೆ ಅಗ್ನಿ ಪ್ರವೇಶಿಸಿದಾಗ ಆ ವಸ್ತುವು ಕೆಂಪಗೆ ಅಗ್ನಿಯಂತೆ ಕಾಣಿಸುತ್ತಿದೆ. ಆ ವಸ್ತುವೊಂದರ ಆಕೃತಿಯನ್ನೇ ಆ ಸಮಯದಲ್ಲಿ ಅಗ್ನಿ ಹೊಂದಿದೆ. ಆ ಸಮಯದಲ್ಲಿ ಸಹ ಅಗ್ನಿಯೊಂದರ ಧರ್ಮವಾದ ಶಾಖ ಸಹಜವಾಗಿಯೇ ಇದೆ. ಅಗ್ನಿ ತಾನು ಪ್ರವೇಶಿಸಿದ ವಸ್ತುವೊಂದರ ಆಕೃತಿಯನ್ನು ಹೊಂದಿದಂತೆ, ಆತ್ಮ ತಾನು ಪ್ರವೇಶಿಸಿದ ಶರೀರ ಆಕೃತಿಯನ್ನು ಹೊಂದುತ್ತಿದೆ. ಅಗ್ನಿ ಯಾವ ವಸ್ತುವಿನಲ್ಲಿ ಪ್ರವೇಶಿಸಿದರೂ ತನ್ನ ಧರ್ಮ ಕಳೆದುಕೊಳ್ಳದಂತೆ, ಆತ್ಮ ಯಾವ ಶರೀರದಲ್ಲಿ ಪ್ರವೇಶಿಸಿದರೂ ತನ್ನ ಧರ್ಮವನ್ನು ಕಳೆದುಕೊಳ್ಳುವುದಿಲ್ಲ. ವಸ್ತುಗಳ ಬಳಿ ಅಗ್ನಿ ಒಂದೇ ಧರ್ಮ ಇರುವುದಾಗಿ ಶಾಖವನ್ನು ಕೊಡುವುದಾಗಿದೆ. ಆದರೆ ಅಗ್ನಿಗೇ ವಸ್ತುಗಳು ಒಂದೇ ವಿಧವಾಗಿ ಇಲ್ಲ. ಅಗ್ನಿ ತಗಲಿದಾಗ ಒಂದು ಉಕ್ಕುತ್ತದೆ, ಒಂದು ಕುಗ್ಗುತ್ತದೆ, ಒಂದು ಸಿಡಿಯುತ್ತದೆ, ಮತ್ತೊಂದು ಗಟ್ಟಿಯಾಗಿ ಬದಲಾಗುತ್ತದೆ, ಇನ್ನೊಂದು ಮೃದುವಾಗಿ ಬದಲಾಗುತ್ತದೆ, ಒಂದೇನೋ ಮೇಲಕ್ಕೆಗರುತ್ತದೆ, ಒಂದೇನೋ ಪಕ್ಕಕ್ಕೆ ಉರುಳುತ್ತದೆ. ಹೀಗೆ ಅನೇಕ ವಸ್ತುಗಳು ಅನೇಕ ವಿಧಗಳಾಗಿ ಅಗ್ನಿಯಿಂದ ಬದಲಾವಣೆಹೊಂದುತ್ತವೆ. ಹಾಗೆಯೇ ಆತ್ಮ ಸರ್ವಜೀವಿಗಳ ಬಳಿ ತಾನು ಚೈತನ್ಯಕೊಡುವ ಧರ್ಮ ಇರುವುದಾಗಿದ್ದರು, ಸರ್ವಜೀವಿಗಳ ಕರ್ಮಗಳಿಂದ ಅವುಗಳ ಶರೀರಗಳ

ಜಾತಿಗಳನ್ನನುಸರಿಸಿ, ಒಂದೊಂದು ಜಾತಿಗೆ ಒಂದೊಂದು ವಿಧವಾಗಿ ಆತ್ಮ ತನ್ನಶಕ್ತಿ ಕೊಡುವುದರಿಂದ ಜೀವಿಗಳ ಬಳಿ ಆತ್ಮ ಸಮಾನವಾಗಿ ಇಲ್ಲವೆಂದು ಹೇಳಬಹುದು.

ಉದಾಹರಣಿಗೆ ಪ್ರಾಣಿ ಜಾತಿಯಲ್ಲಿನ ಜಿಂಕೆಯನ್ನು ತೆಗೆದುಕೊಳ್ಳೋಣ. ಜಿಂಕೆ ಹುಟ್ಟುತ್ತಲೇ ಎದ್ದು ನಿಲ್ಲುತ್ತದೆ. ಹಾಗೆಯೇ ಓಡಲೂಬಹುದು. ಆದರೆ ಮನುಷ್ಯ ಜಾತಿಯನ್ನು ನೋಡಿದಂತಾದರೆ ಹುಟ್ಟುತ್ತಲೇ ಎದ್ದು ನಿಲ್ಲಲಾರನು, ಓಡುವುದು ಸಹ ಇಲ್ಲ. ಜಿಂಕೆ ಹುಟ್ಟಿದ ಕೆಲವು ದಿನಗಳಿಗೆ ನೀರಿನಲ್ಲಿ ಈಜುತ್ತದೆ, ಮನುಷ್ಯ ಹಾಗೆ ಈಜಲಾರನು. ಶರೀರಗಳಲ್ಲಿ ಪ್ರತಿ ಕದಲಿಕೆಗೂ ಆತ್ಮ ಚೈತನ್ಯವೇ ಕಾರಣವಾದಾಗ ಮನುಷ್ಯ ಶರೀರದಲ್ಲಿನ ಆತ್ಮ ಮನುಷ್ಯನ ಬಳಿ ಒಂದು ವಿಧವಾಗಿ ವರ್ತಿಸಿದಾಗ, ಜಿಂಕೆ ಶರೀರದಲ್ಲಿರುವ ಆತ್ಮ ಅದರ ಬಳಿ ಮತ್ತೊಂದು ವಿಧವಾಗಿ ವರ್ತಿಸುತ್ತಿದೆ. ಮನುಷ್ಯ ಶರೀರದಲ್ಲಿನ ಆತ್ಮ ಮನುಷ್ಯ ಹುಟ್ಟಿದ ತಕ್ಷಣ ನಡೆಸುವುದಿಲ್ಲ. ಜಿಂಕೆ ಶರೀರದಲ್ಲಿನ ಆತ್ಮನಡೆಸಬಲ್ಲದು. ಹೀಗೆ ಒಂದು ಜಾತಿಗೆ ಒಂದೇ ವಿಧವಾಗಿ ತನ್ನ ಶಕ್ತಿಯನ್ನುಕೊಡುವ ಆತ್ಮಗಳು ಎಲ್ಲಾ ಜೀವರಾಶಿಗಳ ಬಳಿ ಸಮಾನವಾಗಿ ಇಲ್ಲವೆಂದು ಪ್ರತ್ಯಕ್ಷವಾಗಿ ತಿಳಿಯುತ್ತಿದೆ. ಕೆಲವು ಶರೀರಗಳಲ್ಲಿ ಆತ್ಮ ಮಾಡುವಕೆಲಸಗಳನ್ನು ಕೆಲವು ಶರೀರಗಳಲ್ಲಿ ಕಲಿಯಬೇಕಾಗಿರುತ್ತದೆ. ಉದಾಹರಣೆಗೆ ಪ್ರಾಣಿಗಳು ಪಕ್ಷಿಗಳು ನೀರಿನಲ್ಲಿ ಬಿದ್ದ ತಕ್ಷಣ ಈಜುತ್ತವೆ, ಆ ಪದ್ಧತಿಯ (ಈಜ) ನ್ನು ಸ್ವತಃ ಆತ್ಮವೇ ಮಾಡುತ್ತಿದೆ. ಪ್ರಾಣಿಗಳು ಈಜನ್ನು ಕಲಿಯದಿದ್ದರೂ ಆತ್ಮಗೆ ಆವಿದ್ಯೆ ತಿಳಿದಿದೆ. ಮನುಷ್ಯನಲ್ಲಿನ ಆತ್ಮಗೆ ಎಲ್ಲಾ ವಿದ್ಯೆಗಳು ತಿಳಿದರೂ, ಈಜು ಅನ್ನುವ ಪದ್ಧತಿಯಾದ ಕದಲಿಕೆಯನ್ನು ಮಾನವನಿಗೆಕೊಡುವುದಿಲ್ಲ. ನೀರಿನಲ್ಲಿ ಬಿದ್ದಿರುವ ಪ್ರಾಣಿ ಕಾಲು, ಕೈಗಳು ಪದ್ಧತಿ ಪ್ರಕಾರ ಕದಲಿಸಿ ಹೊರಬೀಳುತ್ತಿದೆ. ಆ ಪದ್ಧತಿಯಾದ ಕದಲಿಕೆ ಪ್ರಾಣಿಯಲ್ಲಿನ ಆತ್ಮಗೆ ಗೊತ್ತು. ಈಜುಬಾರದ ಮನುಷ್ಯ ನೀರಿನಲ್ಲಿ ಬಿದ್ದಾಗ ಕಾಲು ಕೈಗಳು ಹೊಡೆದುಕೊಳ್ಳುತ್ತಿರುತ್ತಾನೆ. ಆದರೆ ಆ ಕದಲಿಕೆ ಪದ್ಧತಿಪ್ರಕಾರ ಇರುವುದಿಲ್ಲ, ಆದ್ದರಿಂದ ಮುಳುಗಿ ಹೋಗುತ್ತಿದ್ದಾನೆ. ಮನುಷ್ಯನಲ್ಲಿನ ಆತ್ಮಗೆ ಮನುಷ್ಯ

ಹೊರಬೀಳುವುದಕ್ಕೆ ಬೇಕಾದ ಕದಲಿಕೆ ತಿಳಿದರೂ, ಆ ಪದ್ಧತಿಯನ್ನು ಅಲ್ಲಿ ಉಪಯೋಗಿಸಲಿಲ್ಲ. ಆ ಕದಲಿಕೆಯನ್ನು ಮನುಷ್ಯನ ಇಷ್ಟಕ್ಕೆ ಬಿಟ್ಟಿದೆ. ಆದ್ದರಿಂದ ಈಜು ಕಲಿತವನು ಮಾತ್ರವೇ ಈಜುತ್ತಾನೆ. ಪ್ರಾಣಿ ಶರೀರದಲ್ಲಿನ ಆ ಪದ್ಧತಿಯನ್ನು ಆತ್ಮ ತನ್ನ ಇಷ್ಟದಲ್ಲಿ ಇಟ್ಟುಕೊಂಡಿದೆ. ಆದ್ದರಿಂದ ಪ್ರಾಣಿ ಈಜುಕಲಿಯದಿದ್ದರು ಹೊರಬೀಳಬಲ್ಲದು.

ಈ ವಿಧವಾಗಿ ಪರಿಶೀಲಿಸಿ ನೋಡಿದರು ಆತ್ಮಗಳು ತನ್ನೊಂದರ ಕದಲಿಕೆಗಳನ್ನು ಮಾನವರ ಬಳಿ ಒಂದು ವಿಧವಾಗಿ, ಪ್ರಾಣಿಗಳ ಬಳಿ ಒಂದು ವಿಧವಾಗಿ ಉಂಟುಮಾಡುತ್ತಿವೆ ಎಂದು ತಿಳಿಯುತ್ತಿದೆ. ಇದನ್ನು ಕುರಿತು ಚೆನ್ನಾಗಿ ಯೋಚಿಸಿದರು ತಿಳಿಯುವುದೇನೆಂದರೆ! ಜೀವಾತ್ಮ ಒಂದರ ಇಚ್ಛೆಯಲ್ಲಿ ಕೆಲಸಮಾಡುವ ಖಂಡರಗಳೆಂದು, ಇಚ್ಛೆಯಲ್ಲಿ ಇಲ್ಲದಂತೆ ಕೆಲಸಮಾಡುವ ಕಂಡರಗಳೆಂದು ಎರಡು ಭಾಗಗಳಾಗಿ ಸರ್ವಜೀವರಾಶಿಗಳ ಶರೀರಗಳಲ್ಲಿ ಇವೆ. ಜೀವಿಗೆ ತಿಳಿದು ಬುದ್ಧಿ ಚಿತ್ತದ ಮೂಲಕ ನಡೆಯುವ ಕೆಲಸಗಳನ್ನು ಇಚ್ಛಾದೀನ ಖಂಡರಗಳ ಮೂಲಕ ನಡೆಯುವ ಕೆಲಸಗಳೆಂದು ಅನ್ನುತ್ತಿದ್ದೇವೆ. ಜೀವಿಗೆ ತಿಳಿಯದೆಯೇ ಬುದ್ಧಿ ಚಿತ್ತಗಳಿಗೆ ಸಂಬಂಧವಿಲ್ಲದೆ ಸ್ವತಃವಾಗಿ ಆತ್ಮದಿಂದಲೇ ಮಾಡುವ ಕೆಲಸಗಳನ್ನು ಅನಿಚ್ಛಾದೀನ ಖಂಡರಗಳ ಮೂಲಕ ನಡೆಯುವ ಕೆಲಸಗಳೆಂದು ಅನ್ನುತ್ತೇವೆ. ಯಾವ ಕೆಲಸ ನಡೆದರು ಕರ್ಮ ವನ್ನನುಸರಿಸಿಯೇ ಆದರೂ, ಆ ಕೆಲಸಗಳು ಎರಡು ವಿಧಗಳಾಗಿ ವಿಭಜಿಸಲ್ಪಟ್ಟು ಕೆಲವು ಇಚ್ಛಾದೀನ ಕಂಡರಗಳ ಮೂಲಕ, ಕೆಲವು ಅನಿಚ್ಛಾದೀನ ಕಂಡರಗಳ ಮೂಲಕ ನಡೆಸುವಂತೆ ಪರಮಾತ್ಮ ನಿರ್ಣಯಿಸಿಟ್ಟಿದ್ದಾನೆ. ಆತನ ನಿರ್ಣಯದ ಪ್ರಕಾರವೇ ಜಗತ್ತಿನಲ್ಲಿ ನಿಶ್ಚಯವಾಗಿ ತಪ್ಪದೆ ನಡೆಯುತ್ತಿದೆ. ಇವುಗಳನ್ನು ಸ್ವಲ್ಪ ವಿವರಿಸಿಕೊಂಡು ನೋಡೋಣ.

ಕರ್ಮ ಪ್ರಕಾರ ಪ್ರತಿ ಕದಲಿಕೆ ಇದೆಯೆಂದು, ಕೊನೆಗೆ ಹೆಜ್ಜೆ ತೆಗೆದು ಹೆಜ್ಜೆ ಹಾಕುವುದಕ್ಕೂ, ಕಣ್ಣರೆಪ್ಪೆ ಮುಚ್ಚಿ ತೆರೆಯುವುದಕ್ಕೂ ಸಹ ಕರ್ಮದಲ್ಲಿ

ಲೆಕ್ಕ ಇದೆಯೆಂದು **ಭಗವದ್ಗೀತೆಯಲ್ಲಿ** ಹೇಳಲಾಗಿದೆ. ಆಗಿರುವ ಕರ್ಮ ಸ್ವಲ್ಪ ಮನಸ್ಸು, ಬುದ್ಧಿ, ಚಿತ್ತದಿಂದ ಆಚರಣೆಗೆ ಬರುತ್ತಿದೆ. ಸ್ವಲ್ಪ ಮನಸ್ಸು, ಬುದ್ಧಿ, ಚಿತ್ತವೊಂದರ ಸಂಬಂಧ ಇಲ್ಲದೆಯೇ ಆಚರಣೆ ನಡೆಯುತ್ತಿದೆ. ಇಂತಹವುಗಳಲ್ಲಿಯೇ ಪ್ರಾಣಿಗಳಿಗೂ, ಮನುಷ್ಯರಿಗೂ ಬಹಳ ವ್ಯತ್ಯಾಸ ಕಲ್ಪಿಸಲ್ಪಟ್ಟಿದೆ. ಕರ್ಮ ಎರಡು ವಿಧಗಳಾಗಿ ಜೀವರಾಶಿಗಳ ಶರೀರಗಳಲ್ಲಿ ಆಚರಣೆಗೆ ಬರುವ ಪದ್ಧತಿಯನ್ನು ವಿಭಜಿಸಿ ನೋಡಿದಂತಾದರೆ ಈ ವಿಧವಾಗಿದೆ. ಒಂದು ಇಚ್ಛಾಧೀನ ಕಂಡರಗಳಿಂದ ಮನಸ್ಸು, ಬುದ್ಧಿ, ಚಿತ್ತದ ಜೋಕ್ಯದ ಮೂಲಕ ನಡೆಸಲ್ಪಡುವ ಕೆಲಸಗಳು ಇವೆ. ಉದಾಹರಣೆಗೆ ಓಡುವುದು ಕರ್ಮವನ್ನನುಸರಿಸಿ ನಡೆಯುತ್ತಿದ್ದರೂ, ಚಿತ್ತದಿಂದ ತಲೆಯಿಂದ ಆಜ್ಞೆ ಬಂದಾಗಲೇ ಮನುಷ್ಯ ಓಡುತ್ತಿದ್ದಾನೆ. ಮೇಲಕ್ಕೆ ಓಡುವ ಕಾರ್ಯ ನಡೆದಾಗ ಶರೀರದೊಳಗೆ ಮನಸ್ಸಿನ ಮೂಲಕ ತಿಳಿದ ವಿಷಯವನ್ನು ಬುದ್ಧಿ ಯೋಚಿಸಿದ ನಂತರ, ಈಗ ಓಡುವುದೇ ಒಳ್ಳೆಯದೆಂದು ಚಿತ್ತ ನಿರ್ಣಯಿಸಿದ ನಂತರ, ಆ ವಿಷಯವನ್ನು ಮನಸ್ಸು ಬಾಹ್ಯ ಅವಯವಗಳಿಗೆ ಸೇರಿಸಿದಾಗ, ಒಳಗಿನ ಆಜ್ಞೆಯಪ್ರಕಾರ ಕಾಲುಗಳು ಓಡುತ್ತಿವೆ. ಒಳಗಿನ ಚಿತ್ತ ಆಜ್ಞೆಯನ್ನನುಸರಿಸಿ ನಡೆದ ಕಾರ್ಯವಾದ್ದರಿಂದ ಇದನ್ನು ಇಚ್ಛಾಧೀನ ಕಾರ್ಯವೆನ್ನುತ್ತಿದ್ದಾರೆ. ಇಂತಹ ಕೆಲಸಗಳೆಲ್ಲವೂ ಮಾಡುವ ಕಾಲು, ಕೈಗಳು, ಬಾಯಿ, ಗುದ, ಲಿಂಗ ಅನ್ನುವ ಐದು ಅವಯವಗಳನ್ನು ಇಚ್ಛಾಧೀನ ಖಂಡರಗಳನ್ನುತ್ತಿದ್ದೇವೆ. ಚಿತ್ತವೊಂದರ ಅಧೀನದಲ್ಲಿದ್ದು ಅದರ ಇಷ್ಟಪ್ರಕಾರ ನಡೆಯುವ ಕಾರ್ಯಗಳನ್ನು ಇಚ್ಛಾಧೀನ ಕಾರ್ಯಗಳೆನ್ನುತ್ತಿದ್ದೇವೆ. ಇಚ್ಛಾಧೀನವಾದರೂ, ಅನಿಚ್ಛಾಧೀನವಾದರೂ ಕರ್ಮಪ್ರಕಾರವೇ ನಡೆಯುತ್ತಿರುತ್ತದೆ ಎಂದು ಮೊದಲೇ ಹೇಳಿಕೊಂಡಿದ್ದೇವೆ ಅಲ್ಲವೆ! ಕರ್ಮ ಪ್ರಕಾರ ಓಡಬೇಕಾಗಿರುವಾಗ ಅದು ಅಂತರೇಂದ್ರಿಯಗಳಾದ ಮನೋಬುದ್ಧಿ ಚಿತ್ತಗಳ ಮೂಲಕ, ಹೊರಗೆ ಕರ್ಮೇಂದ್ರಿಯಗಳ ಮೂಲಕ ಕಾರ್ಯಾಚರಣೆಗೆ ಬರುತ್ತದೆ. ಇದರಲ್ಲಿ ಜೀವಿಯ ಇಚ್ಛೆ ಏನೂ ಇಲ್ಲ. ಈ ಕಾರ್ಯದಲ್ಲಿ ಜೀವಿಯ ಜೋಕ್ಯ ಏನುಯಿಲ್ಲ. ಆದರೂ ಈ ಕಾರ್ಯಗಳು ನಡೆಯುತ್ತಿರುವಾಗ, ನಡೆದ ನಂತರ ಉಂಟಾಗುವ ಸುಖವನ್ನಾಗಲಿ, ಶ್ರಮವನ್ನಾಗಲಿ ಅನುಭವಿಸುವುದೇ ಜೀವಿಯ

ಮುಖ್ಯಕರ್ತವ್ಯ. ಪ್ರತಿ ಕೆಲಸ ಜೀವಿಯ ಇಚ್ಛೆಗೆ ಯಾವ ಸಂಬಂಧವಿಲ್ಲ. ಆದರೂ ಈ ಕಾರ್ಯಗಳೆಲ್ಲವೂ ನನ್ನ ಇಷ್ಟಾನುಸಾರವೇ ನಡೆಯುತ್ತಿವೆ ಎಂದೂ, ನಿರ್ಣಯಗಳನ್ನು ತೆಗೆದುಕೊಳ್ಳುವುದು ತಾನೇ ಎಂದು ಜೀವಿಯು ನಿತ್ಯ ಅಂದುಕೊಳ್ಳುತ್ತಿದ್ದಾನೆ. ಹಾಗೆ ಅಂದುಕೊಳ್ಳುವಂತೆ ಪ್ರತಿ ಜೀವಿಯನ್ನು ಮಾಡುವುದು ಅವನ ಶರೀರದಲ್ಲಿನ ಅಹಮ್ ಅನ್ನುವ ಭಾಗವೇ. ಶರೀರದಲ್ಲಿನ ಪ್ರತಿ ಭಾಗಕ್ಕು ಒಂದೊಂದು ಕೆಲಸ ಇರುವಂತೆ, ಪ್ರತಿ ಕೆಲಸವನ್ನು ಜೀವಿಯೇ ಮಾಡುತ್ತಿದ್ದಾನೆಂದು, ಪ್ರತಿ ಕೆಲಸ ಜೀವಿಯ ನಿರ್ಣಯದ ಪ್ರಕಾರ ನಡೆಯುತ್ತಿದೆ ಎಂದು, ಜೀವಿಯನ್ನು ಭ್ರಮಿಸುವಂತೆ ಮಾಡುವುದೇ ಅಹಮ್‌ಗೆ ಮುಖ್ಯವಾದ ಕೆಲಸ. ಅಹಮ್‌ನಿಂದ ಭ್ರಮಿಸಿದ ಜೀವಿಯು ಎಲ್ಲದಕ್ಕೂ ತನ್ನ ನಿರ್ಣಯವೇ ಕಾರಣವೆಂದು, ಎಲ್ಲವನ್ನು ನಾನೇ ಮಾಡುತ್ತಿದ್ದೇನೆಂದು ತಿಳಿದು, ತಾನು ಮಾಡದ ಎಲ್ಲಾ ಕಾರ್ಯಗಳನ್ನು ತನ್ನಮೇಲೆ ಹಾಕಿಕೊಳ್ಳುತ್ತಿದ್ದಾನೆ. ಹಾಗೆ ಜೀವಿಯು ಅಂದುಕೊಳ್ಳುವುದರಿಂದ ನಡೆದ ಕೆಲಸದಲ್ಲಿ ಹೊಸದಾಗಿ ಹುಟ್ಟಿಕೊಂಡು ಬರುವ ಕರ್ಮ ಜೀವಿಯ ಕರ್ಮಚಕ್ರವನ್ನು ಸೇರಿ ಅದು ಮರುಜನ್ಮಕ್ಕೆ ಕಾರಣವಾಗುತ್ತಿದೆ. ಹೀಗೆ ಇಚ್ಛಾಧೀನ ಖಂಡರಗಳ ಕಾರ್ಯವಿರುವ ಪ್ರತಿ ಕೆಲಸದಲ್ಲಿಯೂ, ಪ್ರತಿ ಜೀವಿಗು ಅಹಮ್ ಒಂದರ ಪ್ರಭಾವ ತಪ್ಪುವುದಿಲ್ಲ. ಅದರಿಂದ ಕರ್ಮ ಅಂಟದೆ ತಪ್ಪುವುದಿಲ್ಲ,

ಇನ್ನು ಅನಿಚ್ಛಾಧೀನ ಖಂಡರಗಳೆಂದರೆ ಏನೋ ಅವುಗಳ ಕಾರ್ಯಗಳೇನೋ ನೋಡೋಣ. ನಮ್ಮ ಶರೀರದಲ್ಲಿ ಗುಂಡಿಗೆ ಹೊಡೆದುಕೊಳ್ಳುತ್ತಿದೆ, ಊಸಿರಾಡುತ್ತಿದೆ, ತಿಂದ ಅನ್ನ ಜೀರ್ಣವಾಗುತ್ತಿದೆ. ಹೀಗೆ ಮನಸ್ಸು, ಬುದ್ಧಿ, ಚಿತ್ತಗಳಿಗೆ ಸಂಬಂಧವಿಲ್ಲದ ಕಾರ್ಯಗಳನೇಕ ಶರೀರದಲ್ಲಿ ನಡೆಯುತ್ತಿವೆ. ಈ ಕೆಲಸಗಳು ಮಾಡುವ ಎದೆ (ಹಾರ್ಟ್), ಊಸಿರಾಟಚೀಲಗಳು, ಜೀರ್ಣಾಶಯ ಮೊದಲಾದವು ಅನಿಚ್ಛಾಧೀನ ಖಂಡರಗಳೆಂದು ಅನ್ನುತ್ತಿದ್ದೇವೆ. ಈ ಕೆಲಸಗಳಿಗೆಲ್ಲ ಆತ್ಮ ಸ್ವತಃ ತನ್ನ ಚೈತನ್ಯದಿಂದ ಮಾಡಿಸುತ್ತಿದೆ. ನಾವು ಎಚ್ಚರಿಕೆಯಲ್ಲಿ ಇರುವಾಗಾಗಲಿ, ನಿದ್ರೆಯಲ್ಲಿ ಇರುವಾಗಾಗಲಿ, ನಮ್ಮ ಪ್ರಮೇಯ ಇಲ್ಲದೇ

ಗುಂಡಿಗೆ ಹೊಡೆದುಕೊಳ್ಳುವುದು ಎಲ್ಲರಿಗೂ ತಿಳಿದ ವಿಷಯವೆ. ಆದರೂ ಇಲ್ಲಿ ಅಹಮ್ ಜೀವಿಯನ್ನು ಭ್ರಮಿಸುವಂತೆ ಮಾಡಲಿಲ್ಲ. ಆದ್ದರಿಂದ ಆ ಕೆಲಸಗಳನ್ನು ಜೀವಿಯು ತಾನು ಮಾಡುತ್ತಿದ್ದೇನೆಂದು ಭ್ರಮಿಸುವುದಿಲ್ಲ, ಆದ್ದರಿಂದ ಹುಟ್ಟಿದಾಗಿನಿಂದ ಮರಣಿಸುವರೆಗೂ ಶರೀರಗಳಲ್ಲಿ ಆತ್ಮಗಳು ಮಾಡುವ ಅನಿಚ್ಛಾದೀನ ಕೆಲಸಗಳಿಂದ ಜೀವಿಗೆ ಪಾಪಪುಣ್ಯ ಕರ್ಮಗಳು ಬರುತ್ತಿಲ್ಲ. ಇಚ್ಛಾದೀನ ಖಂಡರಗಳ ಕಾರ್ಯಗಳಲ್ಲಿಯೇ ಅಹಮ್‌ನಿಂದ ಕರ್ಮ ಅಂಟಿ ಕೊಳ್ಳುವ ಅವಕಾಶ ಇದೆ. ಆದರೆ ಅನಿಚ್ಛಾದೀನ ಖಂಡರಗಳ ಕಾರ್ಯದಲ್ಲಿ ಅಹಮ್ ಇಲ್ಲ, ಕರ್ಮ ಬರುವುದಿಲ್ಲ.

**ಅನಿಚ್ಛಾದೀನ ಖಂಡರಗಳನ್ನು ಹೆಚ್ಚಾಗಿ ಇಚ್ಛಾದೀನ ಖಂಡರಗಳನ್ನು ಕಡಿಮೆಯಾಗಿ ಪ್ರಾಣಿಗಳಿಗು, ಇಚ್ಛಾದೀನ ಖಂಡರಗಳನ್ನು ಹೆಚ್ಚಾಗಿ ಅನಿಚ್ಛಾದೀನ ಖಂಡರಗಳನ್ನು ಕಡಿಮೆಯಾಗಿ ಮನುಷ್ಯರಿಗೆ ದೇವರುಕೊಟ್ಟಿದ್ದಾನೆ.** ಇದರಿಂದ ಪ್ರಾಣಿಗಳ ಬಳಿ ಆತ್ಮ ಹೆಚ್ಚಾಗಿ ಕೆಲಸಮಾಡುತ್ತಾ, ಮನುಷ್ಯರ ಬಳಿ ಕಡಿಮೆ ಕೆಲಸ ಮಾಡುತ್ತಿದೆ. ಮನುಷ್ಯರ ಬಳಿ ಮನೋಬುದ್ಧಿ ಚಿತ್ತಗಳು ಹೆಚ್ಚಾಗಿ ಕೆಲಸಮಾಡುತ್ತಾ, ಪ್ರಾಣಿಗಳ ಬಳಿ ಕಡಿಮೆ ಕೆಲಸಮಾಡುತ್ತಿವೆ. ಆದ್ದರಿಂದ ಮನುಷ್ಯರಲ್ಲಿನ ಬುದ್ಧಿ ಇರುವಂತೆ ಪ್ರಾಣಿಗಳಲ್ಲಿನ ಬುದ್ಧಿ ಇಲ್ಲ. ಬುದ್ಧಿ ಕುಶಲತೆ ಹೆಚ್ಚಾಗಿರುವ ಮನುಷ್ಯಜಾತಿ, ಬುದ್ಧಿಯ ಕೆಲಸ ಕಡಿಮೆ ಇರುವ ಇತರ ಜಾತಿಗಳನ್ನು ತನ್ನ ವಶಮಾಡಿಕೊಂಡು ಅವುಗಳನ್ನಾಡಿಸುತ್ತಿದ್ದಾನೆ. ಬುದ್ಧಿ ಹೆಚ್ಚಾಗಿರುವ ಮಾನವಜಾತಿ ತನ್ನ ತಿಳುವಳಿಕೆಯಿಂದ ಸೈಕಲ್‌ನಿಂದ ರಾಕೆಟ್‌ಗಳವರೆಗು ಕಂಡುಹಿಡಿದಿದ್ದಾನೆ, ಕಂಪ್ಯೂಟರ್‌ಗಳನ್ನು ಕಂಡುಹಿಡಿದಿದ್ದಾನೆ. ಆದರೆ ಬುದ್ಧಿ ಕುಶಲತೆ ಇಲ್ಲದ ಪಶುಪಕ್ಷಿ ಮೃಗಾದಿಗಳು ಏನು ಕಂಡುಹಿಡಿಯದೆ ಹೋಗಿವೆ. ಮಾನವಜಾತಿ ಎಷ್ಟು ಕಂಡುಹಿಡಿದರೂ ತನ್ನ ಅಹಮ್‌ನಿಂದ ಕರ್ಮಗಳನ್ನು ಹೆಚ್ಚಾಗಿ ಸಂಪಾದಿಸಿಕೊಳ್ಳುತ್ತಿದೆ. ಆತ್ಮಶಕ್ತಿಯಿಂದ ಹೆಚ್ಚು ಕೆಲಸಗಳು ಮಾಡುವ ಪ್ರಾಣಿಗಳು ಪಕ್ಷಿಗಳು ತಮ್ಮ ಕರ್ಮವನ್ನು ಹೆಚ್ಚಾಗಿ ಖರ್ಚುಮಾಡುತ್ತಿವೆ. ಆದರೆ ಕಡಿಮೆ ಕರ್ಮವನ್ನು ಸಂಪಾದಿಸಿಕೊಳ್ಳುತ್ತಿವೆ.

ಮಾನವಜಾತಿ ಎಲ್ಲಾ ಜನ್ಮಗಳಿಗಿಂತ ಉತ್ತಮವಾದುದೆನ್ನುವುದು ಒಂದು ವಿಧವಾಗಿ ತಪ್ಪೆನಿಸುತ್ತದೆ. ಏಕೆಂದರೆ ಬುದ್ಧಿಯಲ್ಲಿ ಉತ್ತಮವಾದಷ್ಟು ಮಾತ್ರಕ್ಕೆ ಉಪಯೋಗವೇನೂ ಇಲ್ಲ. ಒಂದು ವಿಧವಾಗಿ ದೇವರನ್ನು ತಿಳಿದುಕೊಳ್ಳುವುದಕ್ಕೆ, ದೈವಜ್ಞಾನವನ್ನಾರ್ಜಿಸುವುದಕ್ಕೆ ಅವಕಾಶವಿರುವ ಜನ್ಮ ಅಂದುಕೊಳ್ಳುವುದಕ್ಕು ಸಹ ಸಾಧ್ಯವಿಲ್ಲ. ಪ್ರಾಣಿಗಳಿಗು ಮಾನವರಿಗು ದೇವರನ್ನು ತಿಳಿದುಕೊಳ್ಳುವ ಮಾರ್ಗ ಸಮಾನವಾಗಿ ಇದೆ. ಪ್ರಾಣಿಗಳಲ್ಲಿಯೂ ಇತರ ಜಾತಿಗಳಲ್ಲಿಯೂ ಮಾನವನಿಗಿಂತ ಹತ್ತಿರವಾಗಿ ದೇವರನ್ನು ತಿಳಿದುಕೊಳ್ಳುವ ವಿಧಾನವಿದೆ. ಅದಕ್ಕೆ ಸಂಬಂಧಿಸಿದಷ್ಟು ಬುದ್ಧಿ ಇದೆ. ಮಾನವನೇ ದೇವರನ್ನು ತಿಳಿದುಕೊಳ್ಳುವ ಮಾರ್ಗಕ್ಕೆ ದೂರವಾಗಿದ್ದಾನೆ. ದೇವರೊಬ್ಬನೇ ಎಂಬ ಭಾವವನ್ನು ಬಿಟ್ಟು ಅನೇಕ ದೇವತೆಗಳನ್ನು ಆರಾಧಿಸುತ್ತಾ ಪರಮಾತ್ಮನಿಗೆ ದೂರವಾಗುತ್ತಿದ್ದಾನೆ. ಪ್ರಾಣಿಗಳ ಭಾಷಾ ವಿಧಾನ ನಮಗೆ ಗೊತ್ತಿಲ್ಲ, ಆದ್ದರಿಂದ ಅವು ದೈವಮಾರ್ಗದಲ್ಲಿ ನಮಗಿಂತ ಕಡಿಮೆಯೆಂದುಕೊಳ್ಳುವುದು ತಪ್ಪಾಗುತ್ತದೆ.

ಒಂದು ವಿಧವಾಗಿ ಪ್ರತ್ಯಕ್ಷವಾಗಿ ಕಾಣಿಸುವ ವಿಧಾನವನ್ನು ಪರಿಶೀಲಿಸಿ ನೋಡಿದರೂ, ಮಾನವನಿಗಿಂತ ಉಳಿದ ಜಾತಿಗಳು ದೇವರಿಗೆ ಹತ್ತಿರವಾಗಿ ಇವೆಯೆಂದು ಹೇಳಬಹುದು. ಮಾನವನು ಪ್ರತಿನಿತ್ಯ ಅಹಮ್‌ನಿಂದ ಕರ್ಮವನ್ನು ಸಂಪಾದಿಸಿಕೊಳ್ಳುತ್ತಾ ದೇವರಿಗೆ ದೂರವಾಗುತ್ತಿದ್ದಾನೆ. ಉಳಿದ ಜಾತಿಗಳು ಪ್ರತಿನಿತ್ಯ ಕರ್ಮವನ್ನು ಸಂಪಾದಿಸಿಕೊಳ್ಳದೆ, ಹೆಚ್ಚಾಗಿ ಅನುಭವಿಸುತ್ತಾ ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುತ್ತಿವೆ. ಮಾನವನು ಮಾತ್ರ ಅನುಭವಿಸುವುದು ಕಡಿಮೆ, ಸಂಪಾದಿಸಿಕೊಳ್ಳುವುದು ಹೆಚ್ಚು. ಆದ್ದರಿಂದ ದಿನ ದಿನವು ದೇವರಿಗೆ ದೂರ ವಾಗುವುದೇ ನಡೆಯುತ್ತಿದೆ.

ಮಾನವಜಾತಿಗಿಂತ ಪಶು ಪಕ್ಷಿ ಮೃಗ ಜಾತಿಗಳೇ ಉತ್ತಮವೆನ್ನುವುದಕ್ಕೆ ನಿದರ್ಶನವಾಗಿ ಆತ್ಮ ಅವುಗಳ ಬಳಿ ಸ್ವತಃ ಕೆಲಸಮಾಡುತ್ತಿದೆ. ಹುಟ್ಟಿದ ಮರಿಗಳಿಗೂ ಸಹಿತ ಹಾಲಿನ ಕೆಚ್ಚಲನ್ನು ಆತ್ಮವೇ ತೋರಿಸುತ್ತಿದೆ. ಹಾಲು ಕುಡಿಯಬೇಕೆಂಬ ಪರಿಜ್ಞಾನವನ್ನು ಏರ್ಪಡಿಸುತ್ತಿದೆ. ಮಾನವನ ಬಗ್ಗೆ ಆತ್ಮ

ಕೆಲಸಮಾಡದೆ ಅವನ ಬುದ್ಧಿಗೆ ಬಿಡುವುದರಿಂದ, ಬುದ್ಧಿ ಕೆಲಸಮಾಡದ ಮಾನವ ಶಿಶುವು ತಾಯಿಯ ಎದೆಹಾಲನ್ನು ಸಹ ಗುರ್ತಿಸಲಾರದು. ಇದರಿಂದ ಸಕಲ ಜೀವರಾಶಿಗಳ ಬಗ್ಗೆ ಆತ್ಮಗಳಿರುವಂತೆ ಮಾನವಜಾತಿ ಬಳಿ ಇಲ್ಲವೆಂದು, ಆತ್ಮಗಳಿಗೆ ಸರ್ವರು ಸಮಾನ ಅಲ್ಲವೆಂದು ತಿಳಿಯುತ್ತಿದೆ. ಅಷ್ಟೇಅಲ್ಲದೆ ಪ್ರಾಣಿಗಳಿಗಿಂತ ಮತ್ತಷ್ಟು ಹೆಚ್ಚಾಗಿ ವೃಕ್ಷಗಳ ಬಗ್ಗೆ ಆತ್ಮ ಕೆಲಸಮಾಡುತ್ತಿದೆ ಎಂದು ತಿಳಿಯುತ್ತಿದೆ. ಸರ್ವ ಜೀವರಾಶಿಗಳನ್ನು ತನ್ನ ಚೈತನ್ಯದಿಂದ ಆಡಿಸುವ ಆತ್ಮ ವೃಕ್ಷಗಳಲ್ಲಿ ಕದಲಿಕೆಗಳು ಇಲ್ಲದಿದ್ದರೂ ಅವುಗಳ ಜೀವನ ವಿಧಾನವನ್ನು ತನ್ನ ಮೇಲೆಯೆ ಹೆಚ್ಚಾಗಿ ಇಟ್ಟುಕೊಳ್ಳುತ್ತಿದೆ. ಪ್ರಾಣಿಗಳಿಗಿಂತ ಬುದ್ಧಿ ಕಡಿಮೆಯಿರುವ ವೃಕ್ಷಗಳು ಪ್ರಾಣಿಗಳಿಗಿಂತ ಕರ್ಮವನ್ನು ಸಂಪಾದಿಸುವುದು, ಅನುಭವಿಸುವುದು ಕಡಿಮೆ, ಒಂದು ಹೊಡೆತದ ಅನುಭೂತಿ ಮಾನವರಲ್ಲಿ ಹೆಚ್ಚು, ಪ್ರಾಣಿಗಳಲ್ಲಿ ಕಡಿಮೆ. ವೃಕ್ಷಗಳಲ್ಲಿ ಮತ್ತಷ್ಟು ಕಡಿಮೆಯಾಗಿರುವುದು ಗಮನಾರ್ಹ, ಇವುಗಳೆಲ್ಲವನ್ನು ಪರಿಶೀಲಿಸಿದಂತಾದರೆ ಜೀವಿಗಳಿಗೆ ಆತ್ಮಗಳು ಸಮಾನವಾದರೂ, ಆತ್ಮಗಳಿಗೆ ಜೀವಿಗಳು ಸಮಾನ ಅಲ್ಲವೆಂದು ತಿಳಿಯುತ್ತಿದೆ.

# ಇಂದೂ

ಜ್ಯೋತಿಷ್ಯಶಾಸ್ತ್ರದ ಪ್ರಕಾರ ಜ್ಞಾನಕ್ಕೆ ಅಧಿಪತಿ ನವಗ್ರಹಗಳಲ್ಲಿನ ಚಂದ್ರನು. ಭೂಮಿಮೇಲೆ ಮಾನವನಿಗೆ ಕರ್ಮದ ಪ್ರಕಾರ ಸಮಸ್ತವನ್ನು ಸಮಗೂಡಿಸಿ ಇಡುವವು ನವಗ್ರಹಗಳೇ ಎಂದು ತಿಳಿಯಬೇಕು. ಮಾನವನಿಗೆ ಹೊಸ ಜ್ಞಾನವನ್ನು ಸಂಪಾದಿಸಿಡುವುದರಲ್ಲಿ ಚಂದ್ರನಿಗೆ ಅಧಿಕಾರ ಇಲ್ಲದಿದ್ದರೂ, ಹೋದ ಜನ್ಮದಲ್ಲಿ ಎಷ್ಟು ಜ್ಞಾನ ಇದೆಯೋ ಅಷ್ಟು ಮರು ಜನ್ಮಕ್ಕು ಸಹ ಒದಗಿಸುವ ಜವಾಬ್ಧಾರಿ ಚಂದ್ರನಿಗೆ ಮಾತ್ರ ಇದೆ. ಆದ್ದರಿಂದ ಜ್ಯೋತಿಷ್ಯಶಾಸ್ತ್ರದಲ್ಲಿ ಜ್ಞಾನಕ್ಕೆ ಅಧಿಪತಿಯಾಗಿ ಚಂದ್ರನು ನಿಂತಿದ್ದಾನೆ. ಕಣ್ಣಿನ ದೃಷ್ಟಿಗೆ, ನೀರಿಗೆ, ಆಕಾಶಕ್ಕೂ ಮೊದಲಾದ ಎಷ್ಟಕ್ಕೋ ಆದಿಪತ್ಯ ವಹಿಸುತ್ತಾ ಮಾನವನಿಗೆ ಕರ್ಮದ ಪ್ರಕಾರ ಅವುಗಳನ್ನು

ತಿಳಿಸುತ್ತಿದ್ದರೂ ಚಂದ್ರನಿಗೆ ಪ್ರತ್ಯೇಕವಾದ ಹೆಸರು ಬರಲಿಲ್ಲ. ಆದರೆ ಒಂದೇ ಒಂದು ಜ್ಞಾನಕ್ಕೆ ಅಧಿಪತಿಯಾಗಿರುವುದರಿಂದ ಇಂದೂ ಅನ್ನುವ ಪ್ರತ್ಯೇಕವಾದ ಹೆಸರು ಬಂದಿದೆ. ಇದರಿಂದ ಆಕಾಶದಲ್ಲಿ ಇಂದೂ ಚಂದ್ರನೆಂದು ಎಲ್ಲರೂ ಗ್ರಹಿಸಬೇಕು.

ಯೋಗಶಾಸ್ತ್ರವಾದ ಗೀತೆಯಲ್ಲಿ ದೇವರೊಂದರ ವಿಶ್ವರೂಪವನ್ನು ಕುರಿತು ತಿಳಿಸುವಾಗ ಸೂರ್ಯ ಪ್ರಕಾಶವನ್ನು ಹೋಲಿಸಿ ಹೇಳಿದ್ದಾರೆ. ಹಾಗೆ ದೇವರೊಂದರ ಜ್ಞಾನವನ್ನು ಕುರಿತು ಹೇಳುವಾಗ ಚಂದ್ರ ಪ್ರಕಾಶವನ್ನು ಕುರಿತು ಹೇಳಿದ್ದಾರೆ. ಅಂದರೆ ದೇವರನ್ನು ಸೂರ್ಯನಾಗಿ, ದೇವರಜ್ಞಾನವನ್ನು ಚಂದ್ರನಿಗೆ ಹೋಲಿಸಿ ಹೇಳುವುದಾಗಿದೆ. ಹಾಗೆ ಹೋಲಿಸುವುದಕ್ಕೆ ಕಾರಣ ಇದೆ. ಸೂರ್ಯನು ಸ್ವಯಂ ಪ್ರಕಾಶಕನು. ಸೂರ್ಯನು ಸ್ವತಃವಾಗಿ ಉರಿಯುತ್ತಿರುವ ಅಗ್ನಿಗೋಳ. ಚಂದ್ರನು ಸ್ವಯಂ ಪ್ರಕಾಶ ಇಲ್ಲದವನು, ಸೂರ್ಯಕಿರಣ ಚಂದ್ರನ ಮೇಲೆ ಬಿದ್ದಾಗ ಮಾತ್ರವೇ ಪ್ರಕಾಶಿಸುತ್ತಾನೆ. ಸೂರ್ಯ ಕಿರಣ ಎಷ್ಟು ಪ್ರದೇಶದಲ್ಲಿ ಬಿದ್ದರೆ ಅಷ್ಟು ಪ್ರದೇಶವೇ ಪ್ರಕಾಶವಂತವಾಗಿ ಚಂದ್ರನು ಕಾಣಿಸುತ್ತಾನೆ. ಇಂತಹ ಏರ್ಪಾಟುಗಳು ನವ ಗ್ರಹಗಳಲ್ಲಿ ಮತ್ಯಾವ ಇತರ ಗ್ರಹಗಳಿಗೆ ಇಲ್ಲ. ಸೂರ್ಯನಿಗೆ ಎಷ್ಟು ಎದುರಾಗಿಹೋದರೆ ಎಲ್ಲಾ ಕಿರಣಗಳು ಚಂದ್ರನ ಮೇಲೆಬಿದ್ದು ಚಂದ್ರನು ಪ್ರಕಾಶಿಸುತ್ತಾನೆ. ಸೂರ್ಯನಿಗೆ ಚಂದ್ರನಿಗೆ ಮಧ್ಯದಲ್ಲಿ ಭೂಮಿ ಇದೆ. ಚಂದ್ರನು ಭೂಮಿ ಹಿಂದೆ ಬಂದಾಗ ಸೂರ್ಯಕಿರಣಗಳು ಚಂದ್ರನ ಮೇಲೆ ಬೀಳದೆ ಚಂದ್ರನು ಪ್ರಕಾಶಿಸುವುದಿಲ್ಲ. ಚಂದ್ರನು ಭೂಮಿಯ ನೆರಳನ್ನು ಬಿಟ್ಟು ಎಷ್ಟು ಪಕ್ಕಕ್ಕೆ ಬಂದರೆ ಅಷ್ಟು ಪ್ರಕಾಶಿಸುತ್ತಾನೆ. ಇದು ಪ್ರತಿ ತಿಂಗಳು ಅಮಾವಾಸ್ಯೆ ಪೌರ್ಣಮಿ ರೂಪಗಳಲ್ಲಿ ನೋಡುತ್ತಲೇ ಇದ್ದೇವೆ. ದೈವಸಮಾನ ಸೂರ್ಯನಾದರೆ, ಜ್ಞಾನ ತಿಳಿದುಕೊಂಡ ಮಾನವನು ಚಂದ್ರನಿಗೆ ಸಮಾನ. ಇನ್ನು ಭೂಮಿ ದೇವರಿಗೂ ಮಾನವನಿಗೂ ಮಧ್ಯದಲ್ಲಿರುವ ಮಾಯೆಗೆ ಸಮಾನವೆಂದು ತಿಳಿಯುವಂತೆ ಪ್ರತ್ಯಕ್ಷವಾಗಿ ಅಮಾವಾಸ್ಯೆ ಪೌರ್ಣಮಿ ರೂಪದಲ್ಲಿ ಪ್ರಪಂಚ ನಿರ್ಮಾಣ ನಡೆದಿದೆ.

ಸೂರ್ಯನು ಯಾವಾಗಲೂ ಪ್ರಕಾಶಿಸುತ್ತಲೇ ಇದ್ದಾನೆ. ಹಾಗೆ ದೇವರು ಯಾವಾಗಲೂ ಇದ್ದಾನೆ. ಚಂದ್ರನು ಮಧ್ಯದಲ್ಲಿ ಅಡ್ಡವಾಗಿರುವ ಭೂಮಿ ನೆರಳನ್ನು ಬಿಟ್ಟುಹೋಗಿ ಸ್ವಲ್ಪ ಪಕ್ಕಕ್ಕೆ ಹೋದರು ಆ ಸ್ವಲ್ಪ ಭಾಗವು ಸೂರ್ಯಕಾಂತಿಯಿಂದ ಪ್ರಕಾಶಿಸುತ್ತಿದ್ದಾನೆ. ಹಾಗೆ ಮಾನವನು ಮಾಯೆಯನ್ನು ಬಿಟ್ಟು ಸ್ವಲ್ಪ ದೇವರ ಮೇಲೆ ಶ್ರದ್ಧೆಹೊಂದಿದರು ಆ ಶ್ರದ್ಧಯಂತೆಯೇ ಜ್ಞಾನ ತಿಳಿಯುತ್ತದೆ. ಭೂಮಿನೆರಳನ್ನು ಬಿಟ್ಟು ಪೂರ್ತಿ ಪಕ್ಕಕ್ಕೆ ಬರುವ ಚಂದ್ರಬಿಂಬ ಪೂರ್ತಿ ಪ್ರಕಾಶಿಸುತ್ತಾ ಪೌರ್ಣಮಿ ಆಗುತ್ತಿದೆ. ಹಾಗೆ ಯಾರಾದರೆ ಪೂರ್ತಿ ಮಾಯೆ ಪ್ರಭಾವನ್ನು ಬಿಟ್ಟು, ದೇವರ ಮೇಲೆ ಶ್ರದ್ಧೆಹೊಂದಿದ್ದಾನೋ ಅವನು ಸಂಪೂರ್ಣಜ್ಞಾನಿಯಾಗಿ ಲೆಕ್ಕಿಸಲ್ಪಡುತ್ತಿದ್ದಾನೆ. ಚಂದ್ರಬಿಂಬ ಎಷ್ಟು ಭೂಮಿಯ ನೆರಳಿಗೆ ಹೋಗುತ್ತಿದೆಯೊ, ಅಷ್ಟು ಕತ್ತಲು ಅದರಿಂದ ಏರ್ಪಡುತ್ತಿದೆ. ಪೂರ್ತಿ ಭೂಮಿ ಮರೆಯಲ್ಲಿ ಹೋದರೆ ಚಂದ್ರನು ಪೂರ್ತಿ ಕತ್ತಲಾಗಿಹೋಗಿ ಅಮಾವಾಸ್ಯೆ ಯಾಗಿ ಬದಲಾಗಿದ್ದರೂ ಇಲ್ಲದಂತೆ ಆಗುತ್ತದೆ. ಹಾಗೆ ಮಾನವನು ಮಾಯೆ ಪ್ರಭಾವವಾದ ಗುಣಗಳಕಡೆ ಹೋದಂತೆಲ್ಲಾ ಅವನಲ್ಲಿ ಅಜ್ಞಾನ ಸ್ಥಳಮಾಡಿ ಕೊಳ್ಳುತ್ತದೆ. ಪೂರ್ತಿ ಮಾಯೆ ಕಡೆಹೋಗುವವನು ಪೂರ್ತಿ ಅಜ್ಞಾನಿಯಾಗಿ ಬದಲಾಗಿದ್ದರೂ ಇಲ್ಲದಂತೆ ಆಗುತ್ತದೆ. ಪ್ರತ್ಯಕ್ಷವಾಗಿ ವಿಷಯ ಅರ್ಥವಾಗುವಂತೆ ಮೊದಲು ದೇವರು, ನಂತರ ಅಜ್ಞಾನ, ಆನಂತರ ಜ್ಞಾನವಾಗಿ, ಮೊದಲು ಸೂರ್ಯನನ್ನು, ಮಧ್ಯದಲ್ಲಿ ಭೂಮಿಯನ್ನು ನಂತರ ಚಂದ್ರನನ್ನು ಇಡುವುದು ನಡೆದಿದೆ.

ಹೀಗಿರುವಾಗ ಕೆಲವರು ಬಾಹ್ಯ ಸೂರ್ಯನನ್ನು ಮುಗಿಯುತ್ತಿದ್ದಾರೆ. ಬಾಹ್ಯ ಚಂದ್ರನನ್ನು ಹೊಗಳುತ್ತಿದ್ದಾರೆ, ಆದರೆ ಜ್ಞಾನ ತಿಳಿದುಕೊಳ್ಳದೆ ಹೋಗುತ್ತಿದ್ದಾರೆ. ದೇವರನ್ನು ಅನುಸರಿಸದೆ ಹೋಗುತ್ತಿದ್ದಾರೆ. ಕೆಲವರು ದೈವವೊಂದರ ಬೆಲೆ ತಿಳಿದವರಾಗಿ, ಹಾಗೆ ಮಾಯೆಯೊಂದರ ಬಂಧನವನ್ನು ಗುರುತಿಸಿದವರಾಗಿ, ದೇವರ ಮೇಲೆ ಶ್ರದ್ಧೆ ಬೆಳೆಸಿಕೊಂಡು ದೈವಜ್ಞಾನವನ್ನು ಹೊಂದುತ್ತಿದ್ದಾರೆ. ಪ್ರಪಂಚದಲ್ಲಿ ಅಂತಹವರು ಎಲ್ಲಿ ಇದ್ದರೂ ಅವರನ್ನು

ಜ್ಞಾನಿಗಳು ಅನ್ನುತ್ತೇವೆ. ದೇವರನ್ನು ಕುರಿತು ತಿಳಿದವನು ಯಾರಾದರೂ ಜ್ಞಾನಿಯೇ. ದೇವರೆಂಬುವುದು ಒಂದಿದೆ ಎಂದು ಅದರ ಮೇಲೆ ಭಕ್ತಿಹೊಂದಿ, ಅದರ ಮೇಲೆ ಶ್ರದ್ದೆಹೊಂದಿ ಜ್ಞಾನ ಹೊಂದಿದವನು ಅಮೇರಿಕಾ ಕ್ರೈಸ್ತವನಾಗಲಿ, ಗಲ್ಫ್ ಮುಸ್ಲೀಮ್ ನಾಗಲಿ, ಚೈನಾ ಭೌದ್ಧನಾಗಲಿ ಮತ್ತ್ಯಾವ ಇತರ ದೇಶಸ್ಥನಾಗಲಿ ಜ್ಞಾನಿಯೇ ಎನ್ನಲಾಗುತ್ತದೆ.

ದೈವಜ್ಞಾನ ಹೊಂದಿದವನನ್ನು ಜ್ಞಾನಿ ಅನ್ನುತ್ತಿದ್ದೇವಲ್ಲವೆ! ಅಂತಹವನನ್ನು ಬ್ರಹ್ಮವಿದ್ಯಾ ವಿಧಾನದಲ್ಲಿ "ಇಂದೂ" ಎಂದೂ ಸಹ ಅನ್ನುತ್ತಿದ್ದೇವೆ. ದೈವಜ್ಞಾನ ಹೊಂದಿದ ಯಾರಾದರೂ ಆಕಾಶದಲ್ಲಿ ಸೂರ್ಯಕಿರಣಗಳು ಹೊಂದಿದ ಚಂದ್ರನಿಗೆ ಸಮಾನ. ಆದ್ದರಿಂದ ಚಂದ್ರನ ಹೆಸರಾದ ಇಂದೂ ಅನ್ನುವ ಪದವನ್ನು ಜ್ಞಾನಿಗೆ ಉಪಯೋಗಿಸುತ್ತಿದ್ದೇವೆ. ಚಂದ್ರನ ಹೆಸರನ್ನು ಜ್ಞಾನಿಯ ಬಗ್ಗೆ ಗೀತೆಯಲ್ಲಿ ಸಹ ಉಪಯೋಗಿಸುತ್ತಾ **'ತತ್ರ ಚಾಂದ್ರ ಮಸಂ ಜ್ಯೋತಿರ್ಯೋಗಿ ಪ್ರಾಪ್ಯನಿ ವರ್ತತೇ'** ಎಂದು ಅಕ್ಷರ ಪರಬ್ರಹ್ಮ ಯೋಗವೆಂಬ 25ನೇ ಶ್ಲೋಕದಲ್ಲಿ ಸಹ ಅನ್ನುವುದು ನಡೆದಿದೆ. ಪೂರ್ವಜನ್ಮದಲ್ಲಿ ಯೋಗಿಯಾದವನು ಮೋಕ್ಷಹೊಂದ ದಿರುವಾಗ ಮತ್ತೆ ಚಂದ್ರತೇಜಸ್ಸನ್ನು ಹೊಂದಿ ಪುನರ್ಜನ್ಮ (ಪುನರುದ್ಭವ) ಪಡೆಯುತ್ತಾನೆಂದು ಭಗವಂತನು ಹೇಳಿದ ಮಾತು ಗೀತೆಯಲ್ಲಿ ಇದೆ. ಚಂದ್ರತೇ ಜಸ್ಸು ಆಕಾಶದಲ್ಲಿ ಬೆಳದಿಂಗಳ ರೂಪದಲ್ಲಿ, ಮಾನವರಲ್ಲಿ ಜ್ಞಾನರೂಪದಲ್ಲಿ ಇರುತ್ತದೆ ಎಂದು ತಿಳಿಯುತ್ತಿದೆ. ಆದ್ದರಿಂದಲೇ ದೈವಜ್ಞಾನ ಹೊಂದಿದವನನ್ನು ಇಂದೂ ಅನ್ನುತ್ತಿದ್ದೇವೆ.

ಸೂರ್ಯ, ಚಂದ್ರ, ಭೂಮಿ ಕ್ರಮವಾಗಿ ದೇವರು, ಜ್ಞಾನ, ಮಾಯೆಗಳಾಗಿ ಅರ್ಥವಾಗುವಂತೆ ಸೃಷ್ಟಿಸಿದ ದೇವರು ಮಾನವನನ್ನು ಜ್ಞಾನಿಯಾಗಿ ಬದಲಾಗುವು ದಕ್ಕೆ ತಕ್ಕಷ್ಟು ಸೂಚನೆಗಳು ಕೊಟ್ಟಿದ್ದಾನೆ. ಆದರೂ ಮಾನವರೆಲ್ಲರು ಆ ವಿಧಾನ ವನ್ನು ತಿಳಿದುಕೊಳ್ಳದೆ ಹೋದಾಗ, ಭೂಮಿ ಮೇಲೆ ಕೆಲವರು ದೈವ ಸೂತ್ರ ವನ್ನು ಗ್ರಹಿಸಿದ್ದಾರೆ. ಎಷ್ಟೋ ದೇಶಗಳಾಗಿ ವಿಭಜಿಸಲ್ಪಟ್ಟಿರುವ ಈ ಭೂಗೋಳದಲ್ಲಿ ಭಾರತದೇಶದಲ್ಲಿ ಮಾತ್ರವೇ ದೈವಸೂತ್ರಗಳು ತಿಳಿದು ಜ್ಞಾನವನ್ನು ಹೊಂದಿದವರು

ಹೆಚ್ಚಾಗಿ ಪೂರ್ವದಲ್ಲಿದ್ದರು. ಪೂರ್ವಕಾಲದಲ್ಲಿ ಒಂದೇ ಒಂದು ಭಾರತದೇಶದಲ್ಲಿ ಜ್ಞಾನ ಹೊಂದಿದವರಿದ್ದಾರೆಂದು, ದೈವಕ್ಕೆ ಭಾರತದೇಶ ಕೇಂದ್ರವಂತಹದೆಂದು, ಪ್ರಪಂಚ ದೇಶಗಳಿಗೆಲ್ಲಾ ಸಹ ತಿಳಿದಿದೆ. ಭಾರತದೇಶ ಜ್ಞಾನಿಗಳಿಗೆ ನಿಲಯವಾದ ದೇಶವಾದ್ದರಿಂದ, ಜ್ಞಾನಕೇಂದ್ರವಾದ ದೇಶವಾದ್ದರಿಂದ, ಭಾರತದೇಶವನ್ನು ಪೂರ್ವದಲ್ಲಿ ಇತರದೇಶದವರೆಲ್ಲರೂ "ಇಂದೂದೇಶ" ಅನ್ನುತ್ತಿದ್ದರು.

ಜ್ಞಾನ ಹೊಂದಿದವನನ್ನು ಚಂದ್ರನಿಗೆ ಸಮಾನವಾಗಿ ಇಂದೂ ಅನ್ನುವುದು ಬ್ರಹ್ಮವಿದ್ಯೆಯಲ್ಲಿ ಇದೆ. ಆದ್ದರಿಂದ ಜ್ಞಾನಿಗಳ ದೇಶವಾದ ಭಾರತದೇಶ ಇಂದೂಗಳ ದೇಶವಾಗಿ ಕರೆಯಲ್ಪಡುತ್ತಿತ್ತು. ಭಾರತ ದೇಶಕ್ಕೆ ಈ ವಿಧವಾಗಿ ಪೂರ್ವಕಾಲದಲ್ಲಿ ಯಾವಾತ್ತೋ ಜ್ಞಾನಸಂಬಂಧದಿಂದ ಏರ್ಪಟ್ಟಿರುವ ಹೆಸರೇ ಇಂದೂದೇಶ.

ಅಚ್ಚು **'ಇ'** ನಿಂದ ಪ್ರಾರಂಭವಾದ ಇಂದೂದೇಶ ಈದಿನ ಎರಡು ಸೊನ್ನೆ **'ಹಿ'** ನಿಂದ ಪ್ರಾರಂಭವಾಗಿ ಹಿಂದೂದೇಶವಾಗಿ ಕರೆಯಲ್ಪಡುತ್ತಿದೆ. ಆ ದಿನ ಜ್ಞಾನಸಂಬಂಧವಾದ ಆಕಾಶ ಚಂದ್ರನಿಗೆ ಇನ್ನೊಂದು ಹೆಸರಾದ ಇಂದೂದೇಶ ಈ ದಿನ ಭೂಮಿಮೇಲೆ ನದಿಗೆ ಇನ್ನೊಂದು ಹೆಸರಾದ ಸಿಂಧೂ ದೇಶವಾಗಿ ಅದೇ ಹಿಂದೂ ದೇಶವಾಗಿ ಹೇಳಿಕೊಳ್ಳುತ್ತಿದ್ದೇವೆ. ಹಿಂದೂದೇಶವೆಂಬ ಹೆಸರು ಹೇಗೆ ಬಂದಿರುವುದು ಸ್ವಲ್ಪಜನ ಪರಿಶೀಲಕರಿಗೆ ಅರ್ಥವಾಗದೆ, ಭೂಮಿಮೇಲೆ ಪ್ರವಹಿಸುವ ಸಿಂಧೂನದಿ ಹೆಸರು ಇರುತ್ತದೆಂದು, ಸಿಂಧೂನದಿ ಪ್ರವಹಿಸುವುದರಿಂದ ಸಿಂಧೂ ದೇಶವೆಂದು, ಅದೇ ಹಿಂದೂ ದೇಶವಾಗಿ ಬದಲಾಗಿರುತ್ತದೆಂದು ಸರಿಮಾಡಿಕೊಂಡಿದ್ದಾರೆ. ಎಷ್ಟೋ ಜ್ಞಾನಚರಿತ್ರೆ ಹೊಂದಿ, ಎಷ್ಟೋ ಮಂದಿ ಬ್ರಹ್ಮರ್ಷಿಗಳು ಉದ್ಭವಿಸಿದ ಜ್ಞಾನ ನಿಲಯದೇಶವಾದ್ದರಿಂದ ಇದು ಇಂದೂದೇಶವಾಗಿ ಪೂರ್ವದಲ್ಲಿ ಇತ್ತೆಂದು ತಿಳಿಯದೆ ಹೋಗಿದ್ದಾರೆ. ಕಾಲಗರ್ಭದಲ್ಲಿ ಹಿಂದುವಾಗಿ ಬದಲಾದವನು ಜ್ಞಾನತಿಳಿದು ಪುನಃ ಇಂದೂವಾಗಿ ಬದಲಾಗಬೇಕೆಂದು, ಇದು ಹಿಂದೂದೇಶ ಅಲ್ಲ, ನಿಜಕ್ಕೆ ಇಂದೂದೇಶವೆಂದು ನಿರೂಪಿಸಬೇಕೆಂದು ಎಲ್ಲರನ್ನು ಕೋರಿಕೊಳ್ಳುತ್ತಿದ್ದೇವೆ. ಸಿಂಧೂನದಿ ಪಾಕಿಸ್ಥಾನ

ದಲ್ಲಿ ಇದೆ. ಪಾಕಿಸ್ಥಾನ್‌ನಲ್ಲಿಯೇ ಸಿಂಧೂರಾಷ್ಟ್ರವೆಂದು ಸಿಂಧೂನದಿ ಹೆಸರಿನಿಂದ ಒಂದು ರಾಷ್ಟ್ರವೂ ಸಹ ಇದೆ. ಪಾಕಿಸ್ಥಾನ್‌ನಲ್ಲಿರುವ ಸಿಂಧೂ ಹೆಸರನ್ನು ನಮ್ಮ ದೇಶಕ್ಕೆ ಇಟ್ಟುಕೊಳ್ಳುವುದೇನೆಂದು ಯೋಚಿಸಬೇಕು. ಆಂಗ್ಲರೇ ಇಂಡಿಯಾ ಎಂದು ನಮ್ಮ ದೇಶವನ್ನಂದಿದ್ದಾರೆ, ಹಿಂಡಿಯಾ ಎಂದು ಅನ್ನಲಿಲ್ಲ. ಆದ್ದರಿಂದ ನಾವು ಇಂದೂಗಳೇ ಎಂದು ತಿಳಿಯಬೇಕು.

# ಮತ ಸಾಮರಸ್ಯ

ಸರ್ವ ಸೃಷ್ಟಿಗೆ ಆದಿಕರ್ತ ಒಬ್ಬನಿದ್ದಾನೆ, ಆತನೇ ಎಲ್ಲಾ ಮತಗಳಲ್ಲಿಯೂ ಹೇಳಲ್ಪಡುವ ದೇವರು. ದೇವರು ಸರ್ವ ಪ್ರಪಂಚಕ್ಕೆಲ್ಲಾ ಅಧಿಪತಿಯೇ ಅಲ್ಲದೇ ಪ್ರಪಂಚದಲ್ಲಿನ ಎಲ್ಲಾ ಜೀವರಾಶಿಗಳನ್ನು ಶಾಸಿಸಿ ನಡೆಸುವವನು, ರಾತ್ರಿ ಹಗಲು ಬದಲಾಗುವಂತೆ ಮಾಡಿ, ಹಗಲು ಕೆಲಸವನ್ನು, ರಾತ್ರಿ ನಿದ್ರೆಯನ್ನು ಕಲ್ಪಿಸಿದವನು ದೇವರೇ. ಆತನ ದೊಡ್ಡತನವನ್ನು ಮಾನವನು ಕೊಂಡಾಡಬೇಕೆಂದರೆ ಬುದ್ಧಿ ಸಾಲದು. ಮಾನವನ ಬುದ್ಧಿಗಿಂತ ಅತೀತವಾದವನು ಆದ್ದರಿಂದ ದೇವರನ್ನು ಹೊಗಳುವುದಕ್ಕೆ ನಮ್ಮಕೈಲಾಗುವುದಿಲ್ಲ. ಆತನ ಮಹಿಮೆಗಳು ನಮಗೆ ಬಹಳ ತಿಳಿದಿಲ್ಲ. ಆತನಿಗಿರುವ ಅನೇಕ ಮಹಿಮೆಗಳಲ್ಲಿ **"ಏಕಾಂಶೇನ ಸ್ಥಿತೋ ಜಗತ್"** ಅನ್ನುವ ಗೀತಾವಾಕ್ಯದ ಪ್ರಕಾರ ದೇವರ ಒಂದು ಅಂಶದಿಂದಲೇ ಒಟ್ಟಾರೆ ಸೃಷ್ಟಿಯೆಲ್ಲವೂ ಕಲ್ಪಿಸಲ್ಪಟ್ಟಿದೆ. ಅಂತ್ಯವಿಲ್ಲದ ದೇವರೊಂದರ ಅಂಶಗಳಲ್ಲಿ ಒಂದೇ ಒಂದು ಅಂಶದಿಂದ ಒಟ್ಟು ಪ್ರಪಂಚವೇ ನಿರ್ಮಿಸಲ್ಪಟ್ಟಿದೆ ಎಂದರೆ ದೇವರು ಎಷ್ಟು ದೊಡ್ಡವನೋ ತಿಳಿದಿಲ್ಲವೆಂದೇ ಹೇಳಬಹುದು. ಆತನೊಂದರ ಪೂರ್ತಿವಿವರಗಳು ತಿಳಿದುಕೊಳ್ಳುವುದಕ್ಕೆ ಮಾನವನ ಬುದ್ಧಿ ಸಾಲದೆಂದೇ ಹೇಳಬಹುದು. ಮಾನವನು ತನ್ನ ಬುದ್ಧಿಯಿಂದ ಸ್ಥೂಲಪದಾರ್ಥವನ್ನು ಕುರಿತು ಎಷ್ಟು ಪರಿಶೋಧನೆಗಳಾದರು ಮಾಡಿ ಏನಾದರೂ ಕಂಡುಹಿಡಿಯಬಹುದು, ಎಷ್ಟೋ ರಂಗಗಳಲ್ಲಿ ಪ್ರಾಧಾನ್ಯತೆ ಗಳಿಸಬಹುದು, ಆದರೆ ಸೂಕ್ಷ್ಮವಾದ ಯಾವ ಪದಾರ್ಥವಾಗಲಿ, ಯಾವ ಹೆಸರಿಲ್ಲದ, ಯಾವ ರೂಪವಿಲ್ಲದ ದೇವರನ್ನು

ಮಾನವನು ಯಾವ ವಿಧದಲ್ಲಾದರೂ ಕಂಡುಕೊಳ್ಳಲಾರನು. ದೇವರು ಇದ್ದಾನೆಂದು ನಂಬಬೇಕಾಗಿದ್ದೇ ಹೊರತು ಇಂತಹದೇ ಎಂದು ನಿರ್ದೇಶಿಸಿ ಹೇಳುವುದಕ್ಕೆ ಸಾಧ್ಯವಿಲ್ಲ. ಒಂದು ಮಾತಿನಲ್ಲಿ ಹೇಳಬೇಕೆಂದರೆ ಬದುಕಿರುವ ಯಾವ ಜೀವರಾಶಿ ದೇವರನ್ನು ತಿಳಿಯುವುದಕ್ಕೆ ಅವಕಾಶವೇ ಇಲ್ಲ. ಯಾವುದೂ ಅಲ್ಲದ ದೇವರನ್ನು, ಏನು ಅಲ್ಲದ ದೇವರನ್ನು ಮಾನವನು ಪ್ರತ್ಯಕ್ಷವಾಗಾಗಲಿ, ಪರೋಕ್ಷವಾಗಾಗಲಿ ತಿಳಿಯಲಾರನು, ಇದು ಶಾಸನ. ಪೂರ್ತಿಸ್ಥಾನ ದೇವರ್‍ಯಾರೋ ತಿಳಿಯದಿರುವಾಗ ಈತನು ನಮ್ಮ ದೇವರೆಂದು, ಇದು ನಮ್ಮ ಮತವೆಂದು ಮನುಷ್ಯರು ಒಬ್ಬರಮೇಲೆ ಒಬ್ಬರು ದ್ವೇಷಗಳು ಬೆಳೆಸಿಕೊಳ್ಳುವುದು, ಮತ ಘರ್ಷಣೆಗಳಿಗೆ ಇಳಿಯುವುದು ಬುದ್ಧಿ ಇಲ್ಲದ ಕೆಲಸ ಅಲ್ಲವೇ?

ದೇವರ ಮಹಿಮೆಗಳಲ್ಲಿ ಸ್ವಲ್ಪಮಾತ್ರ ನಾವು ತಿಳಿದುಕೊಳ್ಳಬೇಕೆಂದರೂ ದೇವರೇ ದೇವರನ್ನು ಕುರಿತು ಹೇಳಬೇಕಾಗಿದೆ. ಆದ್ದರಿಂದ ದೇವರೇ ತನ್ನ ವಿಷಯಗಳನ್ನು (ತನ್ನ ಜ್ಞಾನವನ್ನು) ಪ್ರತ್ಯೇಕ ಕಾಲದಲ್ಲಿ, ಪ್ರತ್ಯೇಕ ದೇಶದಲ್ಲಿ, ಪ್ರತ್ಯೇಕ ವ್ಯಕ್ತಿಗಳಿಗೆ ಹೇಳಿದ್ದಾನೆ. ಹಾಗೆ ಯಾವ ಯಾವ ದೇಶಗಳಲ್ಲಿ, ಯಾವಯಾವ ಕಾಲಗಳಲ್ಲಿ, ಯಾವಯಾವ ವ್ಯಕ್ತಿಗಳಿಗೆ ಹೇಳಿದ್ದಾನೋ ಸಮಗ್ರವಾಗಿ ನಮಗೆ ತಿಳಿದಿಲ್ಲ. ಲಕ್ಷಗಳು, ಕೋಟಿಗಳ ವರ್ಷಗಳ ಪೂರ್ವದಲ್ಲಿ ಹೇಗೆ ಕಳೆದಿದೆಯೋ ತಿಳಿಯದಾಗಲಿ, ಕೆಲವುಸಾವಿರ ವರ್ಷಗಳಿಂದ ದೇವರ ಪರಮ, ಪವಿತ್ರ, ಪರಿಶುದ್ಧ ವಾಕ್‌ಗಳು ಎಲ್ಲಿ, ಯಾವಾಗ, ಯಾರಿಗೆ ಹೇಳಲ್ಪಟ್ಟಿವೆಯೋ ಸ್ವಲ್ಪಮಟ್ಟಿಗಾದರು ಅರ್ಥವಾಗುತ್ತಿದೆ. ಅಂತಹವು ಮುಖ್ಯವಾಗಿ ಕೆಲವು ಸಂದರ್ಭಗಳು ಮಾತ್ರ ತಿಳಿಯುತ್ತಿವೆ. ಒಂದು ಐದುಸಾವಿರದನೂರೈವತ್ತು ವರ್ಷಗಳ ಪೂರ್ವದಲ್ಲಿ ಭಾರತದೇಶದಲ್ಲಿ ಪಂಜಾಬ್ ರಾಷ್ಟ್ರದಲ್ಲಿನ ಕುರುಕ್ಷೇತ್ರದ ಹತ್ತಿರ ಶ್ರೀಕೃಷ್ಣನ ಮೂಲಕ ದೇವರ ಜ್ಞಾನ ಹೇಳಿದಂತೆ ತಿಳಿಯುತ್ತಿದೆ. ಎರಡನೆಯದು ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಇಜ್ರಾಯಿಲ್ ದೇಶದಲ್ಲಿ ಏಸುಪ್ರಭು ಮೂಲಕ ದೇವರ ಜ್ಞಾನ ಹೇಳಲಾಗಿದೆ. ಮೂರನೆಯದು ಹದಿನಾಲ್ಕುನೂರು ವರ್ಷಗಳ ಪೂರ್ವದಲ್ಲಿ ಅರಬ್ ದೇಶದಲ್ಲಿನ ಮಕ್ಕಾದಲ್ಲಿ ಹದಿಮೂರು ವರ್ಷಗಳು,

ಮಧೀನಾದಲ್ಲಿ ಹತ್ತು ವರ್ಷಗಳು ಹಜ್ರತ್ ಮಹಮ್ಮದ್ ಮೂಲಕ ದೇವರ ಜ್ಞಾನ ಹೊರಗೆ ಬಂದಿದೆ. ಮೂರು ಕಾಲಗಳಲ್ಲಿ, ಮೂರು ದೇಶಗಳಲ್ಲಿ, ಮೂವರು ವ್ಯಕ್ತಿಗಳ ಮೂಲಕ ಹೇಳಲಾದ ಜ್ಞಾನ ಒಬ್ಬ ದೇವರನ್ನು ಕುರಿತಿದೆ. ಹೇಳಿದವನು ಒಬ್ಬ ದೇವರೇ ಆದ್ದರಿಂದ ಹೇಳಲಾದ ವಿಷಯ ಸಹ ಒಂದೇ ಸಾರಾಂಶ ಇರುವುದಾಗಿದೆ. ದೇವರ ಪ್ರವಚನೆಗಳು ಎಲ್ಲದಕ್ಕು ಕರ್ತನಾದ, ಎಲ್ಲಾಕಡೆ ವ್ಯಾಪಿಸಿದ, ಸರ್ವೇಶ್ವರನಾದ, ಆದಿ ಮಧ್ಯ ಅಂತ್ಯರಹಿತನಾದ ದೇವರನ್ನು ಕುರಿತೇ ಹೇಳಲಾಗಿದೆಯಾಗಲಿ ದೇವರಲ್ಲದಿರುವುದನ್ನು ಕುರಿತು ಎಲ್ಲಿ ಹೇಳಲಿಲ್ಲ. ಕೆಲವರು ಮನುಷ್ಯರು ದೇವರ ಜ್ಞಾನ ತಿಳಿಯದೆ ದೇವರಲ್ಲದಿರುವುದನ್ನು ದೇವರೆಂದು ನಂಬಿರಬಹುದು. ಅಜ್ಞಾನದ ಕತ್ತಲಲ್ಲಿ ಕುರುಡರಾದ ಪ್ರಜೆಗಳು ದೇವರ ಮಾರ್ಗ ತಿಳಿಯದೆ ವಕ್ರಮಾರ್ಗದಲ್ಲಿ ನಡೆಯುತ್ತಿರಬಹುದು. ಅಂಥವರು ಎಲ್ಲಾ ಮತಗಳಲ್ಲಿಯೂ ಇದ್ದಾರೆ. ಅಂಥವರನ್ನು ಇಂದೂಮತದಲ್ಲಿ ಅಜ್ಞಾನಿಗಳೆಂದು, ಕ್ರೈಸ್ತವಮತದಲ್ಲಿ ಅವಿಶ್ವಾಸಿಗಳೆಂದು, ಇಸ್ಲಾಮ್ ಮತದಲ್ಲಿ ಕುಫ್ರ್ ಅಥವಾ ಕಾಫಿರ್‌ಗಳೆಂದು ಅನ್ನುತ್ತೇವೆ. ವಿಭಿನ್ನವಾದ ಪ್ರದೇಶಗಳಲ್ಲಿ, ವಿಭಿನ್ನವಾದ ಭಾಷೆಗಳಲ್ಲಿ, ವಿಭಿನ್ನವಾದ ಕಾಲಗಳಲ್ಲಿ, ವಿಭಿನ್ನವಾದ ವ್ಯಕ್ತಿಗಳ ಮೂಲಕ ದೇವರ ವಿಷಯ ಹೇಳುವುದರಿಂದ ಹೇಳಲ್ಪಟ್ಟಿರುವುದು ಸಹ ವಿಭಿನ್ನವಾದ ದೇವರುಗಳದೆಂದು ಮಾಯೆ (ಸಾತಾನ್) ಅಥವಾ ಸೈತಾನ್ ಅನ್ನುವುದು ಮನುಷ್ಯನ ಮೆದಳಿನಲ್ಲಿ ಅನುಮಾನವನ್ನು ಸೃಷ್ಠಿಸಿದೆ. ಮಾಯಾ ಪ್ರಭಾವದಿಂದ ಮನುಷ್ಯ ದೇವರ ವಿಷಯದಲ್ಲಿ ತಾರತಮ್ಯಗಳು ಬೆಳೆಸಿಕೊಂಡು, ಅವಗಾಹನೆ ಲೋಪದಿಂದ ಪ್ರತ್ಯೇಕವಾದ ಮತಗಳನ್ನು ಸೃಷ್ಠಿಸಿಕೊಂಡಿದ್ದಾನೆ. ಸಾತಾನ್ ಪ್ರಭಾವದಿಂದಲೇ ದೇವರನ್ನು ಸಹ ಏಕತ್ವದಿಂದ ಭಿನ್ನತ್ವದೊಳಗೆ ಬದಲಿಸಿಕೊಂಡು ನಮ್ಮ ದೇವರು ಬೇರೆ, ನಿಮ್ಮ ದೇವರು ಬೇರೆ, ಅನ್ನುವ ಸ್ಥಿತಿಗೆ ಸೇರಿಕೊಂಡಿದ್ದಾನೆ. ಸರ್ವಸೃಷ್ಠಿಗೆ ಕಾರಕನಾದ ದೇವರನ್ನು ಬಿಟ್ಟು, ಅಜ್ಞಾನ ಅಂಧಕಾರದಿಂದ ಅವರ ಊಹೆಗಳಲ್ಲಿಯೇ ದೇವರುಗಳನ್ನು ಸೃಷ್ಠಿಸಿಕೊಂಡಿದ್ದಾರೆ.

ಪ್ರಸ್ತುತ ಕಾಲದಲ್ಲಿ ಯಾರ ಮತ ಅವರಿಗೆ ದೊಡ್ಡದಾಗಿ ಕಾಣಿಸುತ್ತಿದೆ. ಯಾರ ದೇವರು ಅವರಿಗೆ ದೊಡ್ಡದಾಗಿ ಕಾಣಿಸುತ್ತಿದ್ದಾನೆ. ಹಿಂದುಗಳು, ಕ್ರೈಸ್ತವರು, ಮಹಮ್ಮದೀಯರು ಒಬ್ಬರಿಗೊಬ್ಬರು ನೀಚವಾಗಿ ನೋಡಿಕೊಳ್ಳುತ್ತಾ, ಇತರ ಮತದವರಿಗಿಂತ ನಾವೇ ಉತ್ತಮ ರೆಂದುಕೊಳ್ಳುತ್ತಿದ್ದಾರೆ. ಸರ್ವ ಮಾನವರು ನನ್ನಿಂದ ಸೃಷ್ಠಿಸಲ್ಪಟ್ಟವರೇ ಎಂದು ಹೇಳಿದ ದೇವರ ಮಾತನ್ನು ಮರೆತು ಹೋಗಿದ್ದಾರೆ. ಎಲ್ಲರೂ ದೇವರ ಮಕ್ಕಳೆಂದು, ಎಲ್ಲರಿಗೂ ತಂದೆ ದೇವರೆಂದು ಸ್ವಲ್ಪವೂ ಅಂದುಕೊಳ್ಳುತ್ತಿಲ್ಲ. ದೇವರು ಹೇಳಿರುವುದಕ್ಕೆ ವಿರುದ್ಧ ಭಾವ ನಮ್ಮಲ್ಲಿನ ಮಾಯೆ ಉಂಟುಮಾಡಿದೆ ಎಂದು ಯಾರು ಅಂದುಕೊಳ್ಳುತ್ತಿಲ್ಲ. ಹಾಗೆ ಇರುವುದರಿಂದ ಕೊನೆಗೆ ಮತಗಳ ಮಧ್ಯೆ ಸಾಮರಸ್ಯ, ದೇವರ ಮಾತುಗಳ ಬಗ್ಗೆ ಅವಗಾಹನೆ ಇಲ್ಲದಂತೆಹೋಗಿದೆ. ಕೊನೆಗೆ ಯಾರ ಮತದ ಬಗ್ಗೆ ಅವರಿಗೆ ಅವಗಾಹನೆ ಸ್ಥಗಿತಗೊಂಡಿದೆ. ಪ್ರಸ್ತುತ ಕಾಲದಲ್ಲಿ ಮುಖ್ಯವಾದ ಮೂರು ಮತಗಳು ಯಾವ ವಿಧವಾಗಿವೆಯೋ ವಿವರಿಸಿಕೊಂಡು ನೋಡೋಣ.

**<u>ಹಿಂದೂ ಮತ</u> :-** ವಾಸ್ತವವಾಗಿ ಈ ಮತದ ಹೆಸರು ಪೂರ್ವದಲ್ಲಿ ಇಂದೂಮತವೆಂದು ಇತ್ತು. ಕಾಲಗಮನದಲ್ಲಿ ಯಾವತ್ತೋ ಇಂದೂಮತ ಹಿಂದೂಮತವಾಗಿ ಬದಲಾಗಿಹೋಗಿದೆ. ದೇವರ ಜ್ಞಾನವನ್ನು ಇಂದೂ ಎಂದು ಹೇಳುತ್ತಿದ್ದರು. ಇಂದೂ ಎಂದರೆ ಚಂದ್ರನೆಂದು, ಚಂದ್ರನು ಜ್ಞಾನ ಚಿಹ್ನೆಯೆಂದು, ಜ್ಞಾನ ಇರುವವನ್ಯಾರಾದರೂ ಇಂದೂವೆಂದು ಪೂರ್ವದ ಭಾವ. ಆದ್ದರಿಂದ ಕುಲಮತ ತಾರತಮ್ಯ ಇಲ್ಲದಂತೆ ದೇವರ ಜ್ಞಾನಹೊಂದಿದ ಪ್ರತಿಯೊಬ್ಬನು ಇಂದೂವೆಂದೇ ಅರ್ಥವಿರುತ್ತಿತ್ತು. ಸಾವಿರ ವರ್ಷಗಳ ಕೆಳಗೆ ಭಾರತದೇಶದಲ್ಲಿ ನೂರಕ್ಕೆ ತೊಂಭತ್ತುಜನರು ದೈವಜ್ಞಾನ ಇರುವವರು ಇದ್ದರು. ಆದ್ದರಿಂದ ಜ್ಞಾನಿಗಳ ದೇಶವೆಂದು ಇತರ ದೇಶಗಳಿಂದ ಕರೆಯಲ್ಪಡುತ್ತಿತ್ತು. ಜ್ಞಾನಿಗಳ ದೇಶವೆಂಬ ಅರ್ಥದಿಂದಲೇ ಇಂದೂದೇಶ ಅನ್ನುತ್ತಿದ್ದರು. ಈಗಿನ ಕಾಲಕ್ಕೆ ಇಂದೂದೇಶ ಹಿಂದೂದೇಶವಾಗಿಹೋಗಿದೆ. ಹೆಸರಿನಲ್ಲಿಯೇ ಅಲ್ಲದೇ ಜ್ಞಾನ ದಲ್ಲಿಯೂ ಪೂರ್ತಿ ಇಳಿಜಾರಿಹೋಗಿ, ಸಾವಿರಕ್ಕೆ ಒಬ್ಬನಾದರು ಜ್ಞಾನಿ ಇದ್ದಾನೋ

ಇಲ್ಲವೋ ತಿಳಿಯದ ಸ್ಥಿತಿ ಏರ್ಪಟ್ಟಿದೆ. ಇಂದೂಗಳಿಗೆ ಮುಖ್ಯಗ್ರಂಥವಾದ ಭಗವದ್ಗೀತೆಯನ್ನು ಕುರಿತು ತಿಳಿಯದವರು ನೂರಕ್ಕೆ ತೊಂಭತ್ತೊಂಭತ್ತು ಜನರು ಇದ್ದಾರೆಂದು ಹೇಳುವುದು ಅತಿಶಯೋಕ್ತಿ ಅಲ್ಲ. ಯುವಕರಿಗೆ ಪ್ರಪಂಚ ಓದು ಹೊರತು ದೇವರ ಜ್ಞಾನದಿಂದ ಕೆಲಸವೇ ಇಲ್ಲ. ವಯೋವೃದ್ಧರನ್ನು ಪರಿಶೀಲಿಸಿದರೆ ಈಗಲೇ ನನಗೇತಕ್ಕೆ ಎಲ್ಲಾ ಮುಗಿದುಹೋದ ನಂತರ ನೋಡೋಣವೇಳು ಎಂದು ನೂರು ವರ್ಷಗಳು ಬದುಕುವ ಗ್ಯಾರಂಟಿ ಇರುವವನಂತೆ ಅನ್ನುತ್ತಿದ್ದಾರೆ. ಕೆಲವರು ಸ್ವಾಮಿಗಳು ಗುರುಗಳೆನ್ನುವವರಿದ್ದರೂ, ಅವರ ಬದುಕು ಬಾಳ್ವೆಗೋಸ್ಕರ ಹರಿಕಥೆಗಳಂತೆ ಜ್ಞಾನವನ್ನು ಹೇಳುತ್ತಿದ್ದಾರೆ. ಒಬ್ಬೊಬ್ಬ ಸ್ವಾಮಿ ಒಂದೊಂದು ವಿಧವಾಗಿ ಬೋಧಿಸುತ್ತಾ ಯಾವ ದಾರಿ ಹಿಡಿಯಬೇಕೋ, ನಿಜವಾಗಲು ದೇವರ ದಾರಿ ಯಾವುದೋ ಅರ್ಥವಾಗದೆ ಮಾಡುತ್ತಿದ್ದಾರೆ. ಕೆಲವರು ಭಾಗವತ ರಾಮಾಯಣಗಳು ಓದುತ್ತಾ ಇದಕ್ಕಿಂತ ಜ್ಞಾನದ ಅವಶ್ಯಕತೆಯೇ ಇಲ್ಲವೆನ್ನುತ್ತಿದ್ದಾರೆ. ದೇವರು ಹೇಳಿದ ಜ್ಞಾನ ಮರೆತು ರಾಮಾಯಣದ ಮುಂದೆ ಭಗವದ್ಗೀತೆ ಕೆಲಸಕ್ಕೇ ಬರುವುದಿಲ್ಲ ಅನ್ನುವವರು ಸಹ ಇದ್ದಾರೆ.

ಪ್ರಪಂಚವೆಲ್ಲಾ ವ್ಯಾಪಿಸಿ ಎಲ್ಲರಿಗೂ ಪ್ರಭುವಾದ ದೇವರನ್ನು ಮರೆತು ಇತರ ದೇವತೆಗಳನ್ನು ಆರಾಧಿಸುವುದು ಪ್ರಾರಂಭಮಾಡಿದ್ದಾರೆ. ಭಗವದ್ಗೀತೆಯಲ್ಲಿ ಹೇಳಿದ ಏಕೇಶ್ವರೋಪಾಸನೆ ಪೂರ್ತಿಯಾಗಿ ಮರೆತವರಾಗಿ ಹೋಗಿದ್ದಾರೆ. ಭಗವದ್ಗೀತೆಯಲ್ಲಿ **"ಭಕ್ತಿರ ವ್ಯಭಿಚಾರಿಣೆ"** ಅನ್ನುವಂತೆ ಭಕ್ತಿಯಲ್ಲಿ ವ್ಯಭಿಚಾರ ಮೊದಲುಮಾಡಿ ಒಬ್ಬ ಸ್ತ್ರೀ ತನ್ನ ಪತಿಯನ್ನು ಬಿಟ್ಟು ಇತರರಜೊತೆ ಅಕ್ರಮ ಸಂಬಂಧವೇರ್ಪಡಿಸಿಕೊಂಡಂತೆ, ಜಗದ್ಭರ್ತನಾದ ಪರಮಾತ್ಮನನ್ನು ಮರೆತು ಅನ್ಯದೇವತಾರಾಧನೆ ಮಾಡುತ್ತಿದ್ದಾರೆ. ವಿಶ್ವಪ್ರಭುವಾದ ಪರಮಾತ್ಮನನ್ನು ಬಿಟ್ಟು, ಭಗವದ್ಗೀತೆಯಲ್ಲಿ ಹೇಳಿದ ಮಾತುಗಳು ತಿಳಿಯದೆ ಕೋರಿಕೆಗಳಿಗೋಸ್ಕರ ಕೋಟ್ಯಾಂತರ ದೇವತೆಗಳನ್ನು ಸೃಷ್ಠಿಸಿಕೊಳ್ಳುತ್ತಿದ್ದಾರೆ. ಈ ವಿಧವಾಗಿ ಇಂದೂಮತದಲ್ಲಿ ಹೇಳಿದ ಸಾರಾಂಶ ಇಂದೂಗಳಿಗೆ ಅರ್ಥವಾಗದೆ ಹೋದಾಗ ಪರಮತ ಗಳಲ್ಲಿ ದೇವರು ಹೇಳಿರುವುದು ಹೇಗೆ ಅರ್ಥವಾಗುತ್ತದೆ. ಆದ್ದರಿಂದ

ಪರಮತಗಳ ಮೇಲೆ ದ್ವೇಷ, ಹಿಂಸಿಸುವ ಸ್ವಭಾವವೂ, ಇಂದೂಮತದಲ್ಲಿ ಸಹ ಇದೆಯೆಂದು ಹೇಳಬಹುದು. ಇಂದೂ ಗುರುವಾಗಿರುವ ನಾವು ಹೇಳಿದ ಜ್ಞಾನವನ್ನು ಅರ್ಥ ಮಾಡಿಕೊಳ್ಳದೆ ಪರಮತವೆಂದು, ಪರಮತವನ್ನು ಬೋಧಿಸುತ್ತಿದ್ದಾರೆಂದು ನಮ್ಮ ಮೇಲೆ ದಾಳಿಗೆ ಪ್ರಯತ್ನಿಸಿದ್ದಾರೆಂದರೆ ಹಿಂದೂಗಳು ಯಾವ ಸ್ಥಿತಿಯಲ್ಲಿ ಇದ್ದಾರೋ ಅರ್ಥಮಾಡಿಕೊಳ್ಳಿ.

**ಕ್ರೈಸ್ತ ಮತ :–** ಭಾರತ ದೇಶದಲ್ಲಿ ಭಗವದ್ಗೀತೆಯ ಮೂಲಕ ದೇವರ ಜ್ಞಾನ ತಿಳಿದುಬಂದಂತೆ, ಇಜ್ರಾಯಿಲ್ ದೇಶದಲ್ಲಿ ಬೈಬಲ್ ಮುಖಾಂತರ ಜ್ಞಾನ ಹೇಳಲಾಗಿದೆ. ಇಲ್ಲಿ ಒಂದು ಮುಖ್ಯವಾದ ವಿಷಯ ಗಮನಿಸಬೇಕಾಗಿದೆ. ಭಗವದ್ಗೀತೆ ಶ್ರೀಕೃಷ್ಣನ ಮೂಲಕ ಹೇಳಲ್ಪಟ್ಟಾಗ, ಬೈಬಲ್ ಯೇಸುಪ್ರಭು ಮೂಲಕ ಹೇಳಲ್ಪಟ್ಟಿದೆ. ಈ ಇಬ್ಬರು ಪ್ರವಕ್ತರು ಒಂದು ಗುಂಪಿಗೆ ಸೇರಿದಾಗ, ಇಸ್ಲಾಮ್ ಮತ ಪ್ರವಕ್ತ ಮತ್ತೊಂದು ಗುಂಪಿಗೆ ಸೇರಿದವರು. ಏಕೆಂದರೆ ಹಜರತ್ ಪ್ರವಕ್ತನಿಗೆ ಪವಿತ್ರ ಖುರಾನ್ ಜಿಬ್ರಯೇಲ್ ಎನ್ನುವ ದೈವದೂತನಿಂದ ಹೇಳಲ್ಪಟ್ಟಿದೆ. ಗೀತೆಯಾಗಲಿ, ಬೈಬಲ್ ಆಗಲಿ ಹಾಗೆ ದೈವದೂತರಿಂದ ಹೇಳಿರುವುದಲ್ಲ. ಗೀತೆಯನ್ನು ಶ್ರೀಕೃಷ್ಣ ನಿಂದಲೇ ದೇವರು ಹೇಳಿಸಿದಾಗ, ಬೈಬಲ್‌ನ್ನು ಯೇಸುಪ್ರಭುವಿನ ಶರೀರದಿಂದ ಹೇಳಿಸಲ್ಪಟ್ಟಿದೆ. ಅಷ್ಟುಮಾತ್ರಕ್ಕೆ ಶ್ರೀಕೃಷ್ಣನಾಗಲಿ, ಯೇಸುಪ್ರಭುವಾಗಲಿ ನಾನೇ ದೇವರೆಂದು ಹೇಳಿಕೊಳ್ಳಲಿಲ್ಲ. ಶ್ರೀಕೃಷ್ಣನು ಪರಮಾತ್ಮನ ಕುರಿತು, ಪ್ರಭುವು ಎಹೋವಾನು ಕುರಿತು ದೇವರೆಂದು ಹೇಳಿದ್ದಾರೆ. ಪರಮಾತ್ಮ ಎಂದರೂ, ಎಹೋವಾ ಎಂದರೂ ಒಂದೇ ಅರ್ಥವೆಂದು ತಿಳಿಯದ ಪ್ರಜೆಗಳಿಗೆ ದೇವರು ಎಲ್ಲರಿಗೂ ತಂದೆ ಎಂದು ಯೇಸುಪ್ರಭು ಬೈಬಲ್‌ನಲ್ಲಿ ಹೇಳಿದಾಗ, ಗೀತೆಯಲ್ಲಿ ಪರಮಾತ್ಮ ಸರ್ವಜೀವಿಗಳಿಗೂ ತಂದೆ ಎಂದು ಶ್ರೀಕೃಷ್ಣನು ತಿಳಿಸಿದ್ದಾನೆ. ಶ್ರೀಕೃಷ್ಣನು ಪ್ರಭುವೂ ಬೇರೆಬೇರೆ ಪ್ರವಕ್ತರಾದರೂ ಇಬ್ಬರು ಒಂದೇ ದೇವರನ್ನು ಕುರಿತು ಹೇಳಿದ್ದಾರೆ. ಪ್ರಭು ಹೇಳಿರುವುದೇ ಮೊದಲು ಶ್ರೀಕೃಷ್ಣನು ಹೇಳಿದ್ದಾನೆಂದು ಕ್ರೈಸ್ತರಿಗೆ ತಿಳಿಯದಿರುವುದರಿಂದ, ಸಾತಾನ್‌ಗೆ ಒಳ್ಳೆಯ ಅವಕಾಶ ದೊರೆತು ಕ್ರೈಸ್ತವರಿಂದಲೇ ಪರಲೋಕ ತಂದೆಯಾದ ಪರಮಾತ್ಮನನ್ನು ಪರೋಕ್ಷವಾಗಿ ನಿಂದಿಸುವಂತೆಮಾಡಿದೆ. ಸಾತಾನ್ ಪ್ರಭಾವದಿಂದ ನಮ್ಮ

ದೇವರು ಬೇರೆ, ನಿಮ್ಮ ದೇವರು ಬೇರೆ ಎನ್ನುವಂತೆ ಮಾಡಿದೆ. ಸರ್ವರನ್ನು ಸೃಷ್ಟಿಸಿದ ಸೃಷ್ಟಿಕರ್ತ ನನ್ನು ಬೇರೆಬೇರೆ ಅಂದುಕೊಂಡಾಗ ದೇವರನ್ನು ಭೇದಭಾವದಿಂದ ನೋಡಿದಂತಾಗುತ್ತಿದೆ. ಕ್ರೈಸ್ತರು ವಿಶ್ವಾಸದಿಂದ ಎಹೋವಾನನ್ನು ಒಂದುಕಡೆ ಸ್ತುತಿಸುತ್ತಾ, ಮತ್ತೊಂದು ಕಡೆ ನಿಂದಿಸಿದಂತಾಗುತ್ತಿದೆ. ಜ್ಞಾನಹೊಂದಿ ನೋಡಿದಂತಾದರೆ ಶ್ರೀಕೃಷ್ಣನಲ್ಲಿಯೂ, ಪ್ರಭುವಿನಲ್ಲಿಯೂ ಹೇಳಿರುವವನೊಬ್ಬನೇ ಎಂದು ತಿಳಿಯುತ್ತದೆ. ಕ್ರೈಸ್ತರು ಶ್ರೀಕೃಷ್ಣನನ್ನು ಅರ್ಥಮಾಡಿಕೊಳ್ಳದೆ ಹೋದರೆ, ಒಂದೇ ಪ್ರಭುವನ್ನು ಮುಂದೆ ಮುಗಿದು, ಹಿಂದೆ ಬೈಯ್ದಂತಾಗುತ್ತಿದೆ. ವಾಸ್ತವವಾಗಿ ನಮಗೆ ಮಾತ್ರ ಪ್ರಭುವಿನಲ್ಲಿಯೂ, ಶ್ರೀಕೃಷ್ಣನಲ್ಲಿಯೂ ಯಾವ ಭೇದವು ಕಾಣಿಸಲಿಲ್ಲ. ನಮಗೆ ಶ್ರೀಕೃಷ್ಣನ ವಾಕ್ಯ ಬಂದಾಗ ಎಷ್ಟು ಸಂತೋಷ ವಾಗುತ್ತಿದೆಯೋ, ಪ್ರಭುವಿನ ವಾಕ್ಯಬಂದಾಗಲೂ ಸಹ ಅಷ್ಟೇ ಸಂತೋಷ ವಾಗುತ್ತಿದೆ. ಕ್ರೈಸ್ತವರಲ್ಲಿ ಹೆಚ್ಚಿನಜನರು ಇವರಿಬ್ಬರು ಒಂದೇ ಎಂಬ ಭಾವದಲ್ಲಿ ಇಲ್ಲದಿರುವುದೆ ಅಲ್ಲದೆ, ಪ್ರಭು ಹೇಳಿದ ಮುಖ್ಯವಾದ ಬೋಧನೆಗಳನ್ನು ಸಹ ಸರಿಯಾಗಿ ಅರ್ಥ ಮಾಡಿಕೊಂಡಿಲ್ಲವೆನಿಸುತ್ತದೆ. ಪ್ರಭು ಹೇಳಿದ ಸಂದೇಶವನ್ನು ಪಾಟಿಸದೆ, ಮತವ್ಯಾಪ್ತಿಗೋಸ್ಕರ ಹೆಚ್ಚಿನ ಶ್ರದ್ಧೆ ತೋರಿಸುವುದು, ಇಹಲೋಕ ಸುಖಗಳಿಗಾಗಿ ಪ್ರಭುವನ್ನು ಪ್ರಾರ್ಥಿಸುವುದು ನಡೆಯುತ್ತಿದೆ. ಆ ಮಾರ್ಗದಲ್ಲಿ ನಿಜವಾಗಲು ಯೇಸುಪ್ರಭುವೇ ಬಂದು ಅವರಮುಂದೆ ಮತ್ತೆ ದೇವರ ಜ್ಞಾನ ಹೇಳಿದರೂ ಆತನನ್ನು ತಿಳಿದುಕೊಳ್ಳದೆ, ನಿನಗೂ ಸಹ ಬಾಪ್ತಿಸ್ಮಕೊಡುತ್ತೇವೆಂಬ ರೀತಿಯಲ್ಲಿ ಕ್ರೈಸ್ತವರು ಇದ್ದಾರೆ. ಒಂದು ವಿಧವಾಗಿ ನೋಡಿದರೆ ಇಂದೂಗಳಿಗಿಂತ ದೇವರ ಮೇಲೆ ವಿಶ್ವಾಸ ಇರುವವರು ಕ್ರೈಸ್ತವರಲ್ಲಿ ಬಹಳ ಹೆಚ್ಚು. ಇತರ ಮತಸ್ಥರನ್ನು ಹಿಂಸಿಸುವ ಸ್ವಭಾವ ಕ್ರೈಸ್ತವರಲ್ಲಿ ಇಲ್ಲವೆಂದು ಹೇಳಬಹುದು.

**ಇಸ್ಲಾಮ್ ಮತ :–** ಇಸ್ಲಾಮ್ ಮತ ಮಹಮ್ಮದ್ ಪ್ರವಕ್ತನಿಂದ ಹದಿಮೂರು ವರ್ಷಗಳು ಮಕ್ಕಾದಲ್ಲಿಯೂ, ಹತ್ತು ವರ್ಷಗಳು ಮಧೀನಾದಲ್ಲಿ ಹೇಳಲಾಗಿದೆ. ಸೃಷ್ಟಿಕರ್ತನಾದ ಪರಮಾತ್ಮ ಇಲ್ಲೊಂದು ಅದ್ಭುತ ಮಾಡಿದ್ದಾನೆಂದು ಹೇಳಬಹುದು. ಇಂದೂ ಕ್ರೈಸ್ತವ ಪ್ರವಕ್ತರ ಶರೀರಗಳಿಂದ ಆಗಾಗ ಸ್ವತಃವಾಗಿ ಹೇಳಿದ ಪರಮಾತ್ಮ

ಇಸ್ಲಾಮ್‌ನಲ್ಲಿ ಹಾಗೆ ಮಾಡಲಿಲ್ಲ. ಪ್ರತ್ಯೇಕವಾದ ತನ್ನ ದೂತನ ಮೂಲಕ ಹಜರತ್ ಮಹಮ್ಮದ್ ಅವರಿಗೆ ತನ್ನ ಸಂದೇಶಗಳೆಲ್ಲವನ್ನು ತಿಳಿಸಿದ್ದಾನೆ. ಸತ್‌ಪುರುಷನಾದ ಓದು ಬಾರದ ಮಹಮ್ಮದ್ ಮಹಾಶಯನನ್ನು ತನ್ನ ಸಂದೇಶವನ್ನು ತಿಳಿಸುವ ಸಂದೇಶಪರನಾಗಿ ಮಾಡಿಕೊಂಡಿದ್ದಾನೆ. ಉಳಿದ ಮತಗಳಲ್ಲಿ ದೇವರಿಗೂ ಪ್ರವಕ್ತಗೂ ಮಧ್ಯದಲ್ಲಿ ದೇವದೂತ ಇಲ್ಲ. ಒಂದು ಇಸ್ಲಾಂ ಮತದಲ್ಲಿ ದೇವರು ಪ್ರತ್ಯೇಕಿಸಿ ತನ್ನ ದೂತನನ್ನು ಪ್ರವಕ್ತ ಮಧ್ಯದೊಳಗೆ ತಂದುಕೊಂಡಿದ್ದಾನೆ. ಈ ವಿಷಯ ತಿಳಿಯದಿರುವುದರಿಂದ ಮುಸ್ಲಿಮ್‌ರು ಇತರ ಮತಗಳನ್ನು, ಅದರಲ್ಲಿ ಬೋಧಿಸಿದ ದೇವರನ್ನು ಗುರುತಿಸದೆಹೋಗಿದ್ದಾರೆ. ಒಂದು ವಿಷಯ ಹೇಳಬೇಕೆಂದರೆ ಪ್ರಸ್ತುತ ಇಂದೂಗಳಲ್ಲಿ ನಿಜದೇವರ ಜ್ಞಾನ ಹೊಂದಿರುವವರು ಸಾವಿರಜನರಿಗೊಬ್ಬನಿರುವುದು ಸಹ ಅಪರೂಪವಾದರೆ, ಕ್ರೈಸ್ತರಲ್ಲಿ ನೂರಕ್ಕೆ ಅರವತ್ತುಜನ ದೇವರ ಮೇಲೆ ವಿಶ್ವಾಸ ಇರುವವರಿದ್ದಾರೆ. ಇಸ್ಲಾಂ ಮತದಲ್ಲಿ ನೂರಕ್ಕೆ ತೊಂಭತ್ತು ಜನ ಪೂರ್ತಿವಿಶ್ವಾಸಿಗಳಾಗಿದ್ದಾರೆ. ಇಸ್ಲಾಮ್ ಮತದಲ್ಲಿ ದೇವರ ಜ್ಞಾನ ಕಡಿಮೆ ಇದ್ದರೂ, ದೇವರು ವಿಧಿಸಿದ ಸಂಘ ನಿಯಮಗಳು ಹೆಚ್ಚಾಗಿರುವುದರಿಂದ ಆ ಮತ ಎಷ್ಟೋ ಕ್ರಮಶಿಕ್ಷಣ ಇರುವುದಾಗಿ **ಏಕೇಶ್ವರೋಪಾಸನೆ (ತೌಹಿದ್)** ಹೊಂದಿದೆ.

ಆ ಮತದಲ್ಲಿ ವಿಧಿಸಿದ ನಿಯಮಾವಳಿ ಉಳಿದ ಮತಗಳಲ್ಲಿ ಕಾಣಿಸುವುದಿಲ್ಲ. **"ಲಾ ಇಲಾಹ ಇಲ್ಲಲ್ಲಾಹ"** (ದೇವರೊಬ್ಬನೇ) ಅನ್ನುವ ಮುಖ್ಯ ಸೂತ್ರ ಇರುವುದರಿಂದ ಮುಸ್ಲೀಮ್‌ರೆಲ್ಲ ಒಂದೇ ಮಾತಿನ ಮೇಲೆ ನಿಂತಿದ್ದಾರೆ. ಜ್ಞಾನಿಯಾದವನನ್ನು ಇಂದೂ ಅನ್ನುವಂತೆ ದೇವರ ಆಜ್ಞೆಯನ್ನು ಶಿರಸಾ ಆಚರಿಸುವವನು ಮುಸ್ಲೀಮ್ ಎಂದು ಅರ್ಥ. ದೈವವಿಶ್ವಾಸಿ ಅಲ್ಲದವನು ಇಸ್ಲಾಮ್ ಮತದಲ್ಲಿ ಇದ್ದರೂ ಮುಸ್ಲೀಮ್ ಅಲ್ಲ. ದೇವರು ಒಬ್ಬನೇ **(ಲಾ ಇಲಾಹ ಇಲ್ಲಲ್ಲಾಹೀ)** ಎನ್ನುವ ನಂಬಿಕೆ ಇರುವವನು ಯಾವ ಮತದಲ್ಲಿ ಇದ್ದರು ಮುಸ್ಲೀಮ್ ಎಂದು ಹೇಳಬಹುದು. ಹಾಗೆಯೇ ದೈವಜ್ಞಾನಿಯಾಗಿ ದೇವರ ಮೇಲೆ ವಿಶ್ವಾಸ ಇರುವವನು ನಿಜವಾಗಲು ಇಂದೂವೇ. ಅಂತಹವನು

ಯಾವ ಮತದಲ್ಲಿ ಇದ್ದರು ಇಂದೂವೆಂದೇ ಹೇಳಬಹುದು. ಇಂದೂವು ಮುಸ್ಲೀಮ್ ಅನ್ನುವ ಮಾತುಗಳು ದೇವರ ವಿಶ್ವಾಸವನ್ನನುಸರಿಸಿ ಬಂದಿರುವ ವಾಗಲಿ, ಮತಪರವಾಗಿ ಬಂದಿರುವವು ಅಲ್ಲ. ಇಸ್ಲಾಮ್ ಪ್ರಕಾರ ನಿಜವಾದ ತೌಹೀದ್‌ನನ್ನು ತಿಳಿದವರು ನಿಜವಾದ ಮುಸ್ಲೀಮ್‌ರೆಂದು ಹೇಳಬಹುದು. ಹಾಗೆಯೇ ಇಸ್ಲಾಮ್ ಮತದಲ್ಲಿ ದೇವರ ಜ್ಞಾನವನ್ನು ತಿಳಿದ ಪೂರ್ತಿ ವಿಶ್ವಾಸಿಯನ್ನು ಇಂದೂವೆಂದೇ ಹೇಳಬಹುದು. ಅದೇ ವಿಧವಾಗಿ ಕೆಲವರು ಕ್ರೈಸ್ತರು ನಾನು ನಿಜವಾದ ಕ್ರೈಸ್ತವನೆಂದು, ದೇವರ ವಾಕ್ಯಕ್ಕೆ ನಿಜಭಾವನೆ ತಿಳಿದವನೆಂದು ಗರ್ವದಿಂದ ಹೇಳಿಕೊಂಡ ಸಂದರ್ಭಗಳು ಸಹ ಇವೆ. ವಿಶ್ವಾಸವೇ ಪ್ರಧಾನವಾದ್ದರಿಂದ ಇಂದೂಗಳನ್ನು ಮುಸ್ಲಿಮ್‌ರು, ಕ್ರೈಸ್ತವರು ಎಂದು ಹೇಳಿಕೊಳ್ಳುವುದರಲ್ಲಿ ತಪ್ಪಿಲ್ಲ. ಹಾಗೆಯೇ ಅವರನ್ನು ಇಂದೂಗಳೆನ್ನುವುದರಲ್ಲಿ ತಪ್ಪಿಲ್ಲ. ದೇವರ ಮೇಲೆ ವಿಶ್ವಾಸವನ್ನು ಜ್ಞಾನವನ್ನನುಸರಿಸಿ ಕರೆಯುವುದೇ ಮುಖ್ಯ, ಬೇರೆಯಲ್ಲವೆಂದು ತಿಳಿಯಬೇಕು.

ನಮ್ಮ ಅನುಭವದಲ್ಲಿ ಎಲ್ಲಾ ಮತಗಳು ಒಂದೇ ಸಾರಾಂಶ ಇರುವವೆಂದು ತಿಳಿಯುತ್ತಿದೆ. ಅವುಗಳನ್ನು ಅರ್ಥ ಮಾಡಿಕೊಳ್ಳದಿರುವಾಗಲೇ ಮನುಷ್ಯರ ಮಧ್ಯೆ ಭೇದಭಾವಗಳು ಹುಟ್ಟುತ್ತಿವೆಯೆಂದು ತಿಳಿಯುತ್ತಿದೆ. ಪ್ರತಿ ಮತದಲ್ಲಿಯೂ ದೇವರಿದ್ದಾನೆ ಮತ್ತು ಮಾಯೆ ಇದೆ. ದೇವರ ಮಾರ್ಗದಿಂದ ಮನುಷ್ಯರನ್ನು ತಪ್ಪಿಸಬೇಕೆಂದು ಮಾಯೆ (ಸಾತಾನ್) ಅಥವಾ ಸೈತಾನ್ ಯಾವಾಗಲೂ ಕಾದುಕೊಂಡಿರುತ್ತದೆ. ಆದ್ದರಿಂದ ಎಷ್ಟೋ ಪವಿತ್ರತೆಹೊಂದಿದ ಎಲ್ಲಾ ಮತಸ್ಥರಲ್ಲಿಯೂ ಅದು ಕೆಲಸಮಾಡುತ್ತಾ, ವೈಷಮ್ಯಗಳನ್ನು ಬೆಳೆಸುತ್ತಾ, ಮನುಷ್ಯನಿಗೂ ಮನುಷ್ಯನಿಗೂ ಮಧ್ಯೆ ದ್ವೇಷವನ್ನು ಬೆಳೆಸುತ್ತಿದೆ. ದೇವರ ಮೇಲಿನ ದೃಷ್ಠಿಯನ್ನು ಮತದ ಮೇಲೆ ತಿರುಗಿಸಿ ಮತಗಳನ್ನು ಬೆಳೆಸಿಕೊಳ್ಳಬೇಕೆಂದು ಭ್ರಮೆಗಳು ಉಂಟುಮಾಡಿ, ಮನುಷ್ಯರನ್ನೇ ಮೋಸಗೊಳಿಸುತ್ತದೆ. ಉದಾಹರಣೆಗೆ ಇಸ್ಲಾಮ್ ಮತದಲ್ಲಿ ದೇವರು ಮನುಷ್ಯನಿಗೆ ಮುಖ್ಯವಾದ ಕೆಲವು ವಿಧಿಗಳನ್ನು ಜೀವನದಲ್ಲಿ ಪಾಟಿಸುವಂತೆ ನಿಯಮಿಸಿದ್ದಾನೆ. ಅವು ಕ್ರಮವಾಗಿ **ಒಂದು ನಮಾಜ್,**

**ಎರಡು ರೋಜಾ, ಮೂರು ಜಕಾತ್, ನಾಲ್ಕು ಹಜ್, ಐದು ಜೀಹಾದ್ ಎನ್ನುವವು.** ಮೊದಲನೆಯದು ದೇವರ ಪ್ರಾರ್ಥನೆ ಅಥವಾ ಆರಾಧನೆ ಎನ್ನಲ್ಪಡುತ್ತಿದೆ. ಎರಡನೆಯದು ಉಪವಾಸ ವ್ರತವನ್ನು ರೋಜಾ ಎನ್ನುತ್ತಿದ್ದೇವೆ. ಮೂರನೆಯದು ತನಗೆ ಇರುವ ಧನವನ್ನು ಸ್ವಲ್ಪ ದೇವರಿಗೆ ಉಪಯೋಗಿಸುವುದನ್ನು ಜಕಾತ್ ಎನ್ನುತ್ತಿದ್ದೇವೆ. ನಾಲ್ಕನೆಯದು ಜೀವನದಲ್ಲಿ ಪುಣ್ಯಕ್ಷೇತ್ರವೊಂದರ ಯಾತ್ರೆಮಾಡುವುದು ಹಾಜ್ ಎನ್ನುತ್ತಿದ್ದಾರೆ. ಐದನೆಯದು ಮತವನ್ನು ರಕ್ಷಿಸಿಕೊಳ್ಳುವುದನ್ನು ಜೀಹಾದ್ ಎನ್ನುತ್ತಿದ್ದೇವೆ. ಈ ವಿಧಗಳಲ್ಲಿ ಎಲ್ಲರೂ ಮಾಡಲಾಗಿರುವವು ನಮಾಜ್ ಮತ್ತು ರೋಜಾ ಎನ್ನುವ ಉಪವಾಸವಾದರೆ, ಎಲ್ಲರೂ ಮಾಡಲಾರದವು ಉಳಿದ ಮೂರು ವಿಧಗಳು. ಈ ವಿಧಗಳೆಲ್ಲ ದೇವರ ಪವಿತ್ರತೆಯನ್ನು ಸಾರುವವಾಗಿ ಇರುವಾಗ ಜೀಹಾದ್ ಎನ್ನುವ ವಿಧಾನ ಮಾತ್ರ ಕೆಲವರ ಪ್ರವರ್ತನೆಯಿಂದ ಕಲುಷಿತವಾಗಿ ಹೋಗುತ್ತಿದೆ. ಮತ ರಕ್ಷಣೆಗೆಂದು ದೇವರು ಹೇಳಿರುವಾಗ ಮತಕ್ಕೆ ಹಾನಿ ಬಾರದ ಸಂದರ್ಭ ಗಳಲ್ಲಿಯೂ ಮತ ಎಂದರೆ ಏನೋ ತಿಳಿಯದ ಅಮಾಯಕರ ಮೇಲೆಯೂ ಜೀಹಾದ್‌ನ್ನು ಆಚರಿಸುವುದರಿಂದ ಮಾನವ ಜೀವನಗಳು ರಕ್ತಸಿಕ್ತವಾಗಿ ಹೋಗುತ್ತಿವೆ. ಮತಕ್ಕೆ ಆಪತ್ತು ಉಂಟುಮಾಡುವವನ ಮೇಲೆ ಬಲಪ್ರಯೋಗ ಮಾಡಿದರು ಪರವಾಗಿಲ್ಲವೇನೊ ಆದರೆ, ಯಾವ ಅಪಕಾರ ಮಾಡದ ಅಮಾಯಕರನ್ನು ಸಹಿತವು ಹಿಂಸಿಸಿ ಘೋರವಾಗಿ ಸಾವಿಗೆ ಗುರಿಮಾಡೆಂದು ದೇವರು ಹೇಳಲೇ ಇಲ್ಲ. ಅಂತಹವರನ್ನು ದೇವರು ಸಹಿಸುವುದಿಲ್ಲ, ಅಜ್ಞಾನದಿಂದ ದೇವರನ್ನು ಕುರಿತು ಕೆಟ್ಟದಾಗಿ ಮಾತನಾಡಿದರೂ ಸಹಿಸಿಕೊಂಡು ಅವನಿಗೆ ಮಾತುಗಳಿಂದ ದೇವರ ಮೇಲೆ ವಿಶ್ವಾಸ ಮೂಡಿಸಬೇಕು, ಆದರೆ ಸಾಯಿಸಬಾರದೆಂದು ದೇವರ ಸಂದೇಶದಲ್ಲಿಯೇ ಇದೆ. ಆಗಲೂ ಕೇಳದ ಪಕ್ಷದಲ್ಲಿ ಅವನಿಗೆ ದೇವರ ಶಿಕ್ಷೆ ತಪ್ಪುವುದಿಲ್ಲ. ಎಲ್ಲರನ್ನು ಶಿಕ್ಷಿಸುವವನು ದೇವರಿರು ವಾಗ ಆತನ ಮೇಲೆ ದೃಷ್ಠಿ ಹರಿಸದೆ ನಾವು ಕರ್ತರೆಂದುಕೊಳ್ಳಬಾರದು.

ವಿಶ್ವವೆಲ್ಲಾ ವ್ಯಾಪಿಸಿ ಪ್ರತಿ ಶರೀರದಲ್ಲಿಯೂ ಮೂಲಾಧಾರವಾದ ಶಕ್ತಿಯೇ ದೇವರೆಂದು ಗ್ರಹಿಸಿದವರು, ಎಲ್ಲಾ ಶರೀರಗಳಲ್ಲಿಯೂ ದೇವರು ವಾಸಿಸುತ್ತಿದ್ದಾನೆಂದು ತಿಳಿದು, ಯಾವ ಮತ ಘರ್ಷಣೆಗಳಿಗೆ ಇಳಿಯುವುದಿಲ್ಲ. ಮತಗಳು ದೇವರನ್ನು ತಿಳಿದುಕೊಳ್ಳುವ ಮಾರ್ಗಗಳೆಂದು, ಮಾರ್ಗಗಳಾದ ಮತಗಳು ದೇವರು ಅಲ್ಲವೆಂದು, ಮತಗಳಿಗತೀತವಾದವನು ದೇವರೆಂದು ತಿಳಿಯುವವನೇ ನಿಜವಾದ ವಿಶ್ವಾಸಿ ಎಂದೂ, ನಿಜವಾದ ಇಂದೂವೆಂದು ಅಥವಾ ನಿಜವಾದ ಮುಸ್ಲಿಮ್ ಎಂದು ಹೇಳಲಾಗುತ್ತದೆ. ಇಷ್ಟು ಮಾತುಗಳು ಹೇಳಿದ ನನ್ನದು ಯಾವ ಮತವೋ ನಿಮಗೆ ತಿಳಿದಿದೆಯಾ? ತಿಳಿಯದೆಹೋದರೆ ತಿಳಿದುಕೊಳ್ಳಿರೆಂದು ಕೋರುತ್ತಿದ್ದೇವೆ.

# ಯಜ್ಞವೆಂದರೆ ಏನು?

ಯಜ್ಞ ಎಂದರೆ ಆರಾಧನೆ ಎಂದು ಕೆಲವರು, ದ್ರವ್ಯಗಳನ್ನು ದೇವತೆಗಳಿಗೆ ಸಮರ್ಪಿಸುವ ವಿಧಾನವೆಂದು ಕೆಲವರು, ಚಿಕ್ಕ ಗುಂಡವನ್ನು ಮಾಡಿ ಅದರಲ್ಲಿ ಅನೇಕ ವಸ್ತುಗಳನ್ನು ಮಂತ್ರ ಯುಕ್ತವಾಗಿ ಹಾಕಿ ಸುಟ್ಟುಹಾಕುವುದೇ ಎಂದು ಕೆಲವರು ಅಂದುಕೊಳ್ಳುವುದು ಅಭ್ಯಾಸವಾಗಿದೆ. ಯಾವುದು ಏನಾದರೂ ಚಿಕ್ಕ ಗುಂಡಿಯನ್ನು ಅಗೆದು ಅದರಲ್ಲಿ ಏನೇನೋ ಹಾಕಿ ಸುಡುವುದೇ ಯಜ್ಞವೆಂದು ಸಾಮಾನ್ಯ ಮಾನವನಲ್ಲಿರುವ ಭಾವ. ಭಗವಂತನು ಗೀತೆಯಲ್ಲಿ ತಿಳಿಸಿದ ಪ್ರಕಾರ ನಾವು ನೋಡುತ್ತಿರುವ ಯಜ್ಞಗಳು ಧರ್ಮಸಹಿತವಾದವಾ, ಅಧರ್ಮಸಹಿತವಾದವಾ ಎಂದು ತಿಳಿದುಕೊಳ್ಳುವುದು ಮುಖ್ಯ. ಆತ್ಮವನ್ನು ತಿಳಿದುಕೊಳ್ಳುವುದಕ್ಕೆ ಸಾಧನೆ ಮಾಡಿದರೆ ಸರಿಹೋಗುತ್ತದೆ ಇವೆಲ್ಲಾ ತಿಳಿದುಕೊಳ್ಳುವುದು ಏಕೆ ಎಂದು ಕೆಲವರು ಅಂದುಕೊಳ್ಳುವವರು ಸಹ ಇದ್ದಾರೆ. ಅದಕ್ಕೆ ಸಮಾಧಾನ ಏನೆಂದರೆ! ಧರ್ಮ ತಿಳಿಯದೆ ಧರ್ಮಗಳ ಮೇಲೆ ಆಧಾರಪಟ್ಟ ದೇವರು ತಿಳಿಯುವುದಿಲ್ಲ. ಆದ್ದರಿಂದಲೇ ತಾನೆ! ವಿಶ್ವಶಕ್ತಿ, ವಿಶ್ವವ್ಯಾಪಿಯಾದ ಪರಮಾತ್ಮ ಶರೀರ ಧರಿಸಿ

ನಮ್ಮ ಮಧ್ಯಕ್ಕೆ ಬಂದು ಎಲ್ಲಾ ಧರ್ಮಗಳನ್ನು ತಿಳಿಸಿದ್ದಾನೆ. ಧರ್ಮಗಳನ್ನು ತಿಳಿದು ಸಂಪೂರ್ಣ ಜ್ಞಾನಿಯಾಗದೆ ಯಾರು ದೇವರನ್ನು ತಿಳಿಯಲಾರರೆಂದು, ಆ ದೇವರೇ **'ಶ್ರೇಯೋಹಿ ಜ್ಞಾನ ಮಭ್ಯಾಸಾತ್'** ಅಂದಿದ್ದಾನೆ. ಆದ್ದರಿಂದ ಪ್ರತಿ ವಿಷಯವನ್ನು ಧರ್ಮ ಸಮ್ಮತವಾಗಿ ತಿಳಿದು, ಅಧರ್ಮ ಸಹಿತವಾದವುಗಳನ್ನು ಬಿಟ್ಟಾಗಲೇ ದೇವರನ್ನು ತಿಳಿಯುವುದಕ್ಕೆ ಅವಕಾಶವಿದೆ. ಹಾಗೆ ಆಗದ ದಿನ ದೇವರನ್ನು ತಿಳಿಯುವುದು ಹೊಂದುವುದು ಕಷ್ಟ. ಆದ್ದರಿಂದ ಯಜ್ಞಗಳ ಕುರಿತು ನಾವು ಅವಗಾಹನೆ ಮಾಡಿಕೊಂಡ ವಿಷಯಗಳನ್ನು ಧರ್ಮಬದ್ಧವಾ ಅಲ್ಲವಾ ಎಂದು ನೋಡಬೇಕಾಗಿದೆ.

ಧರ್ಮಕ್ಕೆ ಬಲ ದೇವರೊಬ್ಬನೇ, ಅಧರ್ಮಗಳಿಗೆ ಬಲ ಯಾವತ್ ಪ್ರಪಂಚ. ಆದ್ದರಿಂದ ಈ ಪ್ರಪಂಚದಲ್ಲಿ ಅಧರ್ಮಗಳಿಗೇ ಪ್ರಜೆಗಳು ಪ್ರಾಧಾನ್ಯತೆ ಕೊಡುವುದು ನಡೆಯುತ್ತಿದೆ. ಧರ್ಮಗಳಿಗೆ ಬಲವಿಲ್ಲದಿರುದಾಗ, ಧರ್ಮಗಳಿಗೆ ಬಲ ಕೈಗೂಡಿಸುವುದಕೋಸ್ಕರ ಆ ದೇವರೇ ಅವತರಿಸಿ ಹೇಳಬೇಕಾಗಿದೆ. ಅಧರ್ಮಗಳು ಹಾಗಲ್ಲದೆ ಅಧರ್ಮಗಳು ಮಾನವನಿಂದಲೇ ಪ್ರಚಾರ ಆಗುತ್ತಿವೆ. ದೇವರೊಬ್ಬನು ಮಾನವನಾಗಿ ಬಂದು ಧರ್ಮಗಳು ಹೇಳಿದರೆ, ಮಾನವರೆಷ್ಟೋ ಇದೇ ನಿಜಧರ್ಮವೆಂದು ಅಧರ್ಮಗಳನ್ನು ಬೋಧಿಸುತ್ತಾ ಮಾನವನಾಗಿ ಬಂದಿರುವ ದೇವರ ಮಾತಿಗೆ ವಿರುದ್ಧವಾಗಿ ಪ್ರಚಾರ ಮಾಡಿಕೊಳ್ಳುತ್ತಿರುತ್ತಾರೆ. ದೈವಾಂಶ ಹೊಂದಿದ ಒಬ್ಬ ಮಾನವನಿಂದ ತಿಳಿಸಲಾದ ಧರ್ಮಗಳಿಗೆ ವಿರುದ್ಧವಾಗಿ ಮಾಯೆ ಬಲವಿರುವ ಎಷ್ಟೋ ಮಾನವರಿಂದ ತಿಳಿಸಲ್ಪಡುವ ಅಧರ್ಮಗಳ ಬಲಕ್ಕೆ ಧರ್ಮಗಳು ಮಾಸಿಹೋಗುತ್ತಿರುತ್ತವೆ. ಆದ್ದರಿಂದಲೇ ದೇವರು ಆಗಾಗ ಹುಟ್ಟಬೇಕಾಗಿ ಬರುತ್ತಿದೆ ಎಂದು ಗೀತೆಯಲ್ಲಿ ಹೇಳಿದ್ದಾರೆ.

ಸಾಮಾನ್ಯ ಮಾನವನು ಧರ್ಮಗಳನ್ನಾಗಲಿ, ಅಧರ್ಮಗಳನ್ನಾಗಲಿ ಪ್ರಚಾರ ಮಾಡುವ ಸ್ಥಿತಿಯಲ್ಲಿರುವುದಿಲ್ಲ. ಆದರೆ ಇಲ್ಲಿ ಅಧರ್ಮಗಳನ್ನು ಧರ್ಮಗಳಾಗಿ ರೂಪಿಸಿ ತೋರಿಸುತ್ತಾ ದೇವರ ಮಾತಿಗೆ ವಿರುದ್ಧವಾಗಿ ಪ್ರಚಾರ ಮಾಡುವುದಕ್ಕೆ ಅವಕಾಶ ಜ್ಞಾನ ಬೋಧಿಸುವ ಸಾಮರ್ಥ್ಯ ಹೊಂದಿದವರಿಗೆ

ಮಾತ್ರವೇ ಇರುತ್ತದೆ. ಸಾಮಾನ್ಯ ಮಾನವನಿಗೆ ಏನು ತಿಳಿಯದು, ಆದ್ದರಿಂದ ಬೋಧಿಸುವವರು ಹೇಳಿದಂತೆ ನಡೆದುಕೊಳ್ಳುತ್ತಿರುತ್ತಾರೆ. ಆದರೆ ವಿಮರ್ಶಿಸುವ ಶಕ್ತಿ ಕೇಳುವವರಿಗೆ ಇರುವುದಿಲ್ಲ. ಇಂತಹ ವಾತಾವರಣದಲ್ಲಿ ಅಧರ್ಮಗಳು ಸುಲಭವಾಗಿ ಹರಡಿ, ಪ್ರಜೆಗಳಲ್ಲಿ ಸೇರಿ ಹೋಗುತ್ತಿವೆ. ಆ ವಿಧವಾಗಿ ಎಷ್ಟೋಜನರಿಂದ ಹೇಳಲ್ಪಟ್ಟು ಬಹಳ ಪ್ರಚಾರದಲ್ಲಿರುವ ಅಧರ್ಮಗಳನ್ನು ದೇವರೇ ಅವತರಿಸಿ ಖಂಡಿಸಬೇಕಾಗಿ ಬಂದಾಗ, ನೋಡುವವರಿಗೆ ದೇವರು ಸಹ ಒಬ್ಬ ಮನುಷ್ಯನಂತೆಯೇ ಕಾಣಿಸುತ್ತಿರುತ್ತಾನೆ. ಆದ್ದರಿಂದ ಎಷ್ಟೋ ಜನ ಹೇಳಿರುವುದಕ್ಕಿಂತ ನೀನು ಹೇಳುವುದು ನಿಜವಾ? ದೊಡ್ಡವರೆಲ್ಲ ತಿಳಿಸಿರುವುದು ನೀನೊಬ್ಬನು ಅಲ್ಲವೆನ್ನುತ್ತಿಯಾ? ಎಂದು ಅನ್ನುತ್ತಾರೆ. ಆದರೆ ಈತನು ಹೇಳಿರುವುದು ಏನು? ಇದಕ್ಕು ಮೊದಲು ನಾವು ಕೇಳಿರುವುದೇನು? ಯಾವುದು ನಿರೂಪಣೆಗೆ ಬರುವ ಸತ್ಯವೆಂದು ಯೋಚಿಸುವುದಿಲ್ಲ. ಆದ ಕಾರಣ ಪರಮಾತ್ಮನೇ ಶ್ರೀಕೃಷ್ಣನಾಗಿ ಹುಟ್ಟಿದಾಗ ಧರ್ಮಗಳನ್ನು ಪ್ರಜೆಗಳಿಗೆ ಹೇಳಿದರೆ ಎಷ್ಟೋಜನ ಮುನಿಗಳು ಹೇಳಿರುವುದಕ್ಕಿಂತ ನೀನು ವಿರುದ್ಧವಾಗಿ ನನ್ನದು ಧರ್ಮ ವೆನ್ನುತ್ತೀಯಾ? ನಿನಗಿಂತ ಮೊದಲು ಹುಟ್ಟಿದವರು ತಿಳಿಸಿರುವುದು ಅಧರ್ಮ ವೆನ್ನುತ್ತೀಯಾ? ಕಠೋರವಾದ ಬ್ರಹ್ಮಾಚಾರಿಗಳು, ಮಹರ್ಷಿಗಳು ಜೀವನವೆಲ್ಲಾ ಒಂದೇ ಆಚರಣೆಯಲ್ಲಿರುವವರು ತಿಳಿಸಿದ ಮಾತುಗಳು ಅಧರ್ಮಗಳಾ? ಎಷ್ಟೋಜನ ಪತ್ನಿಯರಿರುವ ನೀನು, ಸಾಮಾನ್ಯವಾಗಿ ಎಲ್ಲಾ ವಿಷಯಗಳಲ್ಲಿ ತಲೆಹಾಕುವ ನೀನು ಹೇಳಿರುವುದು ಧರ್ಮವಾ? ಎಂದು ಎದುರು ಪ್ರಶ್ನೆ ಹಾಕುತ್ತಾರೆಂದು ಶ್ರೀಕೃಷ್ಣನು ಅವಕಾಶಬಂದಾಗ ಅರ್ಜುನನಿಗೆ ಮಾತ್ರ ತಿಳಿಸಿಹೋಗಿದ್ದಾನೆ. ಶಾಸನಗಳು, ಸಿದ್ಧಾಂತಗಳು, ನಿರೂಪಣೆಗಳಾದ ಅಂದಿನ ಶ್ರೀಕೃಷ್ಣನ ವಾಕ್ಯಗಳಿಗೂ ಸಹ ಈದಿನ ವಕ್ರಭಾಷ್ಯ ಏರ್ಪಟ್ಟಿದೆ. ಮೊದಲು ಹುಟ್ಟಿ, ಗಡ್ಡಗಳು ಬೆಳೆಸಿ, ಹೇಳಿಹೋದವರ ಮಾತುಗಳೆಲ್ಲ ವೇದಗಳೆಂದು, ಉಪನಿಷತ್ತುಗಳೆಂದು, ಅದರಲ್ಲಿನ ವಾಕ್ಯಗಳೇ ಧರ್ಮಗಳೆಂದು, ಕುರುಡರಂತೆ ನಂಬುತ್ತಾ ಸತ್ಯಾಸತ್ಯ ವಿಮರ್ಶೆಯಿಲ್ಲದೆ ಈ ದಿನ ಗೀತೆಯನ್ನು ಸಹ ಹಿಂದಕ್ಕೆ ನೆಟ್ಟಿದವರಿದ್ದಾರೆ. ಪಿಪ್ಪಲಾದ ಮಹರ್ಷಿ ಹೇಳಿದ ಗರ್ಭೋಪನಿಷತ್‌ನಲ್ಲಿನ

ವಾಕ್ಯಗಳನ್ನು ಕುರುಡರಂತೆ ನಂಬುತ್ತಾ ಗೀತೆಯಲ್ಲಿ ಸ್ವತಃ ದೇವರೆ ಹೇಳಿದ **'ವಾಸಾಂಸಿ ಜೀರ್ಣಾನಿ'** ಅನ್ನುವ ಶ್ಲೋಕವನ್ನೇ ಅರ್ಥರಹಿತ ಮಾಡಿದ್ದಾರೆ. ಜೀವಿಯು ಶರೀರವನ್ನು ಹೊಂದುವ ವಿಷಯವನ್ನು ತಿಳಿಸಿದ ಆ ಶ್ಲೋಕವೊಂದರ ಸತ್ಯವನ್ನೇ ಸಮಾಧಿ ಮಾಡಿದ್ದಾರೆ. ಅದಕ್ಕೆ ವಿರುದ್ಧವಾಗಿ ಅವರು ಹಾಗೆ ಹೇಳಿದ್ದಾರೆ, ಇವರು ಹೀಗೆ ಹೇಳಿದ್ದಾರೆ ಎಂದು ಅನ್ನುತ್ತಾರಾಗಲಿ, ಯಾವುದು ಸತ್ಯ ಎಂದು ಮನುಷ್ಯರು ಯೋಚಿಸುವುದಿಲ್ಲ. ಅಸಲಿಗೆ ಕೆಲವರ ಭಾವನೆಯಲ್ಲಿ ಶ್ರೀಕೃಷ್ಣನೆಂದರೆ ಸಾಮಾನ್ಯ ಮಾನವನೆಂದು ಲೆಕ್ಕ. ಸಾಮಾನ್ಯ ಮಾನವರನ್ನು ದೇವರಾಗಿ ಲೆಕ್ಕಿಸಿ ಗೌರವಿಸುವ ಮನುಷ್ಯರು, ನಿಜವಾದ ದೇವರು ಮನುಷ್ಯನಾಗಿ ಬಂದರೂ ಕೃಷ್ಣನನ್ನು ಗುರ್ತಿಸಲಾರದೆ ಮೇಲಾಗಿ ಸಾಮಾನ್ಯರಿಗಿಂತ ನೀಚವಾಗಿ ಲೆಕ್ಕಿಸಿಕೊಂಡಿರುವುದಕ್ಕೆ ನಾವು ದುಃಖಪಡುತ್ತಿದ್ದೇವೆ. ಈಗ ಧರ್ಮಯುಕ್ತವಾಗಿ, ಶಾಸ್ತ್ರಬದ್ಧವಾಗಿ ಯಜ್ಞವೆಂದರೆ ಏನೋ ತಿಳಿದುಕೊಳ್ಳೋಣ.

ಯಜ್ಞವೆಂದರೆ ಸುಡುವುದು ಎಂದು ಅರ್ಥ. ಇನ್ನು ಯಜ್ಞ ನಡೆಯುತ್ತಿದೆ ಎಂದರೆ ಒಂದನೆಯದು ಸುಡುವುದಕ್ಕೆ ಒಂದು ಅಗ್ನಿ ಬೇಕು. ಎರಡನೆಯದು ಸುಡಲ್ಪವುದಕ್ಕೆ ಒಂದು ವಸ್ತು ಬೇಕು. ಮೂರನೆಯದು ಸುಡುವುದಕ್ಕೆ ಒಬ್ಬ ಮನುಷ್ಯ ಬೇಕು. 1) ಸುಡುವುದು 2) ಸುಡಲ್ಪಡುವುದು 3) ಸುಡುವವನು ಅನ್ನುವ ಮೂರು ಇರಬೇಕಾಗಿರುವುದೆ ಎಂಬುದು ಎಲ್ಲರಿಗೂ ತಿಳಿದ ವಿಷಯವೇ ತಾನೆ! ಎಲ್ಲಿ ಯಜ್ಞಗಳು ನಡೆದರು ಯಜ್ಞಗುಂಡದಲ್ಲಿ ಅಗ್ನಿ ಇರುತ್ತದೆ. ಅದರೊಳಗೆ ಹಾಕುವ ವಸ್ತುಗಳು ಚಿಕ್ಕ ಕಡ್ಡಿಗಳು ಮೊದಲುಗೊಂಡು ದೊಡ್ಡ ಔಷಧಗಳು, ರೇಷ್ಮೆಸೀರೆಗಳು, ಚಿನ್ನ, ತುಪ್ಪ ಎಷ್ಟೋ ಇವೆ. ಹಾಗೆ ಅವುಗಳನ್ನು ನೆರವೇರಿಸುವುದಕ್ಕೆ ಋತ್ವಿಕರು ಎನ್ನುವವರು ಇದ್ದಾರಲ್ಲ! ಆದರೆ ಇದು ಧರ್ಮವಾ, ಅಧರ್ಮವಾ ತಿಳಿದಿಲ್ಲ. ಇದನ್ನು ಕುರಿತು ಯೋಗಶಾಸ್ತ್ರವಾದ ಗೀತೆಯಲ್ಲಿ ಹೇಳಿರುವುದು ಮಾತ್ರ ಧರ್ಮ. ಯೋಗಶಾಸ್ತ್ರವಾದ ಗೀತೆಯನ್ನನುಸರಿಸಿ ಯಜ್ಞಗಳು ಎರಡು ವಿಧಗಳಾಗಿ ವಿಭಜಿಸಲ್ಪಟ್ಟಿವೆ. 1) ದ್ರವ್ಯಯಜ್ಞ 2) ಜ್ಞಾನಯಜ್ಞ. ದ್ರವ್ಯಯಜ್ಞ ಪ್ರಕೃತಿ ಸಂಬಂಧವಾದುದು. ಪರಮಾತ್ಮನನ್ನು ಸೇರುವುದಕ್ಕೆ ಈ ಯಜ್ಞ

ಕೆಲಸಕ್ಕೆಬರುವುದಿಲ್ಲ. ಪ್ರಕೃತಿಯಲ್ಲಿ ಹುಟ್ಟಿದ ಕಣ್ಣಿಗೆ ಕಾಣಿಸುವ ವಸ್ತುಗಳನ್ನು ಸುಟ್ಟುಹಾಕುವುದು, ಆದ್ದರಿಂದ ಇದಕ್ಕೆ ದ್ರವ್ಯಯಜ್ಞವೆಂದು ಹೆಸರು ಇಟ್ಟಿದ್ದಾರೆ. ಈ ಯಜ್ಞ ದ್ರವ್ಯಗಳನ್ನು ಸುಡುತ್ತಾ, ಜನ್ಮಕ್ಕೆ ಕಾರಣವಾದ ಕರ್ಮವನ್ನು ವೃದ್ಧಿಮಾಡುತ್ತದೆ. ಆದರೆ ಹುಟ್ಟಿದ ಪ್ರತಿ ಜೀವರಾಶಿ ದ್ರವ್ಯಯಜ್ಞವನ್ನು ಮಾಡುತ್ತಿದೆ. ದ್ರವ್ಯಯಜ್ಞಕ್ಕಿಂತ ಎಲ್ಲಾ ವಿಧಗಳಲ್ಲಿ ಭಿನ್ನವಾದುದು ಶ್ರೇಷ್ಠವಾದುದು ಜ್ಞಾನಯಜ್ಞ. ಈ ಯಜ್ಞ ಆತ್ಮಪರವಾದುದು. ಸರ್ವಕರ್ಮಗಳು ಜ್ಞಾನಯಜ್ಞದಲ್ಲಿ ಸುಟ್ಟುಹೋಗಿ ಜನ್ಮ ಇಲ್ಲದಂತೆ ಮುಕ್ತಿಯನ್ನು ಉಂಟುಮಾಡುತ್ತಿದೆ. ಆದ್ದರಿಂದಲೇ ಗೀತೆಯಲ್ಲಿ ಜ್ಞಾನಯೋಗದಲ್ಲಿ 33ನೇ ಶ್ಲೋಕ ॥

**ಶ್ಲೋ ॥ ಶ್ರೇಯಾನ್ ದ್ರವ್ಯ ಮಯಾ ದ್ಯಜ್ಞಾತ್ ಜ್ಞಾನ ಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿ ಸಮಾಪ್ಯ ತೇ ॥**

ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞ ಶ್ರೇಷ್ಟವಾದುದು. ಏಕೆ ಎಂದರೆ! ಸರ್ವಕರ್ಮಗಳು ಜ್ಞಾನಾಗ್ನಿಯಲ್ಲಿ ಪರಿಸಮಾಪ್ತವಾಗುತ್ತವೆ ಎಂದು ದೇವ ರಂದಿದ್ದಾನೆ. ದೇವರು ಹೇಳಿದ ಈ ಯಜ್ಞಗಳ್ಯಾವುವೊ? ಎಲ್ಲಿವೆಯೊ? ಹೇಗೆ ನಡೆಯುತ್ತಿವೆಯೊ? ಯಾರು ಮಾಡುತ್ತಿದ್ದಾರೊ? ತಪ್ಪದೆ ತಿಳಿದುಕೊಳ್ಳಬೇ ಕಾಗಿದೆ. ದೇವರು ತಿಳಿಸಿದ ಈ ಯಜ್ಞಗಳ ವಿವರ ತಿಳಿದವನು ಯಾರಾದರೂ ಈಗಿನ ಕಾಲದಲ್ಲಿ ನಡೆಯುತ್ತಿರುವ ಯಜ್ಞಗಳ ಬಳಿ ಮೋಸಹೋಗುವುದಿಲ್ಲ.

ಭಗವದ್ಗೀತೆಯಲ್ಲಿ ಅಕ್ಷರಪರಬ್ರಹ್ಮ ಯೋಗವೆಂಬ ಅಧ್ಯಾಯದಲ್ಲಿ 4ನೇ **ಶ್ಲೋ॥ 'ಅಧಿ ಯಜ್ಞೋ ಹಮೇ ವಾತ್ರ ದೇಹಿ ದೇಹ ಭೃತಾಂ ವರ'** ಸರ್ವ ದೇಹಗಳಲ್ಲಿ ನಡೆಯುವ ಯಜ್ಞಗಳಿಗೆ ನಾನೇ ಭೋಕ್ತನಾಗಿದ್ದೇನೆ. ಅನ್ನುವ ದೇವರ ಮಾತನ್ನನುಸರಿಸಿ ಎರಡು ವಿಧಗಳ ಯಜ್ಞಗಳು ನಮ್ಮ ದೇಹಗಳಲ್ಲಿಯೇ ನಡೆಯುತ್ತಿವೆಯೆಂದು ತಿಳಿಯುತ್ತಿದೆ. ಹೇಗೆ ನಡೆಯುತ್ತಿದೆ ಎಂದರೆ! ದ್ರವ್ಯಯಜ್ಞ ಸರ್ವ ಜೀವರಾಶಿಗಳ ಶರೀರದಲ್ಲಿನ ಜೀರ್ಣಾಶಯದಲ್ಲಿ ಜಠರಾಗ್ನಿಯಿಂದ ನಡೆಯುತ್ತಿದೆ. ಜೀರ್ಣಾಶಯದಲ್ಲಿ ಸೇರುವ ರಸಗಳಿಂದ ಅಗ್ನಿ ಪ್ರಭಾವವೇರ್ಪಟ್ಟು

ನಾವು ನಿತ್ಯ ತಿನ್ನುತ್ತಿರುವ ದ್ರವ್ಯಗಳನ್ನು ಭಸ್ಮೀಪಟಲ ಮಾಡುತ್ತಿದೆ. ಜೀರ್ಣಾಶಯ ದಲ್ಲಿ ಏನೋ ಅಗ್ನಿ ಇದೆಯೆಂಬುವುದಕ್ಕೆ ನಮ್ಮ ಬಾಯಿಯ ದ್ವಾರಗಳಲ್ಲಿ ಬಿಸಿ ಕಾಣಿಸುತ್ತಿದೆ. ಬಾಯಿಯ ದ್ವಾರಗಳಲ್ಲಿ ಹಾಕುವ ವಿವಿಧ ವಿಧಗಳಾದ ದ್ರವ್ಯಗಳು ಯಜ್ಞಕುಂಡವಾದ ಜೀರ್ಣಾಶಯದಲ್ಲಿ ಬಿದ್ದು ಸುಟ್ಟುಹೋಗಿ ಬದಲಾವಣೆ ಯಾಗುತ್ತಿವೆ. ಈ ದ್ರವ್ಯಯಜ್ಞ ದಿನಕ್ಕೆ ಮೂರು ಇಲ್ಲವೇ ನಾಲ್ಕು ಸಲ ನಾವು ನಮಗೆ ತಿಳಿಯದೆಯೇ ಮಾಡುತ್ತಿದ್ದೇವೆ. ಈ ಯಜ್ಞದಲ್ಲಿ ದಹಿಸುವ ಅಗ್ನಿ ಆತ್ಮ ಚೈತನ್ಯದಿಂದ ಸ್ರವಿಸಲ್ಪಟ್ಟು ಸೇರುವ ರಸಗಳಿಂದ ಏರ್ಪಟ್ಟಿದೆ. ಆದ್ದರಿಂದ ಆ ಅಗ್ನಿಯನ್ನು ಜಠರಾಗ್ನಿ ಎಂದು, ಸುಡಲ್ಪಡುವವು ಆಹಾರ ದ್ರವ್ಯಗಳೆಂದು ತಿಳಿಯುತ್ತಿದೆ. ಈ ದ್ರವ್ಯಯಜ್ಞವನ್ನು ಕುರಿತು ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ **14ನೇ ಶ್ಲೋ ॥ 'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹ ಮಾಶ್ರಿತಃ ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್'** ಎಲ್ಲಾ ಪ್ರಾಣಿಗಳ ದೇಹದಲ್ಲಿ ನಾನು ಅಗ್ನಿ ಸ್ವರೂಪನಾಗಿ ಇದ್ದು, ಅವರು ತಿಂದ ನಾಲ್ಕು ವಿಧಗಳ ಪದಾರ್ಥಗಳನ್ನು ಜೀರ್ಣಮಾಡುತ್ತಿದ್ದೇನೆ. ಎಂದು ಭಗವಂತನು ತಿಳಿಸಿದ್ದಾನೆ.

ದೇವರು ತಿಳಿಸಿದ ಈ ದ್ರವ್ಯಯಜ್ಞವನ್ನು ನಾವು ನಿತ್ಯವೂ ನಮಗೆ ತಿಳಿಯದೆಯೇ ಮಾಡುತ್ತಿದ್ದೇವೆಂದರೆ ಆಶ್ಚರ್ಯವಾಗಿ ಇರುತ್ತದಲ್ಲವೆ! ನಿಜವೇ ಮತ್ತೆ ನಮ್ಮ ಮಹರ್ಷಿಗಳು ಹೇಳಿದ ಸಿಹಿಯಾದ ಮಾತುಗಳು ದೇವರ ಧರ್ಮಗಳಿಗೆ ವಿರುದ್ಧವಾಗಿ ನಮ್ಮಲ್ಲಿ ಅಡಕವಾಗಿವೆ. ಆದ್ದರಿಂದ ಗುಂಡಿಗಳು ತೆಗೆದು ಕಡ್ಡಿಗಳು ಹಾಕಿ ಸುಡುವವೇ ಯಜ್ಞಗಳು ಅಂದುಕೊಂಡಿದ್ದೇವೆ. ಆದ್ದರಿಂದ ಈ ವಿಷಯ ಆಶ್ಚರ್ಯವಾಗಿರುತ್ತದೆ. ದ್ರವ್ಯಯಜ್ಞ ನಮ್ಮ ನಿತ್ಯ ಜೀವನದಲ್ಲಿ ತಪ್ಪದೆ ನಡೆಯುತ್ತಿದೆ. ಇದಕ್ಕೋಸ್ಕರ ದ್ರವ್ಯಗಳು ಬೇಕು. ಆ ದ್ರವ್ಯಗಳಿಗೋಸ್ಕರ ಅನೇಕ ಕೆಲಸಗಳು ಮಾನವನು ಮಾಡುತ್ತಿದ್ದಾನೆ. ಕರ್ಮದಿಂದ ಪ್ರೇರೆಪಿಸಲ್ಪಡುವ ಕಾರ್ಯಗಳಿಂದಲೇ ಯಜ್ಞಗಳು ನಡೆಯುತ್ತಿವೆ. ಕರ್ಮದಿಂದ ಮಾಡಲಾದ ಯಾವ ಕಾರ್ಯಗಳಲ್ಲಾದರೂ ಪುನಃ ಹೊಸಕರ್ಮ ಬರುತ್ತದಲ್ಲವೆ! ದ್ರವ್ಯಯಜ್ಞ

ಗಳು ಮಾಡುವುದರಿಂದ ಹೊಸಕರ್ಮ ಬರುತ್ತದಲ್ಲ ಎಂದು ಕೆಲವರಿಗೆ ಸಂಶಯಬರಬಹುದು. ಅದಕ್ಕೆ ಸಮಾಧಾನ ಏನೆಂದರೆ! ಕರ್ಮಬರುವ ಮಾತು ನಿಜವೇ, ಆದರೂ ದ್ರವ್ಯಯಜ್ಞಗಳು ಮಾಡುವುದರಿಂದ ಸಂಭವಿಸುವ ಕರ್ಮವನ್ನು ತಪ್ಪಿಸುವುದಕ್ಕೆ ತಕ್ಕ ಉಪಾಯ ತಿಳಿದುಕೊಂಡು ಹೊರಬೀಳಬಹುದು. ಕೂಳಿಗೋಸ್ಕರ ಕೋಟಿವಿದ್ಯೆಗಳೆನ್ನುವಂತೆ ದ್ರವ್ಯಯಜ್ಞಕ್ಕೋಸ್ಕರ ಮಾಡುವ ಕೆಲಸಗಳೆಲ್ಲವುಗಳಲ್ಲಿ ಕಣ್ಣಿಗೆ ತಿಳಿಯದ ಕರ್ಮ ನಮಗಂಟಿಕೊಳ್ಳುತ್ತಿದೆ. ನಾವು ನಿತ್ಯ ಮಾಡುವ ಕೆಲಸಗಳಲ್ಲಿ ಕೆಲವು ಒಳ್ಳೆಯವು, ಕೆಲವು ಕೆಟ್ಟವು ಇರುತ್ತವೆ. ಒಳ್ಳೆಯ ಕೆಲಸಗಳು ಮಾಡುವುದರಿಂದ ಪುಣ್ಯ, ಕೆಟ್ಟ ಕೆಲಸಗಳು ಮಾಡುವುದರಿಂದ ಪಾಪ ನಮಗೆ ತಿಳಿಯದೆಯೇ ನಮ್ಮ ಕರ್ಮಚಕ್ರದಲ್ಲಿ ಸೇರುತ್ತಿರುತ್ತವೆ. ಇದು ದ್ರವ್ಯಯಜ್ಞದ ಸಾರಾಂಶ. ದ್ರವ್ಯಯಜ್ಞದಿಂದ ಸಂಭವಿಸುವ ಕರ್ಮವನ್ನು ನಾಶ ಮಾಡಿಕೊಂಡು, ಜನ್ಮಗಳಿಂದ ಹೊರಬೀಳಬೇಕೆಂದರೆ ತಪ್ಪದೆ ಜ್ಞಾನಯಜ್ಞ ಮಾಡಬೇಕು.

ಜ್ಞಾನಯಜ್ಞ ನಮ್ಮ ಶರೀರದಲ್ಲಿನ ತಲೆಯಲ್ಲಿ ನಡೆಯುತ್ತಿದೆ. ಇದರಲ್ಲಿ ಸಹ ಸುಡಲ್ಪಡುವ ಸಮಿದೆಗಳು, ಸುಡುವ ಅಗ್ನಿ, ಸುಡುವವನು ಮೂವರೂ ಇದ್ದಾರೆ. ಇದರಲ್ಲಿ ಒಂದು ಪಾಪಪುಣ್ಯವೆಂಬ ಕರ್ಮಗಳು ಸುಟ್ಟುಹೋಗುತ್ತಿವೆ. ಎರಡು ಜ್ಞಾನವೆಂಬ ಅಗ್ನಿ (ಜ್ಞಾನಶಕ್ತಿ) ಕರ್ಮಗಳನ್ನು ಸುಟ್ಟುಹಾಕುತ್ತಿದೆ. ಮೂರು ಮಾಡುವವನು ಜೀವಿಯೇ. ಜ್ಞಾನಯಜ್ಞದಲ್ಲಿ ದ್ರವ್ಯಯಜ್ಞದ ಮೂಲಕ ಸಂಭವಿಸುವ ಪಾಪಪುಣ್ಯ ಕರ್ಮಗಳೆಲ್ಲವೂ ನಾಶವಾಗಿಹೋಗುತ್ತವೆ. ಆದ್ದರಿಂದಲೇ ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯ 37ನೇ ಶ್ಲೋ ॥ **ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮಸಾತ್'** ಸರ್ವ ಕರ್ಮಗಳು ಜ್ಞಾನವೆಂಬ ಅಗ್ನಿಯಲ್ಲಿ ಭಸ್ಮವಾಗಿಹೋಗುತ್ತವೆಂದು ಭಗವಂತನು ಹೇಳಿದ್ದಾನೆ.

ಈ ದಿನ ಎಲ್ಲರೂ ದ್ರವ್ಯಯಜ್ಞ ಮಾಡಿ ಕರ್ಮಗಳನ್ನು ಸಂಪಾದಿಸಿ ಕೊಂಡರೂ ಜ್ಞಾನಯಜ್ಞ ಮಾಡಿ ಕರ್ಮಗಳು ಸುಡುವವರು ಅಪರೂಪ. ಎಲ್ಲರ ಶರೀರಗಳ ಹೊಟ್ಟೆಯಲ್ಲಿ ಜಠರಾಗ್ನಿ ಖಾಲಿಯಿಲ್ಲದೆ ಇದೆ. ಆದರೆ

ತಲೆಯಲ್ಲಿ ಜ್ಞಾನಾಗ್ನಿ ಸ್ವಲ್ಪವೂ ಇಲ್ಲದಂತೆ ಹೋಗಿದೆ. ಆದ್ದರಿಂದ ಜ್ಞಾನಯಜ್ಞ ಮಾಡಲಾರದೆ ಹೋಗುತ್ತಿದ್ದಾರೆ. ಕರ್ಮಗಳನ್ನು ಸುಡಲಾರದೆ ಹೋಗುತ್ತಿದ್ದಾರೆ. ನಾವು **'ಯೋಗಿಗಳೆಂದರೆ ಯಾರು'** ಎಂದು ಬರೆದಾಗ ಯೋಗಶಕ್ತಿ (ಜ್ಞಾನಾಗ್ನಿ) ಹೊಂದಿ ಕರ್ಮಗಳನ್ನು ಭಸ್ಮೀಪಟಲ ಮಾಡುವವರೇ ಯೋಗಿಗಳೆಂದು ತಿಳಿಸಿದಾಗ, ನಿಜವಾಗಿ ಅಂತಹವರು ಭೂಮಿಮೇಲೆ ಇದ್ದಾರಾ! ಎಂದು ಆಶ್ಚರ್ಯವಾಗಿ ಪ್ರೊದ್ದುಟೂರು ಎಂಬ ಊರಿನಿಂದ ಒಬ್ಬರು ಪ್ರಶ್ನಿಸಿದ್ದಾರೆ. ದೇವರು ಹೇಳಿದ ಪ್ರಕಾರ ನಡೆದುಕೊಂಡು ಜ್ಞಾನಯಜ್ಞ ಮಾಡಿದರೆ ಕರ್ಮ ಸುಟ್ಟುಹೋಗುತ್ತದೆ. ಭಗವದ್ಗೀತೆಯಲ್ಲಿ ಹೇಳಿದ ಪ್ರಕಾರ ಜ್ಞಾನಯಜ್ಞ ಮಾಡಿದರೆ ಯಾವ ಕಾಲದಲ್ಲಾದರು ಕರ್ಮವನ್ನು ಸುಡುವ ಶಕ್ತಿ ಮಾನವನಿಗಿರುತ್ತದೆ. ವಿಧಾನ ತಿಳಿಯದೆ ನಾವು ಕುಂಟುಬೀಳುತ್ತಿದ್ದೇವೆ. ಆದರೆ ಸಾಮರ್ಥ್ಯವಿಲ್ಲದೆ ಅಲ್ಲ. ನಿಜ ಹೇಳಬೇಕೆಂದರೆ ಬಾಹ್ಯಯಜ್ಞಗಳಲ್ಲಿ ನಮ್ಮನ್ನು ನಿಮಗ್ನ ಮಾಡಿ, ಅಂತರ್ಮುಖವಾಗಿರುವ, ದೇವರು ತಿಳಿಸಿದ ಯಜ್ಞಗಳ ಮೇಲೆ ಧ್ಯಾಸವಿಲ್ಲದೆ ಮಾಡಿದ ನಮ್ಮ ಹಿರಿಯರದು ತಪ್ಪು.

ಜ್ಞಾನಯಜ್ಞ ಮಾಡಬೇಕೆಂದರೆ ನಾವು ಹೊಸದಾಗಿ ಜ್ಞಾನಾಗ್ನಿ ಅನ್ನುವ ಕೆಂಡವನ್ನು ಸಂಪಾದಿಸಿಕೊಳ್ಳಬೇಕು. ಆ ಕೆಂಡ ಜ್ಞಾನಯಜ್ಞ ಮಾಡುತ್ತಿರುವವರ ತಲೆಯಲ್ಲಿರುತ್ತದೆ. ಆದ್ದರಿಂದ ಕೆಂಡ ಇರುವ ಒಲೆಯಿಂದ ಕೆಂಡವಿಲ್ಲದ ಒಲೆಯನ್ನು ಒತ್ತಿಸಿಕೊಂಡಂತೆ, ಜ್ಞಾನಾಗ್ನಿಯನ್ನು ಹೊಂದಿದ ಯೋಗಿಗಳ ಹತ್ತಿರವಿರುವ ಅಗ್ನಿಯನ್ನು ನಮ್ಮ ತಲೆಯಲ್ಲಿ ಹಾಕಿಸಿಕೊಂಡು ಜ್ಞಾನಯಜ್ಞಮಾಡಿ, ಕರ್ಮಬಂಧದಿಂದ ಮುಕ್ತರಾಗಬೇಕು. ಅದಕ್ಕೇ ಜ್ಞಾನಾಗ್ನಿ ಇರುವ ಗುರುಗಳ ಹತ್ತಿರಕ್ಕೆ ಮಾನವನು ಹೋಗಬೇಕಾಗಿದೆ. ಕೆಲವರು ಗುರುಗಳ ಹತ್ತಿರಕ್ಕೆ ಹೋಗುತ್ತಿದ್ದಾರೆ, ಆದರೆ ಜ್ಞಾನಾಗ್ನಿಯನ್ನು ದಾನ ಮಾಡಿಸಿಕೊಳ್ಳುವುದಕ್ಕೆ ಅಲ್ಲ, ಮಂತ್ರಜಪವನ್ನು ಹೇಳಿಸಿಕೊಳ್ಳುವುದಕ್ಕೆ ಮಾತ್ರ ಹೋಗುತ್ತಿದ್ದಾರೆ. ಜ್ಞಾನಾಗ್ನಿ ದಾನವೇ ಉಪದೇಶವೆಂದು ತಿಳಿಯದೆ, ಮಂತ್ರದಾನವೇ ಉಪದೇಶವೆಂದು ಕೊಳ್ಳುತ್ತಿದ್ದಾರೆ. ಈಗಲಾದರೂ ನಮ್ಮ ಕರೆಯಿಂದ ಎಚ್ಚರಗೊಳ್ಳಿ. ಅಧರ್ಮಗಳನ್ನು

ಖಂಡಿಸಿರಿ, ಧರ್ಮಗಳನ್ನು ಆಚರಿಸಿರಿ, ಕುರುಡರಂತೆ ನಂಬಿ ನಡೆಯಬೇಡಿ, ಯೋಚಿಸಿ ಧರ್ಮಗಳನ್ನು ಹೊರಗೆಳೆಯಿರಿ. ನಾನು ಯೋಗಶಾಸ್ತ್ರವಾದ ಭಗವದ್ಗೀತೆ ಆಧಾರವಾಗಿ ಹೇಳಿದ ಮಾತುಗಳಿವು ಎಂದು ಮರೆಯಬೇಡಿ. ಅಸೂಯ ಭಾವವನ್ನು ಬಿಡಿ. ಆತ್ಮ ಔನ್ನತ್ಯವನ್ನು ಹುಡುಕಿ.

**ಯಜ್ಞ:** ಇರುವುದನ್ನು ಇಲ್ಲದಂತೆ ಸುಡುವುದು (ಶರೀರದಲ್ಲಿ ನಡೆಯುತ್ತಿವೆ) ಗೀತೆಯಲ್ಲಿ ಅಕ್ಷರಪರಬ್ರಹ್ಮಯೋಗ – 4ನೇ ಶ್ಲೋಕ

**ದ್ರವ್ಯಯಜ್ಞ :** ಜಠರಾಗ್ನಿಯಲ್ಲಿ ಆಹಾರ ದ್ರವ್ಯಗಳು ಸುಟ್ಟುಹೋಗುವುದು (ಹೊಟ್ಟೆಯಲ್ಲಿ) ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗ – 14ನೇ ಶ್ಲೋಕ

**ಜ್ಞಾನಯಜ್ಞ :** ಜ್ಞಾನಾಗ್ನಿಯಲ್ಲಿ ಕರ್ಮಗಳು ಸುಟ್ಟುಹೋಗುತ್ತವೆ (ತಲೆಯಲ್ಲಿ ನಡೆಯುತ್ತಿದೆ) ಗೀತೆಯಲ್ಲಿ ಜ್ಞಾನಯೋಗ – 37ನೇ ಶ್ಲೋಕ.

**ಮಾಡುವವನು :** ಜೀವಾತ್ಮ

**ಅಧಿಪತಿ :** ಆತ್ಮ

# ಋಣ

ಋಣ ಎಂದರೆ ಬಾಕೀ ಎಂದು ಅರ್ಥ ಇದೆ. ಋಣಗಳು ಎಷ್ಟೋ ವಿಧಗಳಾಗಿ ಇವೆ. ಬಹಳ ವಿಧಗಳಾದ ಋಣಗಳನ್ನು ಎರಡು ವಿಧಗಳಾಗಿ ವಿಭಜಿಸಬಹುದು. ಒಂದು ಪ್ರಪಂಚ ಸಂಬಂಧ ಋಣ. ಎರಡನೆಯದು ಪರಮಾತ್ಮ ಸಂಬಂಧ ಋಣ. ಪ್ರಪಂಚ ಸಂಬಂಧ ಋಣವನ್ನು ಪರಿಶೀಲಿಸಿದರು, ಒಬ್ಬವ್ಯಕ್ತಿ ಮತ್ತೊಬ್ಬ ವ್ಯಕ್ತಿಯಿಂದ ಒಂದು ಫಲಿತವನ್ನು ಪಡೆದು, ಅದಕ್ಕೆ ಮತ್ತೆ ಪ್ರತಿಫಲವಾಗಿ ಕೊಡಬೇಕಾಗಿರುವುದನ್ನು ಬಾಕಿ ಅನ್ನುತ್ತಿದ್ದೇವೆ. ಒಬ್ಬನು ಮತ್ತೊಬ್ಬನಿಂದ ಏನಾದರೂ ಪಡೆಯಬಹುದು. ಅದಕ್ಕೆ ಪ್ರತಿಫಲವಾಗಿ ಏನನ್ನಾದರೂ ಕೊಡಬಹುದು. ಅದು ಕೊಡುವವನು ತೆಗೆದುಕೊಳ್ಳುವವನ ಮಧ್ಯೆ ಮೊದಲೇ

ಒಡಂಬಡಿಕೆಗಳು ಇರುತ್ತವೆ. ಉದಾಹರಣೆಗೆ ಒಬ್ಬನು ಮತ್ತೊಬ್ಬನಿಗೆ ಕಿಲೋ ಬದನೆಕಾಯಿಕೊಟ್ಟಿದ್ದಾನೆಂದುಕೊಳ್ಳಿ. ಅವನು ಬದನೆಕಾಯಿಗಳಿಗೆ ಪ್ರತಿಫಲವಾಗಿ ಐದು ರೂಪಾಯಿಗಳು ಕೊಡಬೇಕೆಂದು ಮೊದಲೇ ಒಪ್ಪಂದ ಮಾಡಿಕೊಂಡಿರುತ್ತಾನೆ. ಮಾಡಿಕೊಂಡ ಒಡಂಬಡಿಕೆಯ ಪ್ರಕಾರ ಬದನೆಕಾಯಿಗಳು ತೆಗೆದುಕೊಂಡವನು ಕೊಟ್ಟವನಿಗೆ ಹಣವನ್ನು ಕೊಡಬೇಕಾಗಿರುತ್ತದೆ. ಕೊಟ್ಟರೆ ಬಾಕೀ ತೀರಿಹೋಗುತ್ತದೆ, ಕೊಡದೆಹೋದರೆ ಬಾಕೀ ಆಗುತ್ತದೆ. ಈ ಪದ್ಧತಿ ಪ್ರಕಾರ ವಸ್ತುರೂಪೇಣ, ಧನರೂಪೇಣ ಅನೇಕರೂಪಗಳಾಗಿ ಒಬ್ಬರಿಗೊಬ್ಬರು ಬಾಕೀ ಇರುವುದು, ತೀರಿಸಿಕೊಳ್ಳುವುದು ನಡೆಯುತ್ತಿದೆ.

ಪ್ರಪಂಚ ಸಂಬಂಧ ಬಾಕೀಗಳು ಎಷ್ಟು ವಿಧಗಳಾಗಿ ಇದ್ದರೂ, ಪರಮಾತ್ಮ ಸಂಬಂಧವಾದ ಬಾಕೀ ಒಂದೇ ಒಂದು ವಿಧವಾಗಿದೆ. ಅದು ಏನೆಂದರೆ! ಒಬ್ಬರಿಂದ ಮತ್ತೊಬ್ಬರು ಜ್ಞಾನ ತಿಳಿದುಕೊಳ್ಳುವುದು ಜ್ಞಾನ ಋಣವಾಗುತ್ತದೆ. ಒಬ್ಬರಿಂದ ಮತ್ತೊಬ್ಬರು ಹೊಸದಾಗಿ ಮೊಟ್ಟಮೊದಲು ತಿಳಿಯಪಡಿಸುವುದು, ಯಾರಿಂದ ಹೇಳಲ್ಪಟ್ಟಿರುವುದು, ಹೊಸದಾದ ಜ್ಞಾನವಿಷಯವನ್ನು ತಿಳಿದುಕೊಳ್ಳುವುದರಿಂದ ಋಣವಾಗುತ್ತಿದೆ. ಮೊದಲೇ ಇತರರಿಂದ ತಿಳಿಯಲ್ಪಟ್ಟ ವಿಷಯವನ್ನು ನಂತರ ಯಾರು ಎಷ್ಟು ಜನರಿಗೆ ತಿಳಿಸಿದರು ಅದು ಬಾಕೀಯಲ್ಲ, ದಾನವಾಗುತ್ತದೆ. ಉದಾಹರಣೆಗೆ ಒಬ್ಬ ಗುರು ಯಾರಿಗೂ ತಿಳಿಯದ ಜ್ಞಾನರಹಸ್ಯವನ್ನು ಮೊದಲು ತಿಳಿಸಿದ್ದಾನೆಂದುಕೊಳ್ಳಿ, ಆ ವಿಷಯವನ್ನು ಮೊದಲು ತಿಳಿದುಕೊಂಡವರು ಆ ಗುರುವಿಗೆ ಋಣದಲ್ಲಿರುತ್ತಾರೆ. ನಂತರ ಅದೇ ಜ್ಞಾನವಿಷಯವನ್ನು ಯಾರು ಯಾರಿಗೆ ತಿಳಿಸಿದರೂ ಅದು ಬಾಕೀಯಲ್ಲ. ಒಬ್ಬರಿಂದ ಮೊದಲು ತಿಳಿದರೂ ಅದು ಬಾಕೀ ಆದಾಗ, ನಂತರ ಹಾಗೆಯೇ ಒಬ್ಬರಿಂದ ಮತ್ತೊಬ್ಬರು ತಿಳಿಯುವುದು ಬಾಕೀಯಲ್ಲದೆ ಮತ್ತೇನಾಗುತ್ತದೆ? ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ಮೊದಲು ಒಬ್ಬರಿಂದ ತಿಳಿಯಲಾದ ವಿಷಯವು ನಂತರ ಎಷ್ಟುಜನರಿಂದ ಎಷ್ಟುಜನರಿಗೆ ತಿಳಿದರೂ, ಅದು ಜ್ಞಾನದಾನವಾಗುತ್ತದೆ

ಹೊರತು ಬಾಕೀಯಾಗುವುದಿಲ್ಲ. ಮೊಟ್ಟಮೊದಲು ಹೊಸದಾಗಿ ತಿಳಿಸಿದಾಗಲೇ ಬಾಕೀ ಆಗುತ್ತದೆ.

ಪರಮಾತ್ಮ ಜ್ಞಾನರಹಸ್ಯಗಳನ್ನು ಮೊದಲು ಸೂರ್ಯನಿಗೆ ತಿಳಿಸಿದ್ದೇನೆಂದು ಗೀತೆಯ ಜ್ಞಾನಯೋಗವೆಂಬ ಅಧ್ಯಾಯದಲ್ಲಿ ತಿಳಿಸಿದ್ದಾನೆ. ನಂತರ ಸೂರ್ಯನು ಮನುವಿಗೂ, ಮನುವು ಇಕ್ಷ್ವಾಕನೆಂಬ ರಾಜನಿಗೂ, ಆ ರಾಜ ಇತರರಿಗೂ ತಿಳಿಸುತ್ತಾ ಪರಂಪರೆಯಾಗಿ ಒಬ್ಬರಿಂದ ಮತ್ತೊಬ್ಬರು ತಿಳಿದುಕೊಂಡಿದ್ದಾರೆ. ಹೀಗೆಷ್ಟುಜನ ತಿಳಿದುಕೊಂಡರೂ, ಮೊದಲು ಪರಮಾತ್ಮನಿಗೆ ಸೂರ್ಯನು ಋಣದಲ್ಲಿದ್ದಾನೆ. ನಂತರ ಅದೇ ಜ್ಞಾನ ಒಬ್ಬರಿಂದ ಒಬ್ಬರಿಗೆ ದಾನವಾಗಿದೆ. ಹೀಗೆ ಅದು ದಾನವಾದರೂ, ದಾನಕ್ಕೆ ಪ್ರತಿದಾನ ಇರಬೇಕು. ಒಬ್ಬನು ಸಕ್ಕರೆನೀರು ಕೊಟ್ಟರೆ ನಿನಗೆ ಅಷ್ಟುಸಾಮರ್ಥ್ಯ ಇಲ್ಲದಿದ್ದರೂ, ನಿನ್ನ ಸಾಮರ್ಥ್ಯಕ್ಕೆ ತಕ್ಕಂತೆ ಉಪ್ಪುನೀರಾದರು ಪ್ರತಿದಾನ ಮಾಡಬೇಕಾಗಿರುತ್ತದೆ. ಒಬ್ಬ ಗುರುವಿನಿಂದ ಜ್ಞಾನದಾನ ಹೊಂದಿದವನು ತನಗೆ ತೋಚಿರುವುದು ದಕ್ಷಿಣೆಯಾಗಿ ಕೊಡುವುದು ಸಾಂಪ್ರದಾಯ. ಈ ಪದ್ಧತಿಯಲ್ಲಿ ಪೂರ್ವದಲ್ಲಿ ಬೋಧಕರು ಶಿಷ್ಯರಿಂದ ನಾಲ್ಕುಸೇವೆಗಳೆಂಬ ದಕ್ಷಿಣೆಗಳು ಪಡೆಯುತ್ತಿದ್ದರು.

ಜ್ಞಾನದಾನ ಹೊಂದಿದವರು ಯಾರಿಂದ ಜ್ಞಾನವನ್ನು ಹೊಂದಿದ್ದಾರೋ ಅವರನ್ನೇ ಗುರುಗಳಾಗಿ ಆರಿಸಿಕೊಳ್ಳುತ್ತಿದ್ದರು. ಅದರಿಂದ ಹೇಳಿದವನು ಗುರು, ಹೇಳಿಸಿಕೊಂಡವನು ಶಿಶುವು (ಶಿಷ್ಯನು) ಆಗುತ್ತಿದ್ದರು. ಜ್ಞಾನಮಾರ್ಗವನ್ನು ತೋರಿಸಿದವನು ಗುರುವೆಂದು, ಆ ಮಾರ್ಗ ಗುರು ಮೂಲಕ ತಿಳಿದವರು ಶಿಷ್ಯರೆಂದು ಲೆಕ್ಕಿಸುತ್ತಿದ್ದರು. ಈ ವಿಧವಾಗಿ ಗುರುಶಿಷ್ಯರ ಸಂಬಂಧ ಬಾಂಧವ್ಯಗಳು ಆದಿಯಿಂದ ಇವೆ. ಮೊದಲು ಏರ್ಪಡಿಸಿದ ಜ್ಞಾನಮಾರ್ಗ ತಿಳಿದವನಾಗಿ ಅದನ್ನು ತಿಳಿಸುವುದರಿಂದ ಇತರರಿಗೆ ಗುರುಗಳಾಗುತ್ತಿದ್ದಾರೆ. ಮಾರ್ಗತಿಳಿದು ಇತರರಿಗೆ ತಿಳಿಸುವವನು ಗುರುವಾದಾಗ ಮೊದಲೇ ಮಾರ್ಗವನ್ನು ಏರ್ಪಡಿಸಿದವನನ್ನು ಏನನ್ನಬೇಕು? ಅದಕ್ಕೆ ಸಮಾಧಾನ ಏನೆಂದರೆ ತಿಳಿದ ಜ್ಞಾನವನ್ನು ತಿಳಿಸುವವನು ಬೋಧಕನು. ಮೊದಲು ತಿಳಿಸಿದವನು ಗುರು.

ಜ್ಞಾನಮಾರ್ಗ ಏರ್ಪಡಿಸಿ ಇದೇ ಮಾರ್ಗ, ಈ ಮಾರ್ಗ ಹೊರತು ದೇವರ ಹತ್ತಿರಕ್ಕೆ ಹೋಗುವಮಾರ್ಗ ಇಲ್ಲವೆಂದು ತಿಳಿಸುವವನು ಗುರುವಾಗುತ್ತಾನೆ. ಆ ಗುರು ಯಾರೆಂದು ಹುಡುಕಿ ನೋಡಿದರು ಮೊದಲು ಯಾರಿಗೂ ತಿಳಿಯದ ಜ್ಞಾನಮಾರ್ಗವನ್ನು ತಿಳಿಸುವ ಗುರು ಪರಮಾತ್ಮ ಆಗಿರುತ್ತಾನೆ. ಈ ವಿಷಯವನ್ನು ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಎಲ್ಲಿ ಯಾರಿಂದ ತಿಳಿಯಲ್ಪಡದ ಜ್ಞಾನ ಮೊಟ್ಟಮೊದಲು ಪರಮಾತ್ಮನಿಂದಲೇ ಹೊರಬೀಳಬೇಕು. ಯಾರಾದರೂ ಎಲ್ಲೂ ಇಲ್ಲದ ಹೊಸ ಜ್ಞಾನ ವಿಷಯ ತಿಳಿದುಕೊಂಡಿದ್ದಾರೆಂದರೆ ಅದು ದಾನವಲ್ಲ, ಬಾಕೀ ಆಗುತ್ತದೆ. ದಾನವಾದರೆ ಸೇವೆಗಳೆಂಬ ದಕ್ಷಿಣೆಗಳಿಂದ ಸರಿಮಾಡಿಕೊಳ್ಳಬಹುದು. ಬಾಕೀ ಆದರೆ ತೆಗೆದುಕೊಂಡಿರುವುದಕ್ಕೆ ಸಮಾನ ಬೆಲೆ ಇರುವುದು ಕೊಡಬೇಕಾಗಿರುತ್ತದೆ. ಹಾಗಾದರೆ ಹೊರತು ಬಾಕೀ ತೀರುವುದಿಲ್ಲ.

ಪ್ರಪಂಚ ವಸ್ತುವಿಗಾದರೆ ಬೆಲೆ ಕಟ್ಟಬಹುದು. ಅದಕ್ಕೆ ಸರಿಯಾದುದು ಕೊಟ್ಟು ಬಾಕೀ ತೀರಿಸಿಕೊಳ್ಳಬಹುದು. ಪರಮಾತ್ಮ ಜ್ಞಾನಕ್ಕೆ ಬೆಲೆ ಕಟ್ಟುವುದಕ್ಕೆ ಸಾಧ್ಯವಾಗುವುದಿಲ್ಲ. ಒಂದು ಹೊಸ ಜ್ಞಾನವಿಷಯ ಬೆಲೆಕಟ್ಟದಷ್ಟು ಬೆಲೆ ಹೊಂದಿರುತ್ತದೆ. ಹಣ ರೂಪದಲ್ಲಿ ಲಕ್ಷಗಳು, ಕೋಟಿಗಳು ಸರಿಹೋಗುವುದಿಲ್ಲ. ವಸ್ತುರೂಪದಲ್ಲಿ ವಜ್ರ ವೈಢೂರ್ಯಗಳು ಸಹ ಸರಿಹೋಗುವುದಿಲ್ಲ. ಅಂತಹ ಜ್ಞಾನವೊಂದರ ಋಣವ್ಹೇಗೆ ತೀರಿಸಿಕೊಳ್ಳಬೇಕು? ನಮ್ಮ ಜೀವನವೆಲ್ಲವೂ ಧಾರೆಯೆರೆದರೂ ತೀರುವುದಲ್ಲ. ಅಷ್ಟು ದೊಡ್ಡ ಬಾಕೀ ತೀರುಸುತ್ತೇವಾ! ಎಂದು ಅನುಮಾನ ಬರಬಹುದು. ನಿಜವೇ ಒಂದು ವಿಧವಾಗಿ ಯೋಚಿಸಿದರೆ ಏನುಮಾಡಿದರೂ ಆ ಋಣ ತೀರುವುದು ಅಲ್ಲ. ಮತ್ತೊಂದು ವಿಧವಾಗಿ ಯೋಚಿಸಿದರೆ ಸ್ವಲ್ಪ ಉಪಾಯ ಇದೆ. ಅದೇನೆಂದರೆ! ಪ್ರಪಂಚದಲ್ಲಿ ಒಬ್ಬನು ಮತ್ತೊಬ್ಬನಿಗೆ ಹತ್ತುಲಕ್ಷಗಳು ಬಾಕೀ ಇದ್ದಾನೆಂದುಕೊಳ್ಳೋಣ. ಬಾಕೀ ತೆಗೆದುಕೊಂಡವನ ಹತ್ತಿರ ಕೇವಲ ಸಾವಿರ ರೂಪಾಯಿಗಳು ಮಾತ್ರ ಇವೆ. ಅಂತಹದರಲ್ಲಿ ಅವನು ಹತ್ತುಲಕ್ಷಗಳ ಬಾಕೀ ತೀರಿಸಲಾರನು. ಹಾಗೆಂದು

ಪೂರ್ತಿಯಾಗಿ ಎಗರಿಸಬಾರದು. ಇರುವುದರಲ್ಲಿ ನ್ಯಾಯವಾಗಿ ಬಾಕೀ ತೀರಿಸಬೇಕೆಂದರೆ ದಿವಾಳಿ ಇಡುವುದೇ ಉಪಾಯ. ದಿವಾಳಿ ಇಟ್ಟು ಕೈಎತ್ತಿದ ನಂತರ ತನಗಿರುವ ಬಾಕಿಯಲ್ಲಿ ರೂಪಾಯಿಗೆ ಪೈಸೆ ಭಾಗವಾದರು, ರೂಪಾಯಿಗೆ ಪೈಸೆ ಸಮಾನವಾದಂತೆ, ಆ ಬಾಕಿ ತೀರಿದಂತೆ. ಇನ್ನು ಅವನು ಬಾಕೀ ಇಲ್ಲದಂತಾಗುತ್ತಾನೆ. ಅದೇ ವಿಧವಾಗಿ ಪರಮಾತ್ಮನಿಗೆ ಜ್ಞಾನಪರವಾಗಿ ಬಾಕೀಬಿದ್ದವರು ಏನುಕೊಟ್ಟರೂ ಆ ಋಣ ತೀರುವುದಿಲ್ಲ. ಆದ್ದರಿಂದ ದಿವಾಳಿ ಇಡಬೇಕಾಗಿದ್ದೆ. ತನಗಿರುವುದು ಸ್ವಲ್ಪವಾದರು ಹೆಚ್ಚಾದರು ಬಾಕೀಗೆ ದಾಮಾಷಾ ಕಟ್ಟಬೇಕಾಗಿದ್ದೆ. ಪ್ರಪಂಚ ಸಂಬಂಧ ಹೊರಗಿನ ಬಾಕೀಯಾದರೆ ಕೋರ್ಟು ತೀರ್ಪು, ಜಮ ಇರುತ್ತದೆ. ಪರಮಾತ್ಮ ಬಾಕೀಗೆ ತೀರ್ಪು ಹೇಗೆಂದು ಯೋಚಿಸಬೇಕಾದ ಅಗತ್ಯವಿಲ್ಲ. ಇಂತಹ ಬಾಕೀಕಟ್ಟಿದವರು ಪೂರ್ವದಲ್ಲಿ ಬಹಳಜನ ಇದ್ದಾರೆ. ಆದ್ದರಿಂದ ಅವರ ವಿಧಾನವೇ ಅನುಸರಿಸಬಹುದು. ತನ್ನೊಂದಿಗೆ ಸಹ ತನಗಿರುವುದೆಲ್ಲ ನಿನ್ನದೇ ಎಂದು ಒಪ್ಪಿಸುವುದೇ ಪರಿಷ್ಕಾರ ವಾಗುತ್ತದೆ. ಮತ್ತು ತನಗೇನಾದರೆ ಇದೆಯೋ ಅದು ನನ್ನದು ಅಲ್ಲ. ಜ್ಞಾನಮಾರ್ಗವನ್ನು ಕಲಿಸಿದವನದೇ ಅಂದುಕೊಳ್ಳುವುದು ತೀರ್ಪಾಗುತ್ತದೆ. ಆಗ ಅದು ಎಷ್ಟು ದೊಡ್ಡಬಾಕೀ ಆದರೂ ತೀರಿದಂತೆ ಆಗುತ್ತದೆ. ಬಹು ಚಿಕ್ಕ ಉಪಾಯದಿಂದ ದೊಡ್ಡ ಬಾಕೀಯನ್ನು ತೀರಿಸಿಕೊಳ್ಳುವುದಕ್ಕೆ ಇದೇ ಉಪಾಯ. ಹೊರಗಿನ ಬಾಕೀಗೆ ದಿವಾಳಿ ಸರಿಹೋದಂತೆ ಒಳಗಿನ ಬಾಕೀಗೆ ನನ್ನದೇನು ಇಲ್ಲ, ನಾನೂ ಸಹ ನಿನ್ನವನೇ, ನನಗಿರುವುದೆಲ್ಲಾ ನಿನ್ನದೇ ಅಂದುಕೊಳ್ಳುವು ದರಿಂದ ಗುರು ಬಾಕೀ ತೀರಿಹೋಗುತ್ತದೆ.

ತಿಳಿದ ಜ್ಞಾನವನ್ನು ತಿಳಿಸುವವರು ಗುರುಗಳು ಅಲ್ಲ, ಅವರು ಬೋಧಕರಾಗುತ್ತಾರೆ. ಅವರು ಉಪದೇಶವನ್ನು ಸಹ ಕೊಡಬಲ್ಲರು. ಮೊದಲು ಜ್ಞಾನಮಾರ್ಗವನ್ನು ತೋರಿಸಿದವನು ಗುರು, ಆತನು ಉಪದೇಶಕೊಡುವುದಿಲ್ಲ. ಯಾವ ಸಂದರ್ಭಗಳಲ್ಲಿಯಾದರೂ ಉಪದೇಶ ಯಾರಿಗಾದರೂ ಕೊಟ್ಟಂತಾದರೆ, ಅದು ಬೋಧಕರಾದವರಿಗೆ ಮಾರ್ಗದರ್ಶಕತೆ ಗೋಸ್ಕರವೇ ಯಾಗಲಿ ಬೇರೆ

ಅಲ್ಲ. ಬೋಧಕನು ಈ ವಿಧವಾಗಿ ಉಪದೇಶಕೊಡಬೇಕೆಂದು ತೋರಿಸುವು ದಕ್ಕೋಸ್ಕರ ಹೊರತು ಉಪದೇಶಕೊಡುವುದು ಆತನ ಕೆಲಸವಲ್ಲ. ಬೋಧಕರಿಗೆ ನೂರಾರೂ, ಸಾವಿರಾರೂ, ಲಕ್ಷಗಳ ಸಂಖ್ಯೆಯಲ್ಲಿ ಶಿಷ್ಯರಿರಬಹುದು. ಗೀತೆಯನ್ನು ಬೋಧಿಸಿದ ಶ್ರೀಕೃಷ್ಣನಿಗೆ ಶಿಷ್ಯರಿಲ್ಲವೆಂದು ಗ್ರಹಿಸಬಹುದು. ಏಕೆಂದರೆ ಆತನು ಬೋಧಕನಲ್ಲ. ಹೊಸ ಜ್ಞಾನವನ್ನು ತಿಳಿಸಿದ ಗುರು ಶ್ರೀಕೃಷ್ಣನು.

ತಿಳಿದ ಜ್ಞಾನಮಾರ್ಗವನ್ನು ತಿಳಿಸುವವರು ಬೋಧ ಗುರುಗಳಾದರೆ, ಪ್ರಪಂಚದಲ್ಲಿ ಎಲ್ಲರಿಗೂ ವರ್ತಿಸುವ, ಯಾರಿಗಾದರೂ ಕೆಲಸಕ್ಕೆಬರುವ ಜ್ಞಾನಮಾರ್ಗವನ್ನು ಏರ್ಪಡಿಸಿದವನು ಗುರುವಾಗುತ್ತಾನೆ ಮತ್ತು ಜಗದ್ಗುರು ವಾಗುತ್ತಾನೆ. ಜಗತ್ತಿಗೆಲ್ಲ ಶಾಸನವಾಗಿ ಅನ್ವಯಿಸುವ ಮಾರ್ಗವನ್ನು ಮೊದಲು ತಿಳಿಸಿದವನು ಜಗದ್ಗುರುವಾದರೆ, ನಂತರ ಆ ವಿಧಾನವನ್ನು ತಿಳಿಸುವವನು ಕೇವಲ ಬೋಧ ಗುರುಗಳು ಮಾತ್ರವೇ ಆಗುತ್ತಾರೆ. ಮೊದಲು ತಿಳಿಸಿದ ಜ್ಞಾನವನ್ನನುಸರಿಸಿ ಗುರು ಮತ್ತು ನಂತರ ತಿಳಿಸುವ ಜ್ಞಾನವನ್ನನುಸರಿಸಿ ಬೋಧಕನು ಅಥವಾ ಬೋಧಗುರುವೆಂಬ ಮಾತು ಭೂಮಿಮೇಲೆ ಇರುತ್ತದೆ. ಶಿಷ್ಯರ ಸಂಖ್ಯೆಯನ್ನನುಸರಿಸಿ ಗುರು, ಅನ್ನುವಮಾತು ಇರುವುದಿಲ್ಲ. ಗುರುಗಳ ಹತ್ತಿರ ಜ್ಞಾನವನ್ನು ತಿಳಿದುಕೊಳ್ಳುವುದು ಜ್ಞಾನಋಣವಾಗುತ್ತದೆ. ಬೋಧಕರತ್ತಿರ ಜ್ಞಾನವನ್ನು ಪಡೆಯುವುದು ಜ್ಞಾನದಾನವಾಗುತ್ತದೆ. ಬೋಧಗುರುಗಳ ಹತ್ತಿರ ವಿರುವ ಜ್ಞಾನ ಒಬ್ಬರಿಂದ ಮತ್ತೊಬ್ಬರಿಗೆ ಪರಂಪರೆಯಾಗಿ ಬರುವುದು. ನಿಜಗುರು ಹತ್ತಿರವಿರುವ ಜ್ಞಾನ ಪರಂಪರೆಯಲ್ಲದಿರುವುದು, ಆತನಿಂದಲೇ ಆರಂಭವಾಗುವುದೆಂದು ತಿಳಿದುಕೊಳ್ಳಬೇಕು.

ಬೋಧ ಗುರುಗಳ ಜ್ಞಾನಕ್ಕೆ ಪ್ರತಿಫಲವಾಗಿ ಮಾಡುವುದು ದಕ್ಷಿಣೆ ಯಾಗುತ್ತದೆ. ಇಲ್ಲಿ ಬೋಧಕನು ಆತನಿಗೆ ಶಿಷ್ಯನೆಂಬುವವನು ಇದ್ದಾನೆ. ಆದ್ದರಿಂದ ಬೋಧಗುರುವಿಗೆ ಶಿಷ್ಯನು ಸೇವೆಗಳು ಮಾಡಬಹುದು. ಅಸಲಾದ ಜಗದ್ಗುರು ವಿನೊಂದರ ಜ್ಞಾನಕ್ಕೆ ಪ್ರತಿಫಲವಾಗಿ ಸೇವೆಗಳು ಮಾಡುವುದೆಂಬುವುದು ಇರುವುದಿಲ್ಲ. ಏಕೆಂದರೆ ಇಲ್ಲಿ ಶಿಷ್ಯನೆಂಬುವವನೇ ಇರುವುದಿಲ್ಲ. ನಾನು ಬೇರೆ

ಎಂಬ ಭಾವನೆಯೇ ಇರಬಾರದು. ತನ್ನನ್ನು ತಾನು ಸಮರ್ಪಿಸಿಕೊಂಡು ನಾನು ಇದ್ದೇನೆಂದು, ನನ್ನದು ನನ್ನ ಆಸ್ತಿ ಇದೆಯೆಂಬ ಭಾವವೇ ಮನಸ್ಸಿನಲ್ಲಿ ಇರಬಾರದು. ಆದ್ದರಿಂದ ಜಗದ್ಗುರುವಿನ ಹತ್ತಿರ ಸರ್ವವು ಸಮರ್ಪಣೆ ಹೊರತು ಸೇವೆಗಳೆನ್ನುವವು ಇರುವುದಿಲ್ಲ. ಹಾಗಾದರೇನೆ ಜ್ಞಾನಋಣ ತೀರಿದಂತಾಗುತ್ತದೆ.

# ತಂದೆ (ಅಬ್ಬ) – ಆಚಾರ

ಅಬ್ಬ ಎಂದರೆ ತಂದೆ ಎಂದು ಅರ್ಥವಿದ್ದರೂ ಆಧ್ಯಾತ್ಮಿಕ ಅರ್ಥದಲ್ಲಿ ಪರಮಾತ್ಮ ಎಂದು ತಿಳಿದುಕೊಂಡಿದ್ದೇವೆ. ಬ್ರಹ್ಮ ಎಂದರೆ ದೊಡ್ಡದೆಂದು ಅರ್ಥ ಇರುವಾಗ ಆಧ್ಯಾತ್ಮಿಕ ಅರ್ಥದಿಂದ ಪರಮಾತ್ಮ ಎಂದು ಸಹ ತಿಳಿದುಕೊಂಡಿದ್ದೇವೆ. ಪರಮಾತ್ಮ ಜ್ಞಾನದ ಪ್ರಕಾರ ನಡೆದುಕೊಂಡವನು ಬ್ರಹ್ಮವೊಂದರ ಆಚರಣೆ ಆಚರಿಸಿದವನಾಗುತ್ತಾನೆ. ಅಂತಹವನು ಬ್ರಹ್ಮವೊಂದರ ಆಚರಣೆ ಆಚರಿಸಿ ದವನಾದ್ದರಿಂದ ಅವನನ್ನು ಬ್ರಹ್ಮಚಾರಿ ಎನ್ನುತ್ತಿದ್ದಾರೆ. ಬ್ರಹ್ಮಚಾರಿ ಎಂದರೆ ಸ್ತ್ರೀ ಸಾಂಗತ್ಯ ಮಾಡದವನೆಂದು ಸಹ ಪ್ರಪಂಚದಲ್ಲಿ ಬಾಹ್ಯ ಅರ್ಥವಿದೆ. ಹಾಗೆಂದು ಹೆಂಗಸರ ಸಾಂಗತ್ಯ ಮಾಡದವ ನನ್ನು, ವಿವಾಹ ಆಗದವನನ್ನು ಬ್ರಹ್ಮಚಾರಿ ಎನ್ನಬಾರದು. ಇಲ್ಲಿ ದೈವಿಕ ಜ್ಞಾನ ಅರ್ಥದ ಪ್ರಕಾರ ಪುರುಷನೆಂದರೆ ಪರಮಾತ್ಮನೆಂದು, ಸ್ತ್ರೀ ಎಂದರೆ ಪ್ರಕೃತಿಯೆಂದು ಅರ್ಥಮಾಡಿಕೊಳ್ಳಬೇಕು. ಪ್ರಕೃತಿಗೆ ಸಂಬಂಧಿಸಿದ ವಿಷಯಗಳಲ್ಲಿ ಸಂಬಂಧಪಡದೆ ಕೇವಲ ಪರಮಾತ್ಮ ವಿಷಯಗಳ ಮೇಲೆ ಇರುವವನನ್ನು ಬ್ರಹ್ಮಚಾರಿ ಅನ್ನಬಹುದು. ಪ್ರಕೃತಿಯೆಂಬ ಸ್ತ್ರೀ ಸಂಬಂಧ ಇಲ್ಲದವನು ಬ್ರಹ್ಮಚಾರಿ ಎಂದು ದೊಡ್ಡವರೆನ್ನುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಆ ಅರ್ಥವನ್ನು ಬಿಟ್ಟು ಬಾಹ್ಯ ಪ್ರಪಂಚದಲ್ಲಿ ಹೆಂಗಸರ ಸಂಬಂಧ ಇಲ್ಲದವನನ್ನು ಬ್ರಹ್ಮಚಾರಿ ಎನ್ನುತ್ತಿದ್ದಾರೆ. ಆಧ್ಯಾತ್ಮಿಕದ ಪ್ರಕಾರ ಹಾಗೆನ್ನುವುದು ತಪ್ಪೆಂದು, ಸ್ತ್ರೀತತ್ತ್ವವಾದ ಪ್ರಕೃತಿಜೊತೆ ಸಂಬಂಧ ಇಲ್ಲದವನು ನಿಜವಾದ ಬ್ರಹ್ಮಚಾರಿ ಎಂದು ತಿಳಿಯಬೇಕು.

ಬ್ರಹ್ಮಚಾರಿ ಎಂದರೆ ಬ್ರಹ್ಮವೊಂದರ ಆಚರಣೆ ಆಚರಿಸುವವನೆಂದು ತಿಳಿದುಕೊಂಡಿದ್ದೇವೆ. ಹಾಗೆ ಪರಮಾತ್ಮ ಆಚರಣೆ ಆಚರಿಸುವವನನ್ನು ಬ್ರಹ್ಮಚಾರಿ ಅನ್ನುವುದಲ್ಲದೇ ಅಬ್ಬಾಚಾರಿ ಎಂದು ಸಹ ಅನ್ನುತ್ತಿದ್ದರು. ಅಬ್ಬ ಎಂದರೆ ಪರಮಾತ್ಮವಾದ್ದರಿಂದ ಬ್ರಹ್ಮಚಾರಿ, ಅಬ್ಬಾಚಾರಿ ಇಬ್ಬರು ಒಂದೇ ಎಂದು ತಿಳಿಯಬೇಕು. ಈಗ ಬ್ರಹ್ಮಾಚಾರ, ಅಬ್ಬಾಚಾರ ಎರಡು ಒಂದೇಯೆಂದು ತಿಳಿದುಹೋಗಿದೆ ಅಲ್ಲವೆ! ಈಗ ನಾವು ಕೆಲವು ಸಾವಿರ ವರ್ಷಗಳ ಹಿಂದಕ್ಕೆ ಹೋಗಿ ನೋಡೋಣ. ಅಂದಿನ ಪೂರ್ವಕಾಲದಲ್ಲಿ ಪರಮಾತ್ಮ ಜ್ಞಾನ ತಿಳಿದವರು ಅವರ ಬುದ್ಧಿಯನ್ನೆಲ್ಲ ಪರಮಾತ್ಮ ವಿಷಯಗಳ ಮೇಲೆ ಉಪಯೋಗಿಸುತ್ತಿದ್ದರು. ಅವರ ಬುದ್ಧಿ ಪ್ರಾವೀಣ್ಯತೆಯೆಲ್ಲವೂ ಪರಮಾತ್ಮ ವಿಷಯದ ಮೇಲೆಯೇ ಇರುತ್ತಿತ್ತು. ಪ್ರಪಂಚ ವಿಷಯಗಳಲ್ಲಿ ಅವರ ಬುದ್ಧಿ ಪ್ರಾವೀಣ್ಯತೆ ಇರುತ್ತಿರಲಿಲ್ಲ. ಇತರರರಂತೆ ಹಣ ಸಂಪಾದಿಸದೆ ಹೋಗುತ್ತಿದ್ದರು. ಎಷ್ಟೋಕಡೆ ಎಲ್ಲರನ್ನು ನಂಬಿ ಮೋಸಹೋಗುತ್ತಿದ್ದರು. ಪ್ರಾವೀಣ್ಯತೆಯಿಂದ ಮಾತನಾಡುವುದು ತಿಳಿದಿಲ್ಲ. ಎಷ್ಟೋಕಡೆ ತಪ್ಪು ಕೆಲಸಗಳು ಮಾಡುತ್ತಿದ್ದರು. ಅಬ್ಬಾಚಾರ ಇರುವವರು ಪ್ರಪಂಚದಲ್ಲಿ ಸಾಧಾರಣ ಮನುಷ್ಯರಿಗಿಂತ ಬುದ್ಧಿಯಲ್ಲಿ ಕಡಿಮೆ ಸ್ಥಾನದಲ್ಲಿ ಕಾಣಿಸುತ್ತಿದ್ದರು. ಹಾಗೆ ಅನೇಕ ವಿಷಯಗಳಲ್ಲಿ ಬುದ್ಧಿ ಪ್ರಾವೀಣ್ಯತೆ ಇಲ್ಲದವರನ್ನು ನೋಡಿ, ಬಹಳಜನ ಆತನು ಅಬ್ಬಾಚಾರದಲ್ಲಿ ಇದ್ದಾನೆ ಆದ್ದರಿಂದ ಅವನಿಗೆ ಸರಿಯಾಗಿ ತಿಳಿದಿಲ್ಲ ಅನ್ನುತ್ತಿದ್ದರು. ಈ ಕಾಲದಲ್ಲಿ ಸಾರಾಯಿ ಕುಡಿದವನ್ಯಾರಾದರು ತಪ್ಪಾಗಿ ಮಾತನಾಡಿದರೆ **ಕುಡಿದವನು ಅವನತ್ತಿರ ಏನು** ಅನ್ನುವಂತೆ, ಆ ಕಾಲದಲ್ಲಿ ಪರಮಾತ್ಮ ಆಚರಣೆ ಇರುವವರು ಅಥವಾ ಅಬ್ಬಾಚಾರಿಗಳು ಏನಾದರೂ ತಪ್ಪುಮಾಡಿದಾಗಾಗಲಿ, ಮೋಸಹೋದಾಗಾಗಲಿ, ಸರಿಯಾಗಿ ಮಾತನಾಡ ದಿರುವಾಗಾಗಲಿ, **"ಅವನು ಅಬ್ಬಾಚಾರದಲ್ಲಿ ಬಿದ್ದಿದ್ದಾನೆ ಅವನದೇನೂ ಇಲ್ಲ"** ಎನ್ನುತ್ತಿದ್ದರು. ಅದೇ ವಿಧವಾಗಿ ಸ್ವಲ್ಪಕಾಲ ಕಳೆದಂತೆ ಕಾಲಕ್ರಮವಾಗಿ ಅಬ್ಬಾಚಾರ ಎನ್ನುವ ಪದ **ಬೊಬ್ಬಾಚಾರ** ಎನ್ನುವ ಪದವಾಗಿ ಬದಲಾಗಿಹೋಗಿದೆ. ಹೀಗೆ ಅಬ್ಬಾಚಾರ ಅನ್ನುವಪದವೊಂದರ ಅರ್ಥ ಪೂರ್ತಿಯಾಗಿ ಬದಲಾಗಿ

ಬೊಬ್ಬಾಚಾರ ಅನ್ನುವುದಲ್ಲದೆ, ದೈವಜ್ಞಾನ ಇಲ್ಲದ ತಿಳುವಳಿಕೆ ಇಲ್ಲದವನನ್ನು ಬೊಬ್ಬಾಚಾರದಲ್ಲಿ ಬಿದ್ದಿದ್ದಾನೆನ್ನುವುದು ನಡೆಯುತ್ತಿದೆ.

ಪೂರ್ವಕಾಲದಲ್ಲಿ ಯುಕ್ತವಯಸ್ಸಿನಲ್ಲಿ ಪ್ರಪಂಚ ವಿಷಯಗಳಲ್ಲಿ ಕಾಲ ಕಳೆದ ಅವರು, ವೃದ್ಧಾಪ್ಯ ವಯಸ್ಸಿನಲ್ಲಿ ಪರಮಾತ್ಮ ವಿಷಯಗಳ ಮೇಲೆ ಹೋಗುತ್ತಿದ್ದರು. ಆದ್ದರಿಂದ ಅಂತಹವರನ್ನು ವಯಸ್ಸಾದ ಮೇಲೆ ಬೊಬ್ಬಾಚಾರ ದಲ್ಲಿ ಬಿದ್ದಿದ್ದಾನೆನ್ನುತ್ತಿದ್ದರು. ಪ್ರಸ್ತುತ ಕಾಲದಲ್ಲಿ ವೃದ್ಧಾಪ್ಯದಲ್ಲಿ ದೈವಜ್ಞಾನದಲ್ಲಿ ಇಲ್ಲದಿದ್ದರೂ ಸ್ವಲ್ಪ ತಪ್ಪಾಗಿ ಮಾತನಾಡಿದರು ಅವನನ್ನು ಬೊಬ್ಬಾಚಾರದಲ್ಲಿ ಬಿದ್ದಿದ್ದಾನೆಂದು ಅನ್ನುತ್ತಿದ್ದಾರೆ. ಸ್ವಲ್ಪ ಚಿಕ್ಕ ವಯಸ್ಸಿನಲ್ಲಿಯೇ ಯಾವುದೋ ಒಂದು ವಿಷಯದಲ್ಲಿ ತಪ್ಪು ಮಾಡಿದಾಗ ಇವನಿಗೆ ಈಗಲೇ ಬೊಬ್ಬಾಚಾರ ಹಿಡಿದಿದೆಂದು ಸಹ ಅನ್ನುತ್ತಿದ್ದಾರೆ. ಪ್ರಸ್ತುತ ಕಾಲದಲ್ಲಿ ಬೊಬ್ಬಾಚಾರ ಎಂದರೆ ತಿಳುವಳಿಕೆ ಕಡಿಮೆ ಎಂಬ ಭಾವವಿದೆ. ಅದೇ ಪೂರ್ವಕಾಲದಲ್ಲಿ ಆದರೆ ಪ್ರಪಂಚದಲ್ಲಿ ತಿಳುವಳಿಕೆ ಕಡಿಮೆ, ಪರಮಾತ್ಮನಲ್ಲಿ ಪೂರ್ತಿ ಆಚರಣೆ ಎಂಬ ಭಾವವಿತ್ತು. ನೋಡಿದಿರಾ ಪೂರ್ವಕಾಲಕ್ಕೂ ಈ ಕಾಲಕ್ಕೂ ಎಷ್ಟು ವ್ಯತ್ಯಾಸ ಬಂದಿದೆಯೋ. ಯಾವುದು ಏನಾದರೂ ಅಬ್ಬಾಚಾರವೆನ್ನುವ ಮಾತು ಬೊಬ್ಬಾ ಚಾರವೆಂಬ ಮಾತಾಗಿ ಈಗಲೂ ಉಳಿದಿರುವುದಕ್ಕೆ ಸಂತೋಷಿಸಬೇಕು. ಪೂರ್ವದಲ್ಲಿ ಈ ವಿಷಯವಿತ್ತೆಂಬ ನಿರೂಪಣೆಗೆ ಈದಿನ ಬೊಬ್ಬಾಚಾರವೆಂಬ ಮಾತು ಉಳಿದಿದೆ.

# ವಾಯುವು - ಆಯುವು

ಪಂಚಭೂತಗಳಲ್ಲಿ ಆಕಾಶ ಸ್ಪರ್ಶಕ್ಕೂ ಸಹ ಸಿಗುವುದಿಲ್ಲ. ದೃಷ್ಟಿಗು ಸಹ ಸಿಗದ ಖಾಲಿ ಬಯಲು, ಆದ್ದರಿಂದ ಅದು ಮೊದಲ ಸ್ಥಾನ ವಹಿಸಿದೆ. ಎರಡನೆಯದಾದ ವಾಯುವು ಕಣ್ಣಿಗೆ ಕಾಣಿಸದೆ ಹೋದರೂ ಸ್ಪರ್ಶಕ್ಕೆ ತಿಳಿಯಲ್ಪಡುತ್ತಿದೆ. ಮೂರನೆಯದು ಅಗ್ನಿ ಬಣ್ಣ ಆಕಾರ ಇರುವುದಾಗಿದ್ದು

ಸ್ಪರ್ಶಕ್ಕೂ, ದೃಷ್ಠಿಗು ತಿಳಿಯಲ್ಪಡುತ್ತಿದೆ. ನಾಲ್ಕನೆಯದಾದ ನೀರು ದೃಷ್ಠಿ, ಸ್ಪರ್ಶ, ರುಚಿ ಸಹ ತಿಳಿಯುತ್ತಿದೆ. ಐದನೆಯದಾದ ಭೂಮಿ ದೃಷ್ಠಿ ಸ್ಪರ್ಶಕ್ಕೆ ರುಚಿಯೇ ಅಲ್ಲದೆ ಮೂಗಿಗೆ ವಾಸನೆಯಾಗಿ ಸಹ ತಿಳಿಯುತ್ತಾ ಕೈಯಿಗೂ ಸಹ ಸಿಗುತ್ತಿದೆ. ಇವುಗಳಿಗು ಜೀವಿಗಳಿಗು ಇರುವ ಸಂಬಂಧದಿಂದಲೇ ಅವುಗಳ ವರಸೆಕ್ರಮ ಏರ್ಪಟ್ಟಿದೆ ಎಂದು ತಿಳಿಯಬೇಕು.

ಮಾನವನ ಶರೀರದಲ್ಲಿ ಈ ಐದು ಭಾಗಗಳು ಒಳಗೊಂಡಿವೆ. ಇವು ಶರೀರದಲ್ಲಿದ್ದು ಒಂದೊಂದು ಒಂದು ಪ್ರತ್ಯೇಕತೆ ಹೊಂದಿ ಅವುಗಳ ಕೆಲಸಗಳು ಅವು ನಿರ್ವಹಿಸುತ್ತಾ, ಶರೀರ ಆರೋಗ್ಯ ಅನಾರೋಗ್ಯ ಗಳಿಗೂ ಸಹ ಕಾರಣವಾಗಿದ್ದು, ಮಾನವನ ಜೀವನವನ್ನು ಸಾಗಿಸುವಂತೆ ಮಾಡುತ್ತಿವೆ. ಇದರಲ್ಲಿ ಕಾಣಿಸದ ಖಾಲಿ ಪ್ರದೇಶವಾಗಿ ಜೀವಿ ಇರುವಾಗ, ಆ ಜೀವಿಯ ಜೀವನಕಾಲ ವನ್ನು ಅಳೆಯುವ ಅಳತೆಮಾಪಕವಾಗಿ ವಾಯುವಿದೆ. ಎಣ್ಣೆಯನ್ನು ಅಳೆಯುವುದಕ್ಕೆ ಲೀಟರ್, ಬಟ್ಟೆಗಳನ್ನು ಅಳೆಯುವುದಕ್ಕೆ ಮೀಟರ್‌ಗಳು ಹೇಗೆ ಇವೆಯೋ, ಹಾಗೆ ಒಂದು ಶರೀರದಲ್ಲಿನ ಜೀವಿಯ ಜೀವನಕಾಲವನ್ನು ಅಳೆಯುವುದಕ್ಕೆ ವಾಯುವು ಶ್ವಾಸ ಅನ್ನುವ ಅಳತೆಹೊಂದಿದೆ.

ಸೀರೆಯಾದರೆ ಇಷ್ಟು ಉದ್ದ, ಪಂಚೆಯಾದರೆ ಇಷ್ಟು ಉದ್ದ, ಟವಲಾದರೆ ಇಷ್ಟೇ ಉದ್ದ ಇರಬೇಕೆಂದು ಹೇಗೆ ಅಳತೆಗಳಿವೆಯೋ ಹಾಗೆ ಮನುಷ್ಯನಾದರೆ ಇಷ್ಟುಕಾಲ, ನಾಯಿಯಾದರೆ ಇಷ್ಟೇ ಕಾಲ, ಸೊಳ್ಳೆಯಾದರೆ ಮತ್ತೆ ಇಷ್ಟೇ ಕಾಲವೆಂದು ಜೀವನಕಾಲದಲ್ಲಿ ವ್ಯತ್ಯಾಸಗಳಿವೆ. ಒಂದೊಂದು ಜೀವರಾಶಿಗೆ ಒಂದೊಂದು ವಿಧವಾಗಿ ಆಯುವೊಂದರ ವ್ಯತ್ಯಾಸಗಳಿವೆ ಎಂಬುದು ಎಲ್ಲರಿಗೂ ತಿಳಿದ ವಿಷಯವೇ. ಮಾನವನಿಗೆ ನೂರುವರ್ಷ, ಎತ್ತಿಗೆ ಇಪ್ಪತ್ತುವರ್ಷ, ಸೊಳ್ಳೆಗೆ ಏಳು ದಿನಗಳು ಅನ್ನುವಂತೆ ಸ್ವಲ್ಪಮಟ್ಟಿಗೆ ಅವುಗಳ ಆಯುವು ನಿರ್ಣಯಿ ಸಲ್ಪಟ್ಟಿದರೂ, ಅವವುಗಳ ಕರ್ಮಾನುಸಾರ ಮನುಷ್ಯನು ನೂರುವರ್ಷ ಬದುಕುತ್ತಾನೆಂಬ ನಂಬಿಕೆ ಇಲ್ಲ. ಸೊಳ್ಳೆ ಏಳು ದಿನಗಳು ಬದುಕುತ್ತದೆಂದು

ನಂಬಿಕೆಯೂ ಇಲ್ಲ. ಪ್ರಮಾದವಶಾತ್ತು ಕರ್ಮದ ಪ್ರಕಾರ ಮನುಷ್ಯ ಆರು ದಿನಗಳಿಗೆ ಮರಣಿಸಬಹುದು. ಸೊಳ್ಳೆ ಮೂರು ದಿನಗಳವರೆಗು ಜೀವಿಸಬಹುದು.

ಕರ್ಮಪ್ರಕಾರ ಪ್ರತಿಯೊಂದು ಮೊದಲೇ ನಿರ್ಣಯಿಸಲ್ಪಟ್ಟಂತೆ, ಯಾರು ಎಷ್ಟುಕಾಲ ಬದುಕಬೇಕೆಂಬುವುದು ಸಹ ನಿರ್ಣಯಿಸಲ್ಪಟ್ಟಿದೆ. ಆ ನಿರ್ಣಯವು ಶ್ವಾಸವೆಂಬ ಅಳತೆಯಿಂದ ಇದೆ. ಶ್ವಾಸಕ್ಕೆ ಆಧಾರರೂಪವಾದುದು ವಾಯುವು. ಆದ್ದರಿಂದ ಪ್ರತಿಯೊಬ್ಬನಿಗು ಜೀವನಕಾಲವೊಂದರ ಉದ್ದ ವಾಯುವಿನಿಂದ ತಯಾರುಮಾಡಲಾಗಿದೆ. ಎಷ್ಟು ಶ್ವಾಸಗಳ ವಾಯುವು ಅವನಿಗೆ ಇರಬೇಕೋ ಕರ್ಮದಿಂದ ಮೊದಲೇ ನಿರ್ಣಯಿಸಲ್ಪಟ್ಟಿದೆ.

ಮಾನವನ ಜೀವನಕಾಲ ವಾಯುವಿನಿಂದಲೇ ನಿರ್ಣಯಿಸಲ್ಪಟ್ಟಿದೆ. ಆದ್ದರಿಂದ ಇಂಥವನೊಂದರ ವಾಯುವು ಎಷ್ಟು ಎಂದು ನೋಡಬೇಕಾಗಿರುವಾಗ ಅದನ್ನು ಕುರಿತು ಜ್ಯೋತಿಷ್ಯನನ್ನು ಕೇಳುತ್ತಿದ್ದರು. ಜ್ಯೋತಿಷ್ಯನು ಜ್ಯೋತಿಷ್ಯಶಾಸ್ತ್ರದ ಪ್ರಕಾರ ಲಗ್ನಕ್ಕೆ ಎಂಟನೆಯ ಮನೆಯನ್ನು ನೋಡಿ, ಅಲ್ಲಿನ ಗ್ರಹಗಳ ಸ್ಥಿತಿಗತಿಗಳನ್ನನುಸರಿಸಿ ಇವನ ಆಯುವು ಇಷ್ಟೇ ಇದೆ, ಇವನು ಯುಕ್ತವಯಸ್ಸಿನಲ್ಲಿ ಹೋಗುತ್ತಾನೆಂದೋ, ವೃದ್ಧಾಪ್ಯದಲ್ಲಿ ಹೋಗುತ್ತಾನೆಂದೋ ಹೇಳುತ್ತಿದ್ದರು. ಇದನ್ನನುಸರಿಸಿ ನೋಡಿದಾಗ ಮಾನವನಿಗೆ ನಿರ್ಣಯಿಸಲ್ಪಟ್ಟಿರುವ ವಾಯುವೇ ಈ ದಿನ ಎಲ್ಲರ ಬಾಯಲ್ಲಿ ಆಯುವು ಎಂದು ಕರೆಯಲ್ಪಡುತ್ತಿದೆ ಎಂದು ತಿಳಿದಿದೆ. ಇವನ ವಾಯುವೆಷ್ಟು ಎಂದು ಈದಿನ ಕೇಳುತ್ತಿಲ್ಲ. ಇವನ ಆಯುವೆಷ್ಟು ಎಂದು ಕೇಳುತ್ತಿದ್ದೇವೆ. ವಾಯುವು ಎನ್ನುವ ಪದವು ಆಯುವು ಎನ್ನುವ ಪದವಾಗಿ ರೂಪಾಂತರ ಹೊಂದಿದೆ. ವಾಯುವು ಎನ್ನುವ ಪದದಲ್ಲಿನ ಮೊದಲ ಅಕ್ಷರವಾದ ವಾ ನಲ್ಲಿ ವ+ಆ ಎರಡು ಶಬ್ಧಗಳು ಅಡಗಿವೆ. ವಾಯುವಿನಲ್ಲಿ ಮೊದಲ "ವ" ಹೋಗಿ ಎರಡನೇ "ಆ" ಮಾತ್ರ ಉಳಿದಿರುವುದರಿಂದ **ಆಯುವು** ಎಂದು ಹೇಳಲಾಗುತ್ತಿದೆ. ಮೊದಲಿನ **ವ** ಕಾರವನ್ನು ಬಿಟ್ಟು "ಆ" ಕಾರದಿಂದಲೇ ಹೇಳುವ **ಆಯುವು** ನಿಜಕ್ಕೆ **ವಾಯುವು** ಎಂದು ತಿಳಿಯಬೇಕು.

ನಮ್ಮ ಶರೀರದಲ್ಲಿ ಎಲ್ಲರಿಗೂ ತಿಳಿಯುವಂತೆ ವಾಯುವು ಶ್ವಾಸರೂಪ ವಾಗಿ ಇದೆ. ಆ ವಾಯುವು ಶ್ವಾಸ ಅನ್ನುವ ಅಳತೆ ಪ್ರಕಾರ ಮುಗಿದುಹೋಗುತ್ತಲೇ ಇದೆ. ಶ್ವಾಸ ಮುಗಿದುಹೋದಂತೆಲ್ಲ ನಮಗೆ ನಿರ್ಣಯಿಸಲ್ಪಟ್ಟ ವಾಯುವು ಮುಗಿದುಹೋಗುತ್ತಲೇ ಇದೆ. ಅಂದರೆ ಪ್ರತಿ ಶ್ವಾಸಕ್ಕು ನಾವು ಮೃತ್ಯುವಿಗು ಸ್ವಲ್ಪ ಹತ್ತಿರವಾಗುತ್ತಿದ್ದೇವೆಂದು ತಿಳಿಯುತ್ತಿದೆ. ಆದರೆ ನಮ್ಮ ವಾಯುವಿನ ಮೇಲೆ ಯಾರಿಗೂ ಧ್ಯಾಸವಿಲ್ಲ. ವಾಯುವು ಕ್ಷೀಣಿಸುತ್ತಿದೆಯೆಂಬ ಜಾಗ್ರತೆ ಸ್ವಲ್ಪವೂ ಇಲ್ಲ. ಅದು ಕ್ಷಿಣಿಸಿದಂತೆಲ್ಲ ಜಾಗ್ರತೆಯಾಗಿರದೆ, ಪ್ರಪಂಚ ಧ್ಯಾಸಗಳಲ್ಲಿ ಪೂರ್ತಿ ಸಿಲುಕಿಕೊಂಡು ಹೋಗುತ್ತಿದ್ದಾರೆ. ಕಾಲ ಕಳೆದಂತೆಲ್ಲ ಜವಾಬ್ದಾರಿಗಳು ಹೆಚ್ಚಿಸಿಕೊಳ್ಳುತ್ತಾ, ತನ್ನ ಶರೀರದಲ್ಲಿನ ವಾಯುವನ್ನು ಪೂರ್ತಿಯಾಗಿ ಮರೆತುಹೋಗಿ, ಮರಣವೆಂಬ ಭಯ ಇಲ್ಲದಂತೆ ಚಿರಕಾಲವಿರುವವರಂತೆ ಕೆಲಸಗಳು ಮಾಡಿಕೊಳ್ಳುತ್ತಾಹೋಗಿ, ಯಾವುದೋ ಒಂದು ದಿನ ತನಗೆ ತಿಳಿಯದಂತೆ ಮರಣ ಹೊಂದುತ್ತಿದ್ದಾರೆ.

**ದೀಪ ವಿರುವಾಗಲೇ ಮನೆ ಸ್ವಚ್ಚಗೊಳಿಸಬೇಕೆಂಬ** ಹಿರಿಯರು ಹೇಳಿದ ಗಾದೆಯನ್ನು ಮರೆತುಹೋಗಿ, ಆಯುವು ಇರುವಾಗಲೇ ಪರಮಾತ್ಮ ಧ್ಯಾಸಹೊಂದಿ, ಶರೀರ ಗೃಹವನ್ನು ಆತ್ಮ ಧನದಿಂದ ತುಂಬಿಕೊಳ್ಳದೆ, ಪ್ರಪಂಚ ಸಂಬಂಧವಾದ ವಿಷಯಗಳಿಂದ ತುಂಬಿಕೊಳ್ಳುತ್ತಿದ್ದಾರೆ. ಈಗಲಾದರೂ ನಿನ್ನವಾಯುವಿನ ಮೇಲೆ ಧ್ಯಾಸವಿಟ್ಟು, ನಾನು ಹುಟ್ಟಿದಾಗ ಎಷ್ಟು ತಂದು ಕೊಂಡಿದ್ದೇನೋ ಎಂದು, ಅದರಲ್ಲಿ ಎಷ್ಟು ಮುಗಿದುಹೋಗಿದೆಯೋ ಎಂದು, ಹೋಗುವುದಕ್ಕೆ ಹತ್ತಿರಕ್ಕೆ ಬಂದಿದೆಯೇನೋ ಎಂದು ಯೋಚಿಸಿ, ಪ್ರತಿ ಶ್ವಾಸ ಕಾಲವನ್ನು ಒಳ್ಳೆಯದಾಗಿ ಕಳೆಯುವುದಕ್ಕೆ ಪ್ರಯತ್ನಿಸಬೇಕು. ನಿನ್ನಲ್ಲಿ ನಿನಗೂ, ನಿನ್ನ ವಾಯುವಿಗೂ ಅಧಿಪತಿಯಾದವನ್ಯಾರೋ ಅವನನ್ನು ಮರೆಯಬೇಡ. ರಾಜ ಅಂದುಕೊಂಡರೆ ಹೊಡೆತಗಳಿಗೆ ಬರವೇ! ಈಶ್ವರನು ಅಂದುಕೊಂಡರೆ ಆಯುವು ಬರವೇ! ಅನ್ನುವ ಹಿರಿಯರ ಮಾತನ್ನು ಸಹ ಮರೆಯಬೇಡ.

# ಪುಣ್ಯವಾ! ಜ್ಞಾನವಾ!

ಎಷ್ಟೋ ಜನ, ಎಷ್ಟೋ ಕೆಸಗಳು ನಿತ್ಯಮಾಡುತ್ತಿರುತ್ತಾರೆ. ಅದರಲ್ಲಿ ಕೆಲವು ಒಳ್ಳೆಯ ಕೆಲಸಗಳು ಕೆಲವು ಕೆಟ್ಟಕೆಲಸಗಳು ಇರುತ್ತವೆ. ಒಳ್ಳೆಯ ಕೆಲಸಗಳು ಗತ ಜನ್ಮ ಪುಣ್ಯದಿಂದ, ಕೆಟ್ಟಕೆಲಸಗಳು ಗತಜನ್ಮ ಪಾಪದಿಂದ ನಡೆಯುತ್ತಿರುತ್ತವೆ. ಹಾಗೆ ಪಾಪಪುಣ್ಯಗಳು ಕಾರ್ಯಾಚರಣೆಗೆ ಬಂದಾಗ ನಡೆದ ಕೆಲಸಗಳಲ್ಲಿ ಪುನಃ ಪಾಪಪುಣ್ಯಗಳು ಬರುತ್ತಿರುತ್ತವೆ. ಇದು ಸಹಜವಾಗಿ ಪ್ರಪಂಚದಲ್ಲಿ ನಡೆಯುವ ವಿಧಾನ. ಇದು ಅಲ್ಲದೆ ಬಹಳ ಅಪರೂಪವಾಗಿ ನಡೆಯುವ ವಿಧಾನ ಸಹ ಒಂದಿದೆ. ಇದು ಕೇವಲ ಶ್ರದ್ಧೆಗೆ ಸಂಬಂಧಿಸಿರುವುದೆಂದು ಹೇಳಬಹುದು. ಆ ಶ್ರದ್ಧೆಯು ಕೇವಲ ದೈವಸಂಬಂಧವಾದುದಾಗಿ ಇರುತ್ತದೆ. ಗುಣಗಳಲ್ಲಿರುವ ಪ್ರಪಂಚ ಶ್ರದ್ದೆಯಲ್ಲದೆ, ಪರಮಾತ್ಮ ಸಂಬಂಧವಾದ ಶ್ರದ್ಧೆಯಿಂದ ನಡೆಯುವ ಕಾರ್ಯಾಚರಣೆಯಲ್ಲಿನ ಕೆಲಸಗಳಿಗೆ ಪಾಪಪುಣ್ಯಗಳು ಬರುವುದಿಲ್ಲ. ಆ ಕೆಲಸಗಳಲ್ಲಿ ಪರಮಾತ್ಮ ಸಂಬಂಧವಾದ ಜ್ಞಾನ ಮಾತ್ರವೇ ಬರುತ್ತದೆ. ಪ್ರಪಂಚ ಸಂಬಂಧವಾಗಿ ಮಾಡುವ ಕೆಲಸಗಳಿಗೆ ಬರುವುದು ಕರ್ಮ. ಅದರಿಂದ ಪರಮಾತ್ಮನಿಗೆ ದೂರ ಆಗುವುದು ನಡೆಯುತ್ತಿರುತ್ತದೆ. ಪರಮಾತ್ಮ ಸಂಬಂಧವಾಗಿ ಮಾಡುವ ಕೆಲಸಗಳಿಗೆ ಬರುವುದು ಜ್ಞಾನ. ಆದ್ದರಿಂದ ಪರಮಾತ್ಮನಿಗೆ ಹತ್ತಿರವಾಗುವುದು ನಡೆಯುತ್ತಿರುತ್ತದೆ. ಹೀಗೆ ಪಾಪ ಬರುವುದು, ಪುಣ್ಯ ಬರುವುದು, ಜ್ಞಾನ ಬರುವುದು ಅನ್ನುವ ಮೂರು ವಿಧಗಳ ಕಾರ್ಯಗಳಿವೆ.

ಒಬ್ಬನು ಒಳ್ಳೆಯ ಕೆಲಸ ಮಾಡಿದಾಗ ಅದು ಇತರರಿಗೂ ಸಹ ಒಳ್ಳೆದಾಗಿ, ಅವರಿಗೆ ಮೇಲು ಮಾಡುವುದಾಗಿರುತ್ತದೆ. ಒಬ್ಬನು ಒಂದು ಕೆಟ್ಟಕೆಲಸ ಮಾಡಿದಾಗ ಅದು ಇತರರಿಗು ಸಹಾ ಕೆಟ್ಟದ್ದಾಗಿ, ಅವರಿಗೆ ನಷ್ಟ ಬರುವುದಾಗಿರುತ್ತದೆ. ಒಬ್ಬನು ಮಾಡುವ ಪರಮಾತ್ಮ ಸಂಬಂಧ ಕಾರ್ಯದಿಂದ ದೈವಕ್ಕೆ ಒಳ್ಳೆಯದಾಗಿ ಜ್ಞಾನ ಉಂಟಾಗುವುದಕ್ಕೆ, ಅದು ಪ್ರಚಾರವಾಗುವುದಕ್ಕೆ ಸಾಧ್ಯವಾಗುವುದಾಗಿರುತ್ತದೆ. ಒಳ್ಳೆಯದರಿಂದ ಒಳ್ಳೆಯದು ನಡೆಯುವುದು, ಕೆಟ್ಟದರಿಂದ ಕೆಟ್ಟದ್ದು ನಡೆಯುವುದು, ಜ್ಞಾನದಿಂದ ಜ್ಞಾನ ಬರುವುದು ಅವವುಗಳ ವಿಧಾನಗಳೆಂದು ಹೇಳಬಹುದು. ಈ ವಿಷಯ ನಿಜವೆನ್ನುವುದಕ್ಕೆ ಉದಾಹರಣೆ

ಯಾಗಿ ಒಂದು ವಿಷಯ ನೋಡೋಣ. ಒಬ್ಬ ಗುರು ಹತ್ತಿರ ಕೆಲವರು ಶಿಷ್ಯರು ಜ್ಞಾನ ಶಿಕ್ಷಣದಲ್ಲಿ ಇದ್ದರು. ಜ್ಞಾನದ ಮೇಲೆ ಶ್ರದ್ಧೆ ಇರುವ ಮಲ್ಲಯ್ಯ ಅನ್ನುವ ಶಿಷ್ಯನು ಗುರುವಿಗಿಂತ ಮೀರಿದ ದೇವರು ಇಲ್ಲವೆಂದು ತಿಳಿದು, ಗುರುವೊಂದರ ಸುಖ ಕೋರಿದವನಾಗಿ, ಗುರುಗಳಿಗೆ ಉಪಯೋಗಪಡುವ ಒಂದು ವಸ್ತುವನ್ನು ಬಜಾರಿನಿಂದ ಖರೀದಿಮಾಡಿಕೊಂಡು ತಂದನು. ಅದರಿಂದ ಗುರುಗಳಿಗೆ ಸ್ವಲ್ಪ ಸುಖ ಏರ್ಪಟ್ಟಿದೆ. ಆಗ ಪಕ್ಕದಲ್ಲಿರುವ ಮತ್ತೊಬ್ಬ ಶಿಷ್ಯನು ಹೀಗೆ ಅಂದನು. ಮಲ್ಲಯ್ಯನ ಪುಣ್ಯದಿಂದ ಆ ವಸ್ತುವಿನಿಂದ ಗುರುಗಳಿಗೆ ಸ್ವಲ್ಪ ಸುಖವಾಗಿದೆ ಅಂದನು. ಆ ಮಾತು ಗುರುಗಳು ಕೇಳಿದವರಾಗಿ ತಕ್ಷಣ ಹೀಗೆ ಈ ವಿಷಯದಲ್ಲಿ ಮಲ್ಲಯ್ಯನ ಪುಣ್ಯ ಅನ್ನಬಾರದು ಮಲ್ಲಯ್ಯನ ಜ್ಞಾನದಿಂದ ಎಂದು ಅನ್ನಬೇಕು. ಮಲ್ಲಯ್ಯ ಪುಣ್ಯದಿಂದ ಮಾಡಿರುವುದಾದರೂ, ಅಥವಾ ಮಲ್ಲಯ್ಯನಿಗೆ ಪುಣ್ಯ ಬರುವುದಾದರೂ ಮಲ್ಲಯ್ಯನ ಪುಣ್ಯ ಎಂದು ಅನ್ನಬಹುದು. ಈ ಕೆಲಸ ಪುಣ್ಯ ಬರುವುದು ಅಲ್ಲ, ಪುಣ್ಯದಿಂದ ಮಾಡಿರುವುದು ಅಲ್ಲ, ಆದ್ದರಿಂದ ಕೇವಲ ಜ್ಞಾನವೇ ಆತನಿಗೆ ಬರುತ್ತದೆ. ಜ್ಞಾನದ ಮೇಲಿನ ಶ್ರದ್ಧೆಯಿಂದ ಮಾಡಿರುವುದಾದ್ದರಿಂದ ಜ್ಞಾನ ಬರುತ್ತದೆ. ಆದ್ದರಿಂದ ಮಲ್ಲಯ್ಯ "ಜ್ಞಾನದಿಂದ" ಎಂದು ಅನ್ನಬೇಕು.

ಪ್ರಪಂಚ ಸಂಬಂಧವಾಗಿ ಮಾಡಿದ ಒಳ್ಳೆಯ ಕೆಲಸಗಳೆಲ್ಲವನ್ನು ಅವರ ಪಾಪಪುಣ್ಯದಿಂದ ಎಂದು ಹೇಳಬಹುದು. ಒಬ್ಬನು ಮಾಡಿದ ಒಳ್ಳೆಯಕೆಲಸದ ಸಹಾಯದಿಂದ ಇನ್ನೊಬ್ಬನು ಚೆನ್ನಾಗಿದ್ದಾಗ ಅವನ ಪುಣ್ಯದಿಂದ ನಾನು ಚೆನ್ನಾಗಿದ್ದೇನೆಂದು ಅಲ್ಲಲ್ಲಿ ಕೇಳುತ್ತಿದ್ದೇವೆ. ಮಾಡಿರುವುದು ಪುಣ್ಯದ ಕೆಲಸ ಆದಾಗ ಅದರಿಂದ ಪುಣ್ಯ ಬರುತ್ತದೆ ಎಂದು ಹೇಳಬಹುದು. ಇಲ್ಲಿ ಹಾಗಲ್ಲ, ಮಲ್ಲಯ್ಯ ಮಾಡಿರುವುದು ಜ್ಞಾನ ಸಂಬಂಧವಾದುದಾದ್ದರಿಂದ ಆತನು ಮಾಡಿದ ಕೆಲಸ ಆತನ ಜ್ಞಾನದಿಂದ ಬಂದಿದೆ. ಮಲ್ಲಯ್ಯ ಜ್ಞಾನದಿಂದ ಗುರುವಾದ ನನಗೆ ಸ್ವಲ್ಪ ಸುಖ ಏರ್ಪಟ್ಟಿದೆ. ಆದ್ದರಿಂದ ಆತನಿಗೆ ಜ್ಞಾನ ಲಭಿಸಿ ಪರಮಾತ್ಮನಿಗೆ ಹತ್ತಿರವಾಗುತ್ತಾನೆ ಅಂದನು.

ಭೂಮಿ ಮೇಲೆ ಸ್ವಲ್ಪ ಧರ್ಮಗಳು ಉಳಿದಿವೆ. ಆದ್ದರಿಂದ ಗುರುಗಳು ಹೇಳಿದಂತೆ ಒಬ್ಬರಿಂದ ಒಳ್ಳೆಯದು ನಡೆದಾಗ ಅವನ ಪುಣ್ಯದಿಂದ ನನಗೆ ಒಳ್ಳೆಯದು ನಡೆದಿದೆ ಎಂದು ಅಲ್ಲಲ್ಲಿ ಕೇಳುತ್ತಿರುತ್ತೇವೆ. ಹಾಗೆ ಕೆಟ್ಟದು ನಡೆದಾಗ ಅವನ ಪಾಪಕ್ಕೆ ಅವನು ಹೋಗುತ್ತಾನೆ, ಅನ್ನುವುದು ಕೇಳಿರುತ್ತೇವೆ. ಪರಿಶೀಲಿಸಿ ನೋಡಿದಂತಾದರೆ ಪುಣ್ಯದಿಂದ ಪುಣ್ಯ, ಪಾಪದಿಂದ ಪಾಪ, ಜ್ಞಾನದಿಂದ ಜ್ಞಾನ ಉಂಟಾಗುತ್ತದೆ ಎಂದು ತಿಳಿಯುತ್ತಿದೆ. ಜ್ಞಾನ ಬರುವ ಕೆಲಸಗಳಿಗೆ ಪುಣ್ಯ ಎಂದು ಹೇಳಬಾರದು.

# ಸ್ವಪ್ನಗಳು

ಪೂರ್ವಕಾಲದಲ್ಲಿ "ಸ್ವಂತ ಆಚರಣೆ" ಎನ್ನುವ ಮಾತನ್ನು ಸ್ವಪ್ನಗಳು ಎನ್ನುತ್ತಿದ್ದರು. ನನ್ನ ಪ್ರಾಣವನ್ನು ಫನ(ಅಡ)ವಿಟ್ಟಾದರೂ ಸಾಧಿಸುತ್ತೇನೆಂದು ಅನ್ನುವುದು ಈಗಲೂ ಅಲ್ಲಲ್ಲಿ ಕೇಳುತ್ತಿದ್ದೇವೆ. ನಾನು ಸ್ವತಃವಾಗಿ ಆ ಕೆಲಸ ಮಾಡುತ್ತೇನೆಂದು (ಆಚರಿಸುತ್ತೇನೆಂದು) ಗಾಢವಾಗಿ ಹೇಳುವುದಕ್ಕೆ ಹಾಗೆ ಅನ್ನುತ್ತಿದ್ದರು. ಘನಗಳು ಎಂದರೆ ಕಾರ್ಯಗಳೆಂದು 'ಸ್ವ' ಎಂದರೆ ಸ್ವಂತ ಅಥವಾ ತನ್ನೊಂದರ ಎಂದು ಅರ್ಥ. ಸ್ವಂತ ಕೆಲಸಗಳು ಅನ್ನುವುದನ್ನು ಸ್ವಘನಗಳು ಅನ್ನುತ್ತಿದ್ದರು. ಕಾಲಕ್ರಮವಾಗಿ ಎಷ್ಟೋ ಪದಗಳು ಉಚ್ಚಾರಣೆಯಲ್ಲಿ ಬದಲಾವಣೆ ಬಂದಂತೆ, ಸ್ವಘನಗಳು ಸಹ ಬದಲಾಗಿಹೋಗಿ ಸ್ವಪ್ನಗಳಾಗಿವೆ. ಜಾಗ್ರತ್ತಾವಸ್ಥೆಯಲ್ಲಿ ನಡೆಯುವ ಕಾರ್ಯಗಳೆಲ್ಲ ಅವರು ಮಾಡುವ ಕೆಲಸಗಳೇ ಎಂದು ಎಲ್ಲರೂ ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಆದರೆ ಸ್ವಪ್ನಗಳಲ್ಲಿ ನಡೆದ ಕಾರ್ಯಗಳು ಮಾತ್ರ ತಾನು ನಿದ್ರೆಹೋಗಿದ್ದೇನಲ್ಲ ನಾನ್ಯಾವಾಗ ಮಾಡಿದ್ದೇನೆಂದು ಪ್ರಶ್ನಿಸಿಕೊಳ್ಳದೆ ತಪ್ಪುವುದಿಲ್ಲ. ನಿದ್ರೆಯಲ್ಲಿ ನಡೆಯದ ಕೆಲಸವನ್ನು ನಡೆದಂತೆ ಅಂದುಕೊಳ್ಳುವುದನ್ನು ಕನಸು ಎಂದು ಅಥವಾ ಸ್ವಪ್ನ ಎಂದು ಅನ್ನುತ್ತಿದ್ದರು. ಇದು ಕನಸಾ, ನಿಜನಾ? ಎಂದು ಸಹ ಅನ್ನುವುದು ಅಲ್ಲಲ್ಲಿ ಕೇಳುತ್ತಿರುತ್ತೇವೆ. ಅಸತ್ಯವನ್ನು ಕನಸೆಂದು ತಿಳಿಯುವ ಭಾವವಿರುವುದರಿಂದ ಇದು ಅಸತ್ಯನಾ,

ನಿಜನಾ ಅನ್ನುವಮಾತನ್ನು ಕನಸಾ? ನಿಜನಾ? ಎಂದು ಅನ್ನುವುದು ಇದೆ. ಕನಸಾ? ನಿಜನಾ ಅನ್ನುವುದರಿಂದ ಸ್ವಪ್ನಗಳನ್ನು ಎಲ್ಲರೂ ಸುಳ್ಳಾಗಿಯೇ ಭಾವಿಸುತ್ತಿದ್ದಾರೆಂದು ತಿಳಿಯುತ್ತಿದೆ. ಮತ್ತು ಕೆಲವರು ಅದ್ವೈತರು **'ಬ್ರಹ್ಮ ಸತ್ಯಂ ಜಗತ್ ಮಿಥ್ಯ'** ಅನ್ನುತ್ತಾ ದೇವರು ಮಾತ್ರ ನಿಜ, ಪ್ರಪಂಚ ಅಸತ್ಯವೆಂದು ಹೇಳುತ್ತಿರುತ್ತಾರೆ. ಅದನ್ನೇ ವಿವರವಾಗಿ ಹೇಳುವಾಗ ಪ್ರಪಂಚವೂ ಜೀವನವೂ ಎಲ್ಲವೂ ಕನಸಿನಂತಹದು, ಇದು ನಿಜವಲ್ಲ, ಕಾಣಿಸದ ದೈವವೆ ನಿಜವಾಗಿ ಇದೆಯೆಂದು ಸಹ ಹೇಳುತ್ತಿರುತ್ತಾರೆ. ಒಟ್ಟಿನಲ್ಲಿ ಕನಸು ಅಥವಾ ಸ್ವಪ್ನ ಅನ್ನುವುದು ಅಸತ್ಯವಾದುದೆಂದು, ನಿಜವಲ್ಲವೆಂಬ ಭಾವನೆ ಬಹಳ ಜನರಲ್ಲಿದೆ ಎಂದು ತಿಳಿಯುತ್ತಿದೆ.

ಯೋಚಿಸಿ ನೋಡಿದರೆ ಸ್ವಪ್ನವನ್ನು ಅಸತ್ಯವೆಂಬುವುದು ಪೂರ್ತಿ ತಪ್ಪೆಂದು, ಸ್ವಪ್ನ ವಾಸ್ತವವಾದುದೆಂದು ಹೇಳಬಹುದು. ಎಂತಹ ಚಲನೆಯಿಲ್ಲದ ನಿದ್ರೆಯಲ್ಲಿನ ಮನುಷ್ಯನಿಗೆ ಒಳಗೆ ಏನು ನಡೆದಿದೆಯೋ ಹೊರಗಿನವರಿಗೆ ತಿಳಿಯದಿರುವುದು ಸತ್ಯ ಹೇಗಾಗುತ್ತದೆಂದು? ಬಹಳಜನರಿಗೆ ಅನುಮಾನ ಸಹ ಇದೆ. ಕೆಲವರೇನೋ ಆಕಡೆ ಸತ್ಯವೆಂದು, ಈಕಡೆ ಅಸತ್ಯವೆಂದು ತೀರ್ಮಾನಿಸಿ ಹೇಳಲಾರದೆ ಹೋಗುತ್ತಿದ್ದಾರೆ. ಯಾರೇನಂದುಕೊಂಡರೂ ಸ್ವಪ್ನ ಅಸತ್ಯವೆಂಬ ಮಾತು ನಿಜವಲ್ಲವೆಂದು, ಸ್ವಪ್ನ ಸತ್ಯವಾದುದೆಂದು ಹೇಳುವುದಕ್ಕೆ ಆಧಾರಗಳಿವೆ. ಸ್ವಪ್ನಗಳು ಶರೀರದಲ್ಲಿಯೆ ಕರ್ಮದ ಪ್ರಕಾರ ನಡೆಯುತ್ತಿರುತ್ತವೆ. ಹೊರಗೆ ಮನುಷ್ಯ ರೊಂದಿಗೆ ಸಂಬಂಧವಿಲ್ಲದೆ ನಡೆಯಬೇಕಾದ ಕರ್ಮ ಇರುವಾಗ, ಸ್ವಪ್ನದಲ್ಲಿ ಆ ಕರ್ಮನಡೆಯುತ್ತದೆ. ಹಾಗೆ ತಾನು ಮಾತ್ರ ಯಾರಿಗೂ ತಿಳಿಯದಂತೆ ಅನುಭವಿಸಬೇಕಾಗಿ ಬಂದಾಗ, ಮತ್ತು ಅಸಾಧಾರಣ ಕರ್ಮಗಳು ನೆರವೇರಬೇ ಕಾಗಿರುವಾಗಲೂ, ಹೊರಗಿನ ಪ್ರಪಂಚಕ್ಕೆ ತಿಳಿಯದಂತೆ ಅವರದು ಅವರಿಗೆ ತಿಳಿಯುವಂತೆ ನಡೆಯುವ ಕರ್ಮ ಆಚರಣೆ ಸ್ವಪ್ನದಲ್ಲಿಯೇ ನಡೆಯುತ್ತಿರುತ್ತದೆ. ಯಾರ ಕರ್ಮ ಅವರಿಗೆ ಮಾತ್ರವೇ ತಿಳಿಯುವುದನ್ನು ಸ್ವಂತ ಆಗುವುದರಿಂದ ಸ್ವ ಎಂದು, ಆಚರಣೆಗಳನ್ನು ಘನಗಳೆಂದು, ಸ್ವಘನಗಳೆಂದು ನಂತರ ಸ್ವಪ್ನಗಳೆಂದು

ಕರೆಯುತ್ತಿದ್ದೇವೆ. ನಿದ್ರೆ, ಎಚ್ಚರ ಅವಸ್ಥೆಗಳಂತೆ ಜೀವಿಗೆ ಸ್ವಪ್ನಾವಸ್ಥೆ (ಸ್ವಂತ ಅವಸ್ಥೇ) ಎನ್ನುವುದು ಸಹ ಇದೆ. ಅದರಲ್ಲಿ ನಡೆಯುವವು ಜೀವಿಯು ಸ್ವತಃವಾಗಿ ಅನುಭವಿಸಬೇಕಾಗಿದೆ. ಸ್ವಪ್ನಾವಸ್ಥೆಯಲ್ಲಿ ಜೀವಿಗೆ ಎಲ್ಲಾ ಅನುಭವಗಳಿವೆ. ಜೀವಿಯು ಸೂಕ್ಷ್ಮಶರೀರದ ಮೂಲಕ ಅನುಭವಗಳನ್ನು ಅನುಭವಿಸುತ್ತಾನೆ. ಆದುದರಿಂದ ಸ್ಥೂಲಶರೀರ ಎಲ್ಲಿರುವುದು ಅಲ್ಲಿಯೇ ಕದಲದಂತಿರುತ್ತದೆ. ಸ್ಥೂಲಶರೀರ ಕದಲಲಿಲ್ಲವೆಂಬ ಅಭಿಪ್ರಾಯದಿಂದ ಸ್ವಪ್ನಗಳು ಅಸತ್ಯವೆಂದು ಕೆಲವರಂದುಕೊಳ್ಳುತ್ತಿರುತ್ತಾರೆ. ಸ್ವಪ್ನಗಳು ಸ್ಥೂಲದ ಮೂಲಕ ನಡೆಯದೆ ಸೂಕ್ಷ್ಮದ ಮೂಲಕ ಮಾತ್ರವೇ ನಡೆಯುತ್ತಿರುವುದರಿಂದ ಕೆಲವರು ಹಾಗೆ ಅಂದು ಕೊಳ್ಳುತ್ತಿರುತ್ತಾರೆ.

ಸ್ವಪ್ನಗಳಲ್ಲಿನ ವಿಷಯಗಳು ಸುಮಾರು 95 ರಷ್ಟು ಸೂಕ್ಷ್ಮದ ಮೂಲಕವೇ ನಡೆಯುತ್ತಿರುತ್ತವೆ. ಕೇವಲ 5ರಷ್ಟು ಮಾತ್ರ ಸೂಕ್ಷ್ಮದಿಂದಲೇ ಅಲ್ಲದೆ ಸ್ಥೂಲದಿಂದಲೂ ಸಹ ಸಂಬಂಧಪಟ್ಟು ನಡೆಯುತ್ತಿರುತ್ತವೆ. ಮನುಷ್ಯನಿಗೆ ಹಾಇರುವಾಗ ಮಾತ್ರ ಸ್ವಪ್ನ ನಿಜವೆಂದು ನಂಬುವುದಕ್ಕೆ ಆಧಾರಗಳು ಸಿಗುತ್ತಿದ್ದರೂ, ನಂತರ ಸೂಕ್ಷ್ಮದ ಮೂಲಕ ನಡೆಯುವ ಸ್ವಪ್ನಗಳ ಮೇಲೆ ಮತ್ತೆ ಅನುಮಾನ ಬರುವುದಕ್ಕೆ ಅವಕಾಶವಿದೆ. ಸ್ವಪ್ನದಲ್ಲಿ ಜೀವಿಯು ಕರ್ಮ ಅನುಭವಿಸುವುದಕ್ಕೆ ಶರೀರದಲ್ಲಿನ ಸೂಕ್ಷ್ಮ ಭಾಗಗಳು ಕೆಲಸ ಮಾಡುತ್ತಿರುವಾಗ ನಂಬಲಾರದ ಸತ್ಯವನ್ನು, ಕರ್ಮೇಂದ್ರಿಯಗಳು ಕೆಲಸ ಮಾಡಿದಾಗ ನಂಬಬೇಕಾಗಿ ಬರುತ್ತದೆ ಅಂದಿದ್ದೇವಲ್ಲವೆ! ಅದು ಹೇಗೆ ಎಂದರೆ! ಸ್ವಪ್ನ ಬಂದಾಗ ಅದರಲ್ಲಿ ಕರ್ಮೇಂದ್ರಿಗ ಳಾದ ಬಾಯಿ, ಗುದ, ಲಿಂಗ ಅನ್ನುವ ಮೂರು ವಿಸರ್ಜನ ಅವಯವಗಳು ಮಾತ್ರ ಸ್ವಪ್ನದಲ್ಲಿ ಕೆಲಸ ಮಾಡಿದಂತಾದರು, ಆ ಸ್ವಪ್ನ ನಿಜವಾಗಲು ನಡೆದಿದೆ ಎಂದು ನಂಬುವುದಕ್ಕೆ ಆಧಾರವೇರ್ಪಡುತ್ತದೆ. ಕರ್ಮೇಂದ್ರಿಯಗಳಲ್ಲಿ ಲಿಂಗ ಮೂತ್ರ ವಿಸರ್ಜನೆ ಮತ್ತು ವೀರ್ಯವಿಸರ್ಜನೆ ಮಾಡುವುದಾಗಿದೆ. ಈ ಮೂರರಲ್ಲಿಯೂ ಸ್ವಪ್ನದಲ್ಲಿ ಯಾವುದೊಂದು ಕೆಲಸಮಾಡಿದರೂ, ಅವು ವಿಸರ್ಜನ ಅವಯವಗಳು ಆಗುವುದರಿಂದ ಶರೀರದಲ್ಲಿ ಅವಯವಗಳಿಂದ

ವಿಸರ್ಜನೆ ಮಲಗಿರುವ ಶರೀರದ ಮೂಲಕ ನಡೆದಿರುತ್ತದೆ. ಹಾಗೆ ಸ್ವಪ್ನದಲ್ಲಿ ಯಾವ ಸ್ತ್ರೀಜೊತೆಯಾದರೂ ಸಂಯೋಗ ಮಾಡಿದಂತಾದರೆ, ಸ್ವಪ್ನದಲ್ಲಿ ವೀರ್ಯ ಸ್ಕಲನ ನಡೆದು ಸ್ತ್ರೀ ಸಂಭೋಗ ಸುಖ ಜೀವಿಯು ಅನುಭವಿಸುತ್ತಾನೆ. ಅದು ನಡೆದಿರುವುದು ಸ್ವಪ್ನದಲ್ಲಿ ಆದರೂ ವಿಸರ್ಜನೆ ಅವಯುವವು ಅಲ್ಲಿ ಕೆಲಸಮಾಡಿರುವುದರಿಂದ, ಅದು ಸ್ಥೂಲ ಶರೀರದಲ್ಲಿನ ಲಿಂಗದ ಮೂಲಕ ನಡೆದು ವೀರ್ಯಸ್ಕಲನವು ಬಟ್ಟೆಗಳ ಮೇಲೆ ಕಾಣಿಸುತ್ತದೆ. ಹೀಗೆ ಮೂತ್ರವಿಸರ್ಜನೆಯಾಗಲಿ, ವೀರ್ಯಸ್ಕಲನೆಯಾಗಲಿ ಸ್ವಪ್ನದಲ್ಲಿ ನಡೆದಂತಾದರೆ ಬಾಹ್ಯ ಶರೀರದ ಮೂಲಕ ಅವು ನೆರವೇರುತ್ತಿವೆ. ಅದೇ ರೀತಿ ಸ್ವಪ್ನದಲ್ಲಿ ಬಾಯಿಯಿಂದ ಉಗುಳು ಉಗಿದಂತೆ ನಡೆದರೆ ಅದು ಮಲಗಿರುವ ಸ್ಥಳದಲ್ಲಿಯೇ ಉಗಿಯಲ್ಪಟ್ಟಿರುತ್ತದೆ. ಅದೇ ವಿಧವಾಗಿ ಸ್ವಪ್ನದಲ್ಲಿ ನಿರ್ಜನ ಪ್ರದೇಶದಲ್ಲಿ ಮಲ ವಿಸರ್ಜನೆ ಮಾಡಿದಂತಾದಾಗ, ಅದು ಸ್ಥೂಲ ಶರೀರದ ಮೂಲಕ ಮಲಗಿರುವ ಸ್ಥಳದಲ್ಲಿಯೇ ನಡೆದಿರುತ್ತದೆ. ಯಾವುದು ಅಲ್ಲವೆಂದು ವಾದಿಸಿದರೂ ಈ ಮೂರು ಅವಯವಗಳ ಕಾರ್ಯಗಳನ್ನು ಯಾರು ಅಲ್ಲವೆನ್ನುವುದಿಲ್ಲ. ವಿಸರ್ಜನೆ ಬಾಹ್ಯ ಪ್ರಪಂಚ ಸಂಬಂಧದಿಂದ ಮುಡಿಹಾಕಲ್ಪಟ್ಟಿದೆ. ಆದ್ದರಿಂದ ಅವು ತಪ್ಪದೆ ಹೊರಗೆ ಕಾಣಿಸುತ್ತವೆ. ಇವುಗಳನ್ನನುಸರಿಸಿ ಸ್ವಪ್ನಗಳು ಅಸತ್ಯವೆಂಬುವುದಕ್ಕಾಗಲಿ, ಅವು ಶರೀರದಲ್ಲಿ ನಡೆಯಲಿಲ್ಲ ಎಂಬುವುದಕ್ಕಾಗಲಿ ಅವಕಾಶವೇ ಇಲ್ಲ. ಪ್ರತಿ ಸ್ವಪ್ನವು ಶರೀರದಲ್ಲಿ ನಡೆಯುತ್ತಿದೆ, ಅದನ್ನು ಜೀವಿಯು ಅನುಭವಿಸುತ್ತಲೇ ಇದ್ದಾನೆ. ಮನಸ್ಸಿಗು ಬುದ್ಧಿಗು, ಚಿತ್ತಕ್ಕು, ಜೀವಿಗು, ಅಹಮ್‌ಗು, ಪಂಚತನ್ಮಾತ್ರ ಗಳಿಗೆ, ಪಂಚವಾಯುಗಳು ಆದ ಸೂಕ್ಷ್ಮ ಆಕಾರದಿಂದ ಮಲಗಿರುವ ಶರೀರ ದಲ್ಲಿಯೇ ಸ್ವಪ್ನಗಳು ನಡೆಯುತ್ತಿವೆಂದು ತಿಳಿಯಬೇಕು. ಇದರಿಂದ ಸ್ವಪ್ನಗಳು ಸತ್ಯಗಳೆಂದು, ಅಸತ್ಯಗಳು ಅಲ್ಲವೆಂದು ಸಹ ತಿಳಿಯಬೇಕು.

# ಚೈತನ್ಯಶಕ್ತಿ (ಕುಂಡಲಿ ಶಕ್ತಿ)

ಚೈತನ್ಯಶಕ್ತಿ ಅನ್ನುವ ಪದವನ್ನು ಆತ್ಮಶಕ್ತಿ ಅನ್ನುವುದಕ್ಕೆ ಬದಲಾಗಿ ಉಪಯೋಗಿಸಿದ ಪದವೆಂದು ತಿಳಿಯಬೇಕು. ಚೈತನ್ಯಶಕ್ತಿ ಎಂದರೂ, ಆತ್ಮಶಕ್ತಿ ಎಂದರೂ, ಸತ್ತು ಎಂದರೂ, ಚಲನಶಕ್ತಿ ಎಂದರೂ ಒಂದೇ ಎಂದು ತಿಳಿಯಬೇಕು. ಪ್ರತಿ ಜೀವರಾಶಿ ಶರೀರದಲ್ಲಿ ಆ ಶಕ್ತಿಯಿದ್ದು, ಆ ಶರೀರಗಳು ಕದಲುವುದಕ್ಕೆ ಉಪಯೋಗಪಡುತ್ತಿದೆ. ಕಣ್ಣರೆಪ್ಪೆ ಕದಲುವುದಕ್ಕೆ, ಕಾಲು ಕೈಗಳು ಚಲಿಸುವುದಕ್ಕೆ, ಗುಂಡಿಗೆ ಸ್ಪಂದಿಸುವುದಕ್ಕೆ, ಸಕಲೇಂದ್ರಿಯಗಳು ಕೆಲಸಮಾಡುವುದಕ್ಕೆ ಆತ್ಮಶಕ್ತಿ ಅಗತ್ಯ. ಉದಾಹರಣೆಗೆ ರೇಡಿಯೊ, ಫ್ಯಾನ್, ಟಿವಿ, ಫೋನ್, ಲೈಟ್‌ಗಳು ಮೊದಲಾದ ವಸ್ತುಗಳು ಬೇರೆ ಬೇರೆಯಾಗಿ, ಬೇರೆ ಬೇರೆ ಕಾರ್ಯಗಳಿಗೆ ಉಪಯೋಗಪಡುವವಾದರೂ ಅವು ಕೆಲಸಮಾಡುವುದಕ್ಕೆ ವಿದ್ಯುತ್ ಅನ್ನುವ ಒಂದೇ ಒಂದು ಶಕ್ತಿ ಅಗತ್ಯ. ಹಾಗೆ ನಮ್ಮ ಶರೀರದಲ್ಲಿ ಬೇರೆ ಬೇರೆ ಅವಯವಗಳಿದ್ದು, ಬೇರೆಬೇರೆ ಕಾರ್ಯಗಳಿಗೆ ಉಪಯೋಗಪಡುವವಾದರೂ ಅವು ಕೆಲಸಮಾಡುವುದಕ್ಕೆ ಒಂದೇ ಒಂದು ಶಕ್ತಿ ಅಗತ್ಯ, ಅದೇ ಆತ್ಮಶಕ್ತಿ (ಚೈತನ್ಯಶಕ್ತಿ). ಹೊರಗಿನ ಪರಿಕರಗಳಿಗೆ ಉಪಯೋಗಪಡುವ ವಿದ್ಯುತ್‌ಶಕ್ತಿ ರಾಗಿ  ಅಲ್ಯೂಮಿನಿಯಮ್ ತಂತಿಗಳ ಮೂಲಕ ಅದು ಪ್ರಸಾರವಾಗುತ್ತದೆ ಹಾಗೆ ಶರೀರಗಳೊಳಗಿರುವ ಚೈತನ್ಯಶಕ್ತಿ ನಮ್ಮ ಶರೀರದಲ್ಲಿನ ನರಗಳ ಮೂಲಕ ಪ್ರಸಾರವಾಗುತ್ತಿದೆ. ವಿದ್ಯುತ್ತನ್ನು ಅದು ಪ್ರವಹಿಸುವ ಸ್ಪೀಡ್‌ನ್ನು ಪ್ರಸಾರದ ವಿಸ್ತಾರವನ್ನನುಸರಿಸಿ ಇಷ್ಟು ಓಲ್ಟ್ಸ್ ಎಂದು ಇಷ್ಟು ಆಮ್‌ಪಿಯರ್ಸ್ ಎಂದು ಹೇಳಬಹುದು. ಆದರೆ ಶರೀರದಲ್ಲಿ ಪ್ರಸಾರವಾಗುವ ಆತ್ಮಶಕ್ತಿಯನ್ನು ಅಳೆಯುವುದಕ್ಕೆ ಪರಿಕರಗಳು ಇಲ್ಲ, ಅಳೆಯುವುದಕ್ಕೆ ಸಾಧ್ಯವಾಗುವುದು ಅಲ್ಲ. ಇಷ್ಟು ಸ್ಪೀಡಿನಿಂದ ಇಷ್ಟು ಗಾತ್ರದಲ್ಲಿ ಪ್ರಸಾರವಾಗುತ್ತಿದೆ ಎಂದು ಹೇಳಲಾರೆವು. ವಿದ್ಯುತ್ ಪ್ರವಾಹ ಆರಂಭವಾಗುವ ಸ್ಥಾನ ಜನರೇಟರ್ ಅಂದುಕೊಳ್ಳೋಣ. ಆ ವಿಧವಾಗಿಯೇ ಚೈತನ್ಯಶಕ್ತಿ ಪ್ರಸಾರವಾಗುವುದಕ್ಕು ಸಹ ಸ್ಥಾನ ಇದೆ, ಅದು ನಮ್ಮ ಶಿರೋಭಾಗ. ವಿದ್ಯುತ್ ಒಂದುಕಡೆ ತಯಾರಾಗಿ ಅಲ್ಲಿಂದ ಪ್ರಸಾರ ವಾಗುವುದಾದರೆ, ಚೈತನ್ಯಶಕ್ತಿ ಹಾಗಲ್ಲದೆ ಒಂದುಕಡೆ ನೆಲೆಯಿದ್ದು ಅಲ್ಲಿಂದ

ಪ್ರಸಾರವಾಗುತ್ತಿದೆ. ವಿದ್ಯುತ್ ಒಂದು ಕೇಂದ್ರದಲ್ಲಿ ತಯಾರಾಗುವುದನ್ನನುಸರಿಸಿ ಪ್ರಸಾರವಾಗುವುದು, ಅದು ಉಪಯೋಗಪಡುವುದು ನಡೆಯುತ್ತಿದೆ. ಕಡಿಮೆ ತಯಾರಾದರೆ ಕಡಿಮೆಯಾಗಿಯೇ ವಿನಿಯೋಗಿಸಿಕೊಳ್ಳಬೇಕಾಗಿ ಬರುತ್ತದೆ. ಆತ್ಮಶಕ್ತಿ ಹಾಗಲ್ಲ ಅದು ಒಂದು ಕೇಂದ್ರದಲ್ಲಿ ತಯಾರಾಗುವುದು ಅಲ್ಲ, ಉಪಯೋಗಗಳಿಗೆ ಕಡಿಮೆ ಬರುವುದಲ್ಲ. ಅದು ಶಿರೋಭಾಗದಲ್ಲಿ ಕೇಂದ್ರೀಕೃತ ವಾಗಿದ್ದು, ಕರ್ಮಾನುಸಾರ ಯಾವ ಶರೀರಕ್ಕೆ ಎಷ್ಟು ಬೇಕೋ ಅಷ್ಟು ಶಕ್ತಿಯನ್ನು ಒದಗಿಸುತ್ತಲೇ ಇರುತ್ತದೆ.

ಶರೀರದಲ್ಲಿರುವ ಈ ಶಕ್ತಿಯನ್ನು ಕುರಿತು ತಿಳಿದುಕೊಳ್ಳಬೇಕೆಂಬ ಯೋಚನೆ ವಿಜ್ಞಾನ ಪರಿಶೋಧಕರಿಗೆ ಕೆಲವರಿಗೆ ಬಂದರೂ, ಕೊನೆಗೆ ಅದು ಪ್ರಸಾರವಾಗುವ ನರ್ವಸ್ ಸಿಸ್ಟಮ್‌ನ್ನು ಕುರಿತೇ ತಿಳಿದುಕೊಳ್ಳದೆಹೋಗಿದ್ದಾರೆ. ಆದ್ದರಿಂದ ಆ ಶಕ್ತಿಯನ್ನು ಸ್ವಲ್ಪವೂ ತಿಳಿದುಕೊಳ್ಳದೆ ಹೋಗಿದ್ದಾರೆ. ಆತ್ಮಶಕ್ತಿಯನ್ನು ತಿಳಿದುಕೊಳ್ಳುವುದರಲ್ಲಿ ಬ್ರಹ್ಮವಿದ್ಯಾ ಶಾಸ್ತ್ರವನ್ನು ತಿಳಿದವರು ಮುನ್ನೆಜ್ಜೆ ಹಾಕಿ ಅದರ ವಿವರವೆಲ್ಲ ತಿಳಿದುಕೊಂಡಿದ್ದಾರೆ. ತಿಳಿದುಕೊಂಡವರು ಅದರ ಅನುಭೂತಿಯನ್ನು ಹೇಳುವುದಕ್ಕೆ ಸಾಧ್ಯವಾಗದಿದ್ದರು, ಅದನ್ನು ಕುರಿತು ಕೆಲವು ವಿಷಯಗಳನ್ನು ತಿಳಿಸುವುದಕ್ಕೆ ಸಾಧ್ಯವಿದೆ. ಅದರಲ್ಲಿ ಅದು ಪ್ರಸಾರವಾಗುವ ವಿಧಾನವನ್ನೂ, ಅದು ಕೆಲಸ ಮಾಡುವ ವಿಧಾನವನ್ನೂ ಮುಖ್ಯವಾಗಿ ತಿಳಿದುಕೊಳ್ಳೋಣ.

ತಲೆಯಲ್ಲಿರುವ ಮೆದಳಿನ ಮಧ್ಯಭಾಗದಲ್ಲಿ ಚೈತನ್ಯಶಕ್ತಿ (ಆತ್ಮಶಕ್ತಿ) ನೆಲೆಯಿದ್ದು, ಮೆದಳಿನಿಂದ ಪ್ರಾರಂಭವಾಗಿ ಗುದಸ್ಥಾನದವರೆಗು ವ್ಯಾಪಿಸಿರುವ ಬೆನ್ನುಮೂಳೆ ಎಂಬ ದೊಡ್ಡ ನರದ ಮೂಲಕ ಶರೀರದ ಎಲ್ಲಾ ಭಾಗಗಳಿಗು ವ್ಯಾಪಿಸುತ್ತಿದೆ. ಬ್ರಹ್ಮನಾಡಿ ಎಂಬುವುದು ಆತ್ಮಶಕ್ತಿ ಪ್ರಸಾರವಾಗುವ ಕಾಲುವೆ ಯಾದರೆ, ಆ ಕಾಲುವೆಗೆ ಕೆಲವು ನರಗಳೆಂಬ ತೂಬುಗಳಿದ್ದು, ಆ ತೂಬುಗಳ ಮೂಲಕ ಹೊರಗೆ ಪ್ರವಹಿಸಿ, ಆ ಕಾಲುವೆಗಳು ಚಿಕ್ಕ ಚಿಕ್ಕದಾಗಿ ಸೀಳಿಹೋಗಿ, ಒಟ್ಟು ಶರೀರವೆಲ್ಲ ಆ ಶಕ್ತಿ ಪ್ರಸಾರವಾಗುತ್ತಿದೆ. ಈ ತತಂಗವೆಲ್ಲ ನೀರು ನೆಲೆಸಿರುವ

ಡ್ಯಾಂನಿಂದ ಮೊದಲು ದೊಡ್ಡಕಾಲುವೆ ನಂತರ ಚಿಕ್ಕಕಾಲುವೆಗಳ ಮೂಲಕ ಹರಿಯುತ್ತಾ ಹೋಗಿ ಕೊನೆಗೆ ಹೊಲಗಳಲ್ಲೆಲ್ಲಾ ನೀರು ವ್ಯಾಪಿಸಿ ಹಸಿಯಾದಂತೆ, ಆತ್ಮಶಕ್ತಿ ತಲೆಯಿಂದ ಮೊದಲು ಬ್ರಹ್ಮನಾಡಿ ನಂತರ ಸೂರ್ಯಚಂದ್ರನಾಡಿಗಳು, ಆ ನಂತರ ಅನೇಕ ನಾಡಿಗಳಲ್ಲಿ ಪ್ರಸಾರವಾಗಿ, ಕೊನೆಗೆ ಕೂದಲಿಗಿಂತ ಚಿಕ್ಕದಾಗಿರುವ ನರಗಳ ಮೂಲಕ ಶರೀರದಲ್ಲಿನ ಪ್ರತಿ ಅಣುಧಾತುವಿಗು ಸೇರಿಹೋಗುತ್ತಿದೆ. ಶರೀರ ಅವಯವಗಳು ಕದಲುವಂತೆ ಮತ್ತು ಶರೀರ ಧಾತುಕಣಗಳು ಕೆಲಸಮಾಡುವಂತೆ ಮಾಡುತ್ತಿದೆ. ಚಿತ್ರವೇನೆಂದರೆ ಹೊಲಗಳಿಗೆ ಕಾಲುವೆಗಳ ಮೂಲಕ ಪ್ರವಹಿಸುವ ನೀರು ಸ್ವಲ್ಪಕಾಲಕ್ಕೆ ಡ್ಯಾಂನಲ್ಲಿ ಮುಗಿದುಹೋಗಬಹುದು. ಆದರೆ ತಲೆಯಲ್ಲಿನ ಶಕ್ತಿ ಎಂದಿಗೂ ಮುಗಿದುಹೋಗುವುದು ಅಲ್ಲ.

ಕಾಲುವೆಗಳ ಮೂಲಕ ಪ್ರವಹಿಸುವ ನೀರು ಎಲ್ಲಿಂದ ಬರುತ್ತಿರುವುದೆಂದು ಹುಡುಕಿ ಕೊನೆಗೆ ಡ್ಯಾಂನಿಂದ ಎಂದು ತಿಳಿದುಕೊಳ್ಳಬಹುದು. ಆ ನೀರಿನಲ್ಲಿ ಮುಳುಗಿ ರುಚಿನೋಡಿ, ಆ ನೀರು ಇಂತಹದೆಂದು ಇಂತಹ ರುಚಿಯಿರುವುದೆಂದು ಅದನ್ನು ಕುರಿತು ಇತರರಿಗೆ ಹೇಳಬಹುದು. ತಲೆಯಿಂದ ಪ್ರಸಾರವಾಗುವ ಶಕ್ತಿ ಎಲ್ಲಿಂದ ಬರುತ್ತಿದೆ ಎಂದು ತಿಳಿದುಕೊಂಡವರು, ಅದರಲ್ಲಿ ಮುಳುಗಿ (ಬೆರೆತು) ಅದು ಹೇಗಿದೆಯೆಂಬ ಅನುಭೂತಿಯನ್ನು ಹೊಂದಿದವರು ಭೂಮಿಮೇಲೆ ಅಪರೂಪವಾಗಿರಬಹುದು, ಆದರೆ ಅದು ಹೀಗಿದೆ ಎಂದು ಹೇಳುವುದಕ್ಕೆ ಯಾರಿಗೂ ಶಕ್ಯವಾಗುವುದಿಲ್ಲ. ಹಾಗೆ ಹೇಳಲಾರದೆ ಹೋಗುವುದಕ್ಕೆ ಕಾರಣ ಅದಕ್ಕೆ ಹೋಲಿಕೆಯಾಗಿರುವುದು ಮತ್ತೊಂದು ಇಲ್ಲ, ಆದ್ದರಿಂದ ಹೇಳಲಾರರು. ನೀರನ್ನು ಕುರಿತು ಹೇಳದೇ ಹೋದರೂ ಅದರ ಕಾಲುವೆಗಳ ಕುರಿತು ಹೇಳಿದಂತೆ, ಆ ನೀರು ಮಾಡುವಕೆಲಸವನ್ನು ಕುರಿತು ಹೇಳಿದಂತೆ, ಆತ್ಮಶಕ್ತಿ ಅನುಭೂತಿಯನ್ನು ಹೇಳದೆಹೋದರೂ, ಅದು ಹೇಗೆ ಪ್ರವಹಿಸುತ್ತಿದೆ ಶರೀರದಲ್ಲಿ ಅದು ಯಾವುದಕ್ಕೆ ಉಪಯೋಗಪಡುತ್ತಿದೆ ಎಂದು ಹೇಳಬಹುದು.

ತಲೆಯಿಂದ ಪ್ರಾರಂಭವಾದ ಮೊದಲ ದೊಡ್ಡ ನರವೊಂದರ ಹೆಸರು ಬೆನ್ನುಮೂಳೆ (ಬೆನ್ನಾವು) ಅನ್ನುವುದು ಎಲ್ಲರಿಗೂ ತಿಳಿದಿದೆ. ಈ ನರ ಕಪಾಳದಿಂದ ಪ್ರಾರಂಭವಾದ ಬೆನ್ನುಮೂಳೆ ಮಣಿಗಳ ಮಧ್ಯದಲ್ಲಿ ಇದೆ. ಬೆನ್ನಿನಲ್ಲಿರುವ ಮೂಳೆಗಳ ಸರಪಳಿಯಲ್ಲಿ ಇದೆಯಾದ್ದರಿಂದ ಅದನ್ನು ಬೆನ್ನುಮೂಳೆ(ಬೆನ್ನಾವು) ಅನ್ನುತ್ತಿದ್ದೇವೆ. ಬೆನ್ನುಮೂಳೆ ಒಂದು ಮೂಳೆ ಅಲ್ಲ. ಅದು ಮಣಿಯಂತಿರುವ ಕೆಲವು ಮೂಳೆಗಳ ಸರದಂತಿರುತ್ತದೆ. ಆದ್ದರಿಂದ ಅದನ್ನು ಬೆನ್ನಿನಸರ ಎಂದು ಅನ್ನುವುದು ಸಹ ನಡೆಯುತ್ತಿದೆ. ಬೆನ್ನುಮೂಳೆ ಮಣಿಗಳ ಮಧ್ಯದಲ್ಲಿರುವ ಸಂದಿನಲ್ಲಿ ಮೆದುಳಿನಿಂದ ಪ್ರಾರಂಭವಾದ ದೊಡ್ಡನರ ನೇತಾಡುತ್ತಿದೆ. ಆದ್ದರಿಂದ ಇದನ್ನು ಬೆನ್ನಾವು ಅನ್ನುವುದು ನಡೆದಿದೆ. ಬೆನ್ನಾವು ಅನ್ನುವುದರಲ್ಲಿ ಬೆನ್ನು ಎಂದರೆ ತಿಳಿದಿದೆ, ಆದರೆ ಹಾವು ಎಂದು ಏಕೆ ಅಂದಿದ್ದಾರೆಂದು ಪ್ರಶ್ನೆಬರಬಹುದು. ನಾಗರಹಾವಿನಂತೆ ಮೆದುಳಿನಿಂದ ಇದರ ನಿರ್ಮಾಣ ಇರುವುದರಿಂದ ಆ ನಾಡಿಯನ್ನು ಹಾವು ಅನ್ನುವುದು ನಡೆದಿದೆ. ತಲೆಯಲ್ಲಿನ ಬಿಳಿಯ ಮೆದುಳಿನಿಂದ ಇದರ ನಿರ್ಮಾಣ ಇದೆ, ಆದ್ದರಿಂದ ಆ ನಾಡಿಯನ್ನು ಹಾವು ಅನ್ನುವುದು ನಡೆದಿದೆ. ತಲೆಯಲ್ಲಿನ ಮೆದುಳನ್ನೂ, ಅದರಿಂದ ಮೊದಲು ದಪ್ಪವಾಗಿ ಪ್ರಾರಂಭವಾಗಿ ಕೊನೆಗೆ ಚಿಕ್ಕದಾಗಿ ಮುಗಿದಿರುವ ಬಿಳಿಯ ನರವನ್ನೂ, ಚಿತ್ರಿಸಿಕೊಂಡು ನೋಡಿದರು ಮೆದುಳು ಹೆಡೆಯಂತೆ ಕೊನೆಯ ಭಾಗ ಬಾಲದಂತೆ ಕಾಣಿಸಿ ಹಾವಿನಂತೆ ಹೋಲಿಕೆ ಇದೆ. ಆದ್ದರಿಂದ ಹಾವು ಅನ್ನುವುದರಲ್ಲಿ ಚಿತ್ರವೇನು ಇಲ್ಲ. ಅಷ್ಟೇ ಅಲ್ಲದೆ ಇದನ್ನು ಹಾವು ಅನ್ನುವುದರಲ್ಲಿ ಇನ್ನು ಕಾರಣ ಸಹ ಇದೆ. ಅದು ಏನೆಂದರು ನಾವು ನಾಗರಹಾವನ್ನು ತಲೆಮೇಲೆ ಹೊಡೆದು ಸಾಯಿಸಿದಾಗ, ಅದು ಸತ್ತುಹೋದಂತೆ ಬಿದ್ದುಹೋಗುವುದರಿಂದ ಅದು ನಿಜವಾಗಲು ಸತ್ತುಹೋಗಿದೆ ಅಂದುಕೊಳ್ಳುತ್ತೇವೆ. ಆದರೆ ಅದರ ಶರೀರ ಸ್ವಲ್ಪ ಹಾಳಾದರೂ, ಉಳಿದ ಸ್ವಲ್ಪ ಭಾಗದಲ್ಲಿ ಒಳಗೆ ಚೈತನ್ಯ ಹೊಂದಿದ್ದು, ಕೆಲವು ಗಂಟೆಗಳಿಗೆ ಅದು ಮತ್ತೆ ಪೂರ್ತಿ ಚಲನೆಹೊಂದಿ ಸರಿದಾಡುವ ಅವಕಾಶ ಇದೆ. ತಲೆ ಹೊಡೆದರೂ, ಬೆನ್ನು ಮುರಿದುಹಾಕಿದರೂ, ಮತ್ತೆ ಬದುಕಿಹೋಗುವುದಕ್ಕೆ ಸಾಧ್ಯವಿದೆ. ಆದ್ದರಿಂದ ಪೂರ್ವದಲ್ಲಿ ತಿಳಿದವರು

ನಾಗರಹಾವನ್ನು ಸಾಯಿಸಿದರೆ ಪುನಃ ಬದುಕದಂತೆ ಅದರ ಶರೀರವನ್ನು ಪೂರ್ತಿ ಸುಟ್ಟು ಬೂದಿ ಮಾಡುತ್ತಿದ್ದರು. ಪೂರ್ತಿ ವಿಷಯ ತಿಳಿಯದಿದ್ದರೂ, ಈ ಕಾಲದಲ್ಲಿಯು ಸಹ ನಾಗರಹಾವನ್ನು ಸಾಯಿಸಿದ ನಂತರ ಸುಡುವುದು ನಡೆಯುತ್ತಿದೆ. ಹಾವಿಗೆ ತಲೆಯಿಂದ ಕೊನೆಯವರೆಗು ಪ್ರಾಣವಿದೆಯೆಂಬ ವಿಷಯ ಆ ದಿನ ಅವರಿಗೆ ತಿಳಿದಿತ್ತು. ನಾಗರಹಾವಿನಂತೆ ನಮ್ಮ ಬೆನ್ನಿನ ನರವು ಸಹ ಮೊದಳಿನಿಂದ ಕೊನೆಯವರೆಗು ಚೈತನ್ಯಹೊಂದಿದೆ, ಆದ್ದರಿಂದ ಹಾವು ಅನ್ನುವ ಹೆಸರು ಇದಕ್ಕೆ ಸಾರ್ಥಕವಾಗಿದೆ.

ಬೆನ್ನಾವಿನಿಂದ (ಬೆನ್ನುಮೂಳೆಯಿಂದ) ಪಕ್ಕೆಗಳಿಗೆ ಅನೇಕ ನರಗಳು ಹೊರಟು ಅವು ವಿಭಜಿಸುತ್ತಾಹೋಗಿ, ಕೊನೆಗೆ ಶರೀರದಲ್ಲಿ ಪ್ರತಿ ಭಾಗಕ್ಕು ಸೇರುತ್ತಿವೆ. ಬೆನ್ನಾವನ್ನು ಹೋಲಿದಂತೆ ಎಲ್ಲಾ ನರಗಳು ಇರುವುದರಿಂದ, ಅವು ಒಂದಕ್ಕೊಂದು ಬಿಟ್ಟುಹೋಗುವುದರಿಂದ, ನೋಡುವುದಕ್ಕೆ ಬೆನ್ನಾವು ಗಿಡ ಮೊದಲನೆಯ ಭಾಗವಾದರೆ, ಉಳಿದ ನರಗಳು ಅದರ ಕೊಂಬೆಗಳಾಗಿದ್ದು, ಶಾಖೋಪ ಶಾಖಗಳಾಗಿ ವಿಭಜಿಸಲ್ಪಟ್ಟ ವೃಕ್ಷದಂತೆ ಕಾಣಿಸುತ್ತದೆ. ಆದ್ದರಿಂದ ಶರೀರದಲ್ಲಿನ ಒಟ್ಟು ನರನಿರ್ಮಾಣವನ್ನು ಕುರಿತು ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ **'ಅಶ್ವರ್ಥ ವೃಕ್ಷವೆಂದು'** ಅಂದಿದ್ದಾರೆ. ಅಶ್ವರ್ಥವೃಕ್ಷವೆಂದರೆ ರಾಗಿಮರವೆಂದು ಎಲ್ಲರಿಗೂ ತಿಳಿದಿದೆ. ಶರೀರ ನರನಿರ್ಮಾಣವನ್ನು ಭಗವದ್ಗೀತೆಯಲ್ಲಿ ರಾಗಿ ಮರವಾಗಿಯೇ ಏಕೆ ಹೋಲಿಸಿದ್ದಾರೆನ್ನುವುದಕ್ಕು ಸಹ ಸಮಾಧಾನ ಇದೆ. ರಾಗಿಮರದ ಪ್ರತಿ ಎಲೆಯು ಎಡೆ ಎತ್ತಿದ ನಾಗರಹಾವಿನಂತೆ ಇರುತ್ತದೆ. ಎಲೆಯ ಮೇಲ್ಭಾಗ ಹಾವಿನ ಹೆಡೆಯ ಆಕೃತಿಯನ್ನು ಹೊಂದಿದ್ದು ಕೆಳಗಿನ ಭಾಗದಲ್ಲಿ ಎಲೆಯ ಉದ್ದನೆಯ ಕೊನೆಭಾಗವು ಹಾವಿನ ಬಾಲವನ್ನು ಹೋಲಿರುವುದನ್ನು ಯಾರಾದರೂ ಗಮನಿಸಬಹುದು. **(ರಾಗಿಮರ ನಾಗರಹಾವಿಗೆ ಬದಲಿಹೆಸರಾಗಿ ಇದೆಯೆಂದು, ಹಾವಿನ ವಿಷವನ್ನು ಮತ್ತೆ ಹಾವು ಹೀರುತ್ತದೆಂಬ ವೈದ್ಯ ಸೂಚನೆ ಪ್ರಕಾರ, ರಾಗಿ ಎಲೆಯಿಂದಲೇ ಹಾವಿನ ವಿಷವನ್ನು ಮನುಷ್ಯನಿಂದ ತೆಗೆದುಹಾಕಬಹುದೆಂಬ ವೈದ್ಯ ವಿಧಾನವನ್ನು ನಾವು ಸತ್ಯಾನ್ವೇಷಿ ಗ್ರಂಥದಲ್ಲಿ ತಿಳಿಸಿದ್ದೇವೆ)** ಶರೀರ ನಾಡಿ

ನಿರ್ಮಾಣವು ವೃಕ್ಷಕೊಂಬೆಗಳಂತೆ ಇದೆ ಎನ್ನುವುದಕ್ಕೆ ಅಶ್ವರ್ಥವೃಕ್ಷವನ್ನು ಗೀತೆಯಲ್ಲಿ ಭಗವಂತನು ಆರಿಸಿಕೊಂಡಿದ್ದಾನೆಂದು ತಿಳಿಯಬೇಕು.

ಇನ್ನೂ ಇಂತಹ ನಿರ್ಮಾಣವಿರುವ ಶರೀರದಲ್ಲಿ ಜೀವಿಯು ನಿವಾಸಿಸುವುದು ಹೇಗಿದೆಯೆಂದರೆ, ವಿಷಯಗಳೆಂಬ ಹಾವುಗಳವಲಯದಲ್ಲಿ ನಿವಾಸಿಸಿದಂತೆ ಎಂದು ತಿಳಿಯುತ್ತಿದೆ. ಆದ್ದರಿಂದಲೇ ಈ ಮರದ ವಿಷಯ ತಿಳಿದರೆ, ಸರ್ವ ವೇದಗಳನ್ನು ತಿಳಿದಂತೆ ಎಂದು ಭಗವಂತನು ಹೇಳಿದ್ದಾನೆ. ಈ ಅಶ್ವರ್ಥವೃಕ್ಷವೆಂಬ ಶರೀದಲ್ಲಿರುವುದು ಹಾವುಗಳ ವಿಷವಲಯದಲ್ಲಿ ಸಿಲುಕಿ ವಾಸಿಸುವುದಂತಹದು. ಇದು ಗುಣಗಳೆನ್ನುವ ಆಹಾರವನ್ನು ಉಪಯೋಗಿಸಿಕೊಂಡು ಬೆಳೆದು, ಕರ್ಮಗಳೆನ್ನುವ ಫಲಗಳನ್ನು ಕಾದು ಎರಡನೆ ಜನ್ಮಕ್ಕೆ ಬೀಜಗ ಳಂತೆ ನಿಲ್ಲುತ್ತದೆ. ಇದು ನಮ್ಮ ಶರೀರದಲ್ಲಿ ಕಾಣಿಸದ ವೃಕ್ಷವಾದರೆ, ಇದು ಕದಲುವುದಕ್ಕೆ ವೃದ್ಧಿ ಆಗುವುದಕ್ಕೆ ಅಗತ್ಯವಾದುದೇನೋ ಒಂದು ಮೂಲಶಕ್ತಿ ಬೇಕಲ್ಲವೆ! ಅದೇ ಆತ್ಮಶಕ್ತಿ. ಆ ಶಕ್ತಿ ಮೆದಳನ್ನು ಕೇಂದ್ರವಾಗಿ ಮಾಡಿಕೊಂಡಿದ್ದು, ಅಶ್ವರ್ಥವೃಕ್ಷದಂತಹ ನರನಿರ್ಮಾಣವೆಲ್ಲವೂ ಹರಡಿ, ಶರೀರಯಂತ್ರಾಂಗವೆಲ್ಲವೂ ಕೆಲಸ ಮಾಡುವಂತೆ ಶಕ್ತಿ ಕೊಡುತ್ತಿದೆ.

ಸೂರ್ಯನೊಬ್ಬನು ಆಕಾಶದಲ್ಲಿ ಮೇಲಿದ್ದು ಪ್ರಪಂಚವೆಲ್ಲವನ್ನು ತನ್ನ ಕಿರಣಗಳ ಮೂಲಕ ಪ್ರಕಾಶಿಸಿದಂತೆ, ಆತ್ಮ ಶರೀರ ಮೇಲ್ಭಾಗದಲ್ಲಿ ತಲೆಯಲ್ಲಿದ್ದು ನಾಡಿಗಳ ಮೂಲಕ ಒಟ್ಟಾರೆ ಶರೀರವೆಲ್ಲವುದಕ್ಕೂ ಚೈತನ್ಯ ಉಂಟುಮಾಡುತ್ತಿದೆ. ಆತ್ಮಶಕ್ತಿ ಶರೀರದಲ್ಲಿನ ಪ್ರತಿ ಭಾಗಕ್ಕು ಸೇರಿ, ಪ್ರತಿಭಾಗವು ತನ್ನ ಕೆಲಸವನ್ನು ನಿರ್ವಹಿಸುವುದಕ್ಕೆ ಬೇಕಾದ ಚೈತನ್ಯವನ್ನು ಕೊಡುತ್ತಿದೆ. ಆದ್ದರಿಂದ ಕಣ್ಣು ನೋಡುತ್ತಿದೆ, ಕಾಲುಗಳು ನಡೆಯುತ್ತಿವೆ, ಬಾಯಿ ಮಾತನಾಡುತ್ತಿದೆ. ಹೀಗೆ ಹೊರಗಿನ ಅವಯವಗಳೇ ಅಲ್ಲದೆ ಒಳಗಿನ ಗುಂಡಿಗೆ, ಉಸಿರಾಟಚೀಲಗಳು, ಲಿವರ್ ಮೊದಲಾದವು ನಮ್ಮ ಇಚ್ಚೆಯಲ್ಲಿ ಇಲ್ಲದ ಅವಯವಗಳು ಸಹ ಕೆಲಸಮಾಡುತ್ತಿವೆ. ಅಹರ್ನಿಶೆಗಳು ಆ ಶಕ್ತಿ ಶರೀರದಲ್ಲಿ ಹರಡಿರುವುದರಿಂದಲೇ ನಾವು ನಿದ್ರಿಸುವಾಗ ಸಹ ಗುಂಡಿಗೆ ಬಡಿದುಕೊಳ್ಳುತ್ತಿದೆ, ಉಸಿರಾಟ ಆಡುತ್ತಿದೆ.

ಆ ಶಕ್ತಿ ಯಾವ ಕ್ಷಣದಲ್ಲಿ ಗುಂಡಿಗೆ ಕೊನೆಯವರೆಗೂ ಸೇರುವುದಿಲ್ಲವೋ ಆಗಲೇ ಗುಂಡಿಗೆ ನಿಂತುಹೋಗುತ್ತದೆ. ಆದ್ದರಿಂದ ಮನುಷ್ಯ ಸಜೀವವಾಗಿ ಇದ್ದಾನೆಂದರೆ, ಮನುಷ್ಯನಲ್ಲಿನ ಅವಯವಗಳೆಲ್ಲ ಕೆಲಸಮಾಡುತ್ತಿವೆಯೆಂದರೆ, ಆ ಶರೀರದಲ್ಲಿ ಚೈತನ್ಯಶಕ್ತಿ ಶರೀರವೆಲ್ಲ ಎಲ್ಲಾ ಭಾಗಗಳಿಗು ವ್ಯಾಪಿಸಿ ಇದೆಯೆಂಬ ಮಾತು.

ಈ ಶಕ್ತಿ ರಕ್ತಪ್ರಸಾರ ಇಲ್ಲದ ನಾಡಿಗಳ ಮೂಲಕ ಪ್ರಸಾರವಾಗುತ್ತದೆ. ಯಾವಾಗಾದರೂ ಕುಳಿತುಕೊಂಡಾಗ ಕಾಲಿನೊಳಗಿನ ನರಕ್ಕೆ ಒತ್ತಡದಿಂದ ಅದರಲ್ಲಿ ಪ್ರಸಾರವಾಗುವಶಕ್ತಿಗೆ ಆತಂಕವೇರ್ಪಟ್ಟಾಗ, ಆತಂಕವೇರ್ಪಟ್ಟ ಸ್ಥಳದಿಂದ ಕೆಳಗಿನ ಭಾಗವೆಲ್ಲವೂ ಜೋಮು ಹಿಡಿದು ಸ್ಪರ್ಶ ಇಲ್ಲದ್ದಾಗಿ, ಬಲ ಇಲ್ಲದ್ದಾಗಿ ಹೋಗುತ್ತದೆ. ಅದು ಗಮನಿಸಿದ ನಾವು ಸ್ವಲ್ಪ ಕದಲುವುದರಿಂದ ಮತ್ತೆ ಶಕ್ತಿ ಪ್ರಸಾರವಾಗಿ ಜೋಮು ಹಿಡಿದ ಭಾಗವೆಲ್ಲವೂ ಸ್ವಲ್ಪಕ್ಷಣಗಳಲ್ಲಿ ಚೈತನ್ಯವಂತ ವಾಗುತ್ತದೆ. ಹಾಗೆ ಒಬ್ಬ ವ್ಯಕ್ತಿಗೆ ಒಂದು ಪ್ರಮಾದದಲ್ಲಿ ಬೆನ್ನಾವು ಮಧ್ಯದೊಳಗೆ ಮುರಿದಿದೆ ಆ ವ್ಯಕ್ತಿಗೆ ಬೆನ್ನಾವು ಮುರಿದರೂ ಉಸಿರಾಟಚೀಲಗಳ ಭಾಗದಿಂದ ಕೆಳಗಿನಭಾಗ ಎಂತಹ ಸ್ಪರ್ಶವಾಗಲಿ, ನೋವಾಗಲಿ, ಅಸಲು ಅದು ಇದ್ದಂತೆ ಆಗಲಿ ತಿಳಿಯದಂತೆ ಹೋಗಿದೆ. ತುಂಡಾದ ಮೇಲ್ಭಾಗದಿಂದ ಸ್ಪರ್ಶ ನೋವು ಎಲ್ಲಾ ಇವೆ. ಆದ್ದರಿಂದ ಆತ್ಮಶಕ್ತಿ ಅಲ್ಲಿಯವರೆಗೆ ಪ್ರಸಾರವಾಗುತ್ತದೆಂದು, ಕೆಳಗಿನಭಾಗಕ್ಕೆ ಪ್ರಸಾರವಾಗದೆ ಹೋಗುವುದರಿಂದ ಅದು ಚೈತನ್ಯವನ್ನು ಕಳೆದುಕೊಂಡಿದೆ ಎಂದು ತಿಳಿಯುತ್ತಿದೆ. ಆತ್ಮಶಕ್ತಿಯನ್ನೇ ಕುಂಡಲಿಶಕ್ತಿ ಅನ್ನುವುದು ಸಹ ನಡೆಯುತ್ತಿದೆ.

ಇದನ್ನೆಲ್ಲವನ್ನು ಗಮನಿಸಿದರು ಕುಂಡಲಿಶಕ್ತಿ ಎನ್ನುವ ಚೈತನ್ಯ ಅಹರ್ನಿಶೆಗಳು ಶರೀರವೆಲ್ಲಾ ವ್ಯಾಪಿಸಿರಬಹುದೆಂದು ತಿಳಿಯುತ್ತಿದೆ. ವಾಸ್ತವ ವಿಷಯ ಹೀಗಿರುವಾಗ, ಕೆಲವರು ಜ್ಞಾನಿಗಳೆಂದುಕೊಂಡವರು ಕುಂಡಲಿಶಕ್ತಿ ನಾಭಿಸ್ಥಾನದಲ್ಲಿ ಹಾವಿನಂತೆ ಸಿಂಬೆಹಾಕಿಕೊಂಡು ನಿದ್ರೆಹೋಗುತ್ತಿದೆ ಎಂದು, ಅದನ್ನು ನಿದ್ರೆಯಿಂದ ಎಚ್ಚರಗೊಳಿಸಬೇಕೆಂದು, ಹಾಗೆ ನಿದ್ರೆಯಿಂದ ಎಚ್ಚರಗೊಳಿಸುವುದೇ ಯೋಗ

ಸಾಧನೆ ಎಂದು ಬೋಧಿಸುವುದು ಪುಸ್ತಕರೂಪವಾಗಿ ಬರೆಯುವುದು ನಡೆದಿದೆ. ಕುಂಡಲಿಶಕ್ತಿ ಎಂದರೆ ಏನೋ ತಿಳಿಯದವರೆಲ್ಲರು ಅದು ನಿಜವೇ ಎಂದು ನಂಬಿದ್ದಾರೆ. ಆ ಮಾತು ನಿಜವಲ್ಲವೆಂದು ನಿರೂಪಣೆಗೆ ಬಾರದ ಮಾತೆಂದು ತಿಳಿದುಕೊಳ್ಳದೆಹೋಗಿದ್ದಾರೆ. ಆ ಶಕ್ತಿ ನಿದ್ರಿಸುವುದು ಅಲ್ಲ. ಅದೇ ಎಚ್ಚರಿಕೆಯಲ್ಲಿರುವಾಗ ಅದಕ್ಕೆ ನಿದ್ರೆ ಎಂಬುವುದೆ ಇಲ್ಲ. ಅದು ನಿದ್ರಿಸಿದರೆ ಸರ್ವ ಶರೀರಗಳು ನಿಚ್ಛೇಷ್ಠವಾಗಿ, ನಿರ್ಜೀವವಾಗಿ ಹೋಗುತ್ತವೆ. ಈ ಶಕ್ತಿ ನಿದ್ರಿಸುತ್ತದೆನ್ನುವುದಕ್ಕೆ ಆಧಾರವಾಗಲಿ, ಶಾಸ್ತ್ರ ಆಧಾರವಾಗಲಿ, ಇಲ್ಲದಿರುವಾಗ, ಕೆಲವರು ಕುರುಡರಂತೆ ಹೇಗೆ ಹೇಳಿದ್ದಾರೋ ಅರ್ಥವಾಗಲಿಲ್ಲ. ಅದು ನಿದ್ರಿಸುವುದು ಅಲ್ಲವೆಂದು ಆತ್ಮಲಿಂಗ ಶತಕದಲ್ಲಿ ಸಹ ಒಬ್ಬಾತನು ಹೀಗಂದಿದ್ದಾನೆ.

**ಆ॥ ಕಪ್ಪು ತಾವರೆಲೆ ನಡುವೆ ರಂಧ್ರದಲ್ಲಿ**
**ಕುಂಡಲಿಯೆಂಬ ಹಾವು ಮೊಟ್ಟೆ ಇಟ್ಟು**
**ಎರಡು ಮರಿಹಾಕಿ ರಾತ್ರಿಹಗಲರಚಿತು**
**ಅಖಿಲ ಜೀವಸಂಗ ಆತ್ಮಲಿಂಗ ।**

ಮೇಲಿನ ಪದ್ಯದಲ್ಲಿ ಕುಂಡಲಿಶಕ್ತಿ ಅನ್ನುವುದು ಉಚ್ಛ್ವಾಸ ನಿಚ್ಛ್ವಾಸಗಳನ್ನು ರಾತ್ರಿಹಗಲರುಚುತ್ತಿದೆ ಎಂದು ತಿಳಿಸಿದ್ದಾನೆ. ಇದರಿಂದ ಅದು ನಿದ್ರೆ ಮಾಡುವುದು ಅಲ್ಲವೆಂದು ತಿಳಿಯುತ್ತಿದೆ. ಶರೀರ ಕಾರ್ಯಗಳೆಲ್ಲ ನಡೆಯುವುದಕ್ಕೆ ಕರ್ಮ ಕಾರಣವಾದರೆ, ಆ ಕಾರ್ಯಗಳು ನಡೆಯುವುದಕ್ಕೆ ಶರೀರಕ್ಕೆ ಕದಲಿಕೆ ಶಕ್ತಿ ಕೊಡುವುದು ಕುಂಡಲಿ (ಆತ್ಮ) ಶಕ್ತಿ. ಕರ್ಮಾನುಸಾರ ಕದಲಿಕೆಗಳಿರುವವರಿಗೆಲ್ಲ ಆ ಕದಲಿಕೆಗಳಿಗೆ ಹಿಂದೆ ಶಕ್ತಿಯಿದ್ದು ಕದಲಿಸುತ್ತಾ ಅಹರ್ನಿಶೆಗಳು ಎಚ್ಚರಗೊಂಡಿದೆ. ಮನುಷ್ಯ ನಿದ್ರಿಸುವಾಗ ಬಾಹ್ಯಶರೀರ ಕದಲದಿದ್ದರೂ, ಒಳಗಿನ ಕದಲಿಕೆಗಳಿಗೆ ನರಗಳ ಮೂಲಕ ಶಕ್ತಿಯನ್ನು ಕೊಡುತ್ತಾ, ನಾವು ಅಜಾಗ್ರತೆಯಿಂದ ನಿದ್ರೆಯೊಳಗೆ ಹೋದರೂ ಅದು ಜಾಗ್ರತೆಯಾಗಿದೆ. ಆ ಶಕ್ತಿಯನ್ನು ನಿದ್ರೆಮಾಡುತ್ತಿದೆ ಎಂದು ಹೇಳುವುದು ಬಹಳ ತಪ್ಪು.

# ಆಶ್ರಮ – ಪೋಲೀಸ್ ಸ್ಟೇಷನ್

ಈಗಿನ ಪ್ರಪಂಚದಲ್ಲಿ ಮನುಷ್ಯರೆಲ್ಲರೂ ಯಾರ ಕೆಲಸ ಅವರು ಮಾಡಿಕೊಳ್ಳುತ್ತಾ ಹೋಗುತ್ತಿದ್ದಾರೆ. ಅವರಿಗಿಷ್ಟಬಂದ ಕೆಲಸ ಮಾಡುವುದೇ ಅವರ ಉದ್ದೇಶ. ಆ ಕೆಲಸದಲ್ಲಿ ಇತರರಿಗೆ ಕಷ್ಟವೆಷ್ಟು, ನಷ್ಟವೆಷ್ಟು ಎಂದು ಯೋಚಿಸದೆ ಕೇವಲ ತನ್ನ ಲಾಭ, ತನ್ನ ಸುಖಕ್ಕೋಸ್ಕರ ಮಾಡುತ್ತಿದ್ದಾರೆ. ಹೀಗೆ ನಾವು ಮಾಡುವ ಕೆಲಸಗಳಲ್ಲಿ ಕೆಲವು ಒಳ್ಳೆಯವು ಇರಬಹುದು, ಕೆಲವು ಕೆಟ್ಟವು ಇರಬಹುದು. ಅವು ಯಾವಾದರೂ ಆಗ ತನಗೆ ಬೇಕಾದ ಕೆಲಸವನ್ನೇ ಮಾಡುತ್ತಾನಾಗಲಿ ಯಾರೂ ಇದು ಒಳ್ಳೆಯದು ಎಂದು, ಅಥವಾ ಕೆಟ್ಟದು ಎಂದು ತಿಳಿಯುವುದಿಲ್ಲ. ಯಾವಾಗಾದರೂ ಒಂದುಸಲ ಆ ಯೋಚನೆ ಬಂದಾಗಾದರೂ ತಾನು ಮಾಡುತ್ತಿರುವುದು ಒಳ್ಳೆಯದೆಂದೇ ಅಂದುಕೊಳ್ಳುತ್ತಾನೆ. ಯಾರಾದರೂ ಪಕ್ಕದ ವ್ಯಕ್ತಿ ನೀನು ಮಾಡುತ್ತಿರುವುದು ಸರಿಯಲ್ಲವೆಂದು ತಿಳಿಸಿದರೂ, ತಾನು ಮಾಡುತ್ತಿರುವುದು ಸರಿಯಾದುದೇ ಅದಕ್ಕೆ ಮಾಡುತ್ತಿದ್ದೇನೆನ್ನುತ್ತಾನೆ.

ಯಾರು ಯಾವ ಕೆಲಸ ಮಾಡುತ್ತಿದ್ದರೂ ಅವುಗಳನ್ನು ಒಳ್ಳೆಯಕೆಟ್ಟವು ಎಂದು ಹೇಗೆ ನಿರ್ಣಯಿಸುತ್ತೇವೆ? ಒಳ್ಳೆಯವನು ಒಳ್ಳೆಯ ಕೆಲಸ ಮಾಡುತ್ತಿರುವಾಗ ಅದನ್ನು ಕೆಟ್ಟವನು ಕೆಟ್ಟಕೆಲಸ ಅಂದುಕೊಳ್ಳಬಹುದಲ್ಲವೆ! ಕೆಟ್ಟವನ ದೃಷ್ಟಿಗೆ ಒಳ್ಳೆಯ ಕೆಲಸ ಕೆಟ್ಟದಾಗಿ, ಕೆಟ್ಟಕೆಲಸ ಒಳ್ಳೆಯದಾಗಿ ತೋಚುತ್ತದಲ್ಲವೆ! ಅಂತಹದರಲ್ಲಿ ಕೆಲಸಗಳನ್ನು ಇವು ಒಳ್ಳೆಯವು, ಇವು ಕೆಟ್ಟವು ಎಂದು ಹೇಗೆ ನಿರ್ಣಯಿಸುತ್ತೇವೆ? ಅವುಗಳನ್ನು ನಿರ್ಣಯಿಸುವುದಕ್ಕೆ ಏನಾದರೂ ಮಾರ್ಗವಿದೆಯಾ? ಎಂದು ಯೋಚಿಸಿದರೆ ಇದೆಯೆಂದೇ ತಿಳಿಯುತ್ತದೆ. ನೀತಿ, ನ್ಯಾಯ ಅನ್ನುವ ಸೂತ್ರ ಗಳಿಂದ ಯಾವ ಕಾರ್ಯದಲ್ಲಾದರೂ ಒಳ್ಳೆಯ ಕೆಟ್ಟವುಗಳು ನಿರ್ಣಯಿಸಬಹುದು. ನೀತಿಸೂತ್ರಗಳು ಇವು ಎಂದು ಎಷ್ಟೋ ಜನ ದೊಡ್ಡವರು ತಿಳಿಸಿದ್ದಾರೆ. ನೀತಿಗೆ ಒಳಪಟ್ಟು ಮಾಡಿದ ಕೆಲಸಗಳು ನ್ಯಾಯವಾದವಾಗಿರುತ್ತವೆ. ಅವಿನೀತಿಗೆ ಒಳಪಟ್ಟು ಮಾಡಿದ ಕಾರ್ಯಗಳು ಅನ್ಯಾಯವಾದವಾಗಿ ಇರುತ್ತವೆ. ಇದೆಲ್ಲವೂ ಹೊರಗೆ ಕಾಣಿಸುವ ತಂತು ಎಂದೇ ಹೇಳಬಹುದು. ಹೊರಗಿನ

ಕಾರ್ಯಗಳಿಗೆ ಫಲಿತ ಹಣ ರೂಪವಾಗಿಯೋ, ಧಾನ್ಯರೂಪವಾಗಿಯೋ, ವಸ್ತುರೂಪವಾಗಿಯೋ ಬರುತ್ತದೆಂದು ಎಲ್ಲರಿಗೂ ತಿಳಿಯುತ್ತದೆ. ಆದರೆ ಕಣ್ಣಿಗೆ ಕಾಣಿಸದ ಫಲಿತ ಪ್ರತಿ ಕಾರ್ಯದಲ್ಲಿಯೂ ಬರುತ್ತಿದೆ ಎಂದು ಬಹಳಜನರಿಗೆ ತಿಳಿದಿಲ್ಲ. ಆ ತಿಳಿಯದ ಫಲಿತವೇನೆಂದರೆ ಒಂದು ಪಾಪ, ಎರಡನೆಯದು ಪುಣ್ಯ. ಕಾರ್ಯಚರಣೆಯಲ್ಲಿ ಪಾಪಭೀತಿ ಇಲ್ಲದಂತೆ ಪಾಪಬರುವ ಕೆಲಸಗಳು ಬಹಳಜನರು ಮಾಡುತ್ತಿದ್ದಾರೆ.

ಒಂದು ಸೂತ್ರದ ಪ್ರಕಾರ ಕೆಟ್ಟ ಅವಿನೀತಿ ಕೆಲಸಗಳು ಮಾಡುವುದರಿಂದ ಪಾಪ, ಒಳ್ಳೆಯ ನೀತಿ ಕೆಲಸಗಳು ಮಾಡುವುದರಿಂದ ಪುಣ್ಯ ಬರುತ್ತದೆಂದು ತಿಳಿದುಕೊಂಡಿದ್ದೇವಲ್ಲ! ಪಾಪದಿಂದ ಬರುವ ಫಲಿತವು (ಅನುಭವ) ಏನೆಂದು, ಹಾಗೆ ಪುಣ್ಯದಿಂದ  ಬರುವ ಅನುಭವ (ಫಲಿತ) ಏನೆಂದು ಪ್ರಶ್ನೆ ಸಹ ಉಂಟಾಗುತ್ತಿದೆ. ಅದಕ್ಕೆ ಉತ್ತರ ಪುಣ್ಯ ಮಾಡುವುದರಿಂದ  ಉಂಟಾಗುವ ಫಲಿತ ಸುಖಸಂತೋಷಗಳು, ಹಾಗೆ ಪಾಪ ಮಾಡುವುದರಿಂದ ಫಲಿತ ಕಷ್ಟ ದುಃಖ ಉಂಟಾಗುತ್ತದೆ. ಈ ಜನ್ಮದಲ್ಲಿ ಒಂದು ಕೆಲಸ ಮಾಡುವುದರಿಂದ ಸಂಭವಿಸುವ ಕಣ್ಣಿಗೆ ಕಾಣಿಸದ ಪಾಪವಾಗಲಿ, ಪುಣ್ಯವಾಗಲಿ ಈ ಜನ್ಮದಲ್ಲಿಯೇ ಅನುಭವಕ್ಕೆ ಬರುತ್ತದಾ? ಅನ್ನುವ ಪ್ರಶ್ನೆ ಉದ್ಭವಿಸಿದಾಗ ಒಂದು ಜನ್ಮದಲ್ಲಿ ಮಾಡಿದ ಪಾಪವಾಗಲಿ, ಪುಣ್ಯವಾಗಲಿ ಆ ಜನ್ಮದಲ್ಲಿಯೇ ಅನುಭವಕ್ಕೆ ಬರುವುದಿಲ್ಲ. ಮತ್ತೆ ಬರುವ ಜನ್ಮಗಳಲ್ಲಿ ಬರುತ್ತದೆ ಎಂದು ತಿಳಿಯುತ್ತಿದೆ. ಒಂದು ಕೆಟ್ಟ ಕೆಲಸ ಮಾಡಿದರೂ ಹೊರಗೆ ಕಾಣಿಸುವ ಅನುಕೂಲವಾದ ಫಲಿತದ ಮೇಲೆ ದೃಷ್ಠಿ ಕೇಂದ್ರಿಕರಿಸುವುದರಿಂದ, ಕಣ್ಣಿಗೆ ಕಾಣಿಸದ ಪಾಪಪುಣ್ಯಗಳು ಕಣ್ಣಿಗೆ ಕಾಣಿಸದೆ ಅವುಗಳ ಅನುಭವ ಆ ಜನ್ಮದಲ್ಲಿ ಇಲ್ಲದೇ ಹೋಗುವುದರಿಂದ, ಮಾನವನು ಕೆಟ್ಟದು ಯಾವುದೆಂಬ ಯೋಚನೆ ಇಲ್ಲದಂತೆ ಬಾಹ್ಯ ಪ್ರಪಂಚ ಕೋರಿಕೆಗಳ ಮೇಲೆ ಆಧಾರಬಿದ್ದು ಕೆಲಸಮಾಡುತ್ತಿದ್ದಾನೆ.

ಒಬ್ಬನನ್ನು ಮೋಸ ಮಾಡುವುದರಿಂದ ಇನ್ನೊಬ್ಬನಿಗೆ ಸ್ವಲ್ಪ ಹಣ ಬರುತ್ತದೆ. ಒಬ್ಬನನ್ನು ಹತ್ಯೆ ಮಾಡುವುದರಿಂದ ಆತನ ಆಸ್ತಿ ಎಲ್ಲಾ ಇನ್ನೊಬ್ಬನಿಗೆ

ಲಭಿಸುತ್ತದೆ. ಹೀಗೆ ಅವನಿಗೆ ಬರುವ ಲಾಭದ ಮೇಲೆಯೇ ಮಾನವನ ದೃಷ್ಟಿ ಇರುವುದರಿಂದ ತನ್ನ ಮೆದಳಿನಲ್ಲಿ ಪಾಪಬರುತ್ತದೆಂಬ ಭಯ ಇಲ್ಲದಂತೆ ಇಷ್ಟಬಂದ ಕಾರ್ಯಗಳು ಮಾಡುತ್ತಿದ್ದಾನೆ. ಪ್ರಜೆಗಳು ಕೆಟ್ಟಕಾರ್ಯಗಳು ಮಾಡದಂತೆ ಪ್ರಭುತ್ವವು ಎಷ್ಟೋ ಕಟ್ಟುದಿಟ್ಟಗಳು ಮಾಡಿದೆ. ಮೋಸಗಾರರನ್ನು, ಹಂತಕರನ್ನು, ಕುತಂತ್ರಗಳು ಮಾಡುವವರನ್ನು, ಹತ್ಯಾಚಾರ ಮಾಡುವವರನ್ನು, ಕಳ್ಳರನ್ನು ಕಂಡುಹಿಡಿದು ಹಿಡಿದುಕೊಳ್ಳುವುದಕ್ಕೆ, ಅಂತಹ ಕೆಲಸಗಳು ಮಾಡದಂತೆ ಕೆಟ್ಟವರನ್ನು ತಡೆಗಟ್ಟುವುದಕ್ಕೆ, ಒಳ್ಳೆಯವರಿಗೆ ರಕ್ಷಣೆ ಕೊಡುವುದಕ್ಕೆ, ಪ್ರಭುತ್ವ ರಕ್ಷಣಭಟರನ್ನು (ಪೊಲೀಸರನ್ನು), ಪೊಲೀಸ್ ಸ್ಟೇಷನ್‌ಗಳನ್ನು ನಿಯಮಿಸಿದೆ. ತಪ್ಪು ಮಾಡಿದವರನ್ನು ವಿಚಾರಿಸುವುದಕ್ಕೆ ನ್ಯಾಯಸ್ಥಾನಗಳು, ನ್ಯಾಯಾಧಿಪತಿ ಗಳನ್ನು, ಶಿಕ್ಷೆ ಅನುಭವಿಸುವುದಕ್ಕೆ ಜೈಲನ್ನು ನಿಯಮಿಸಿದೆ. ಪ್ರಭುತ್ವ ಒಂದರ ಉದ್ದೇಶ ಒಳ್ಳೆಯದೆ ಆದರೂ ಪ್ರಭುತ್ವಕಾರ್ಯಗಳಿಂದ ಕೆಟ್ಟದು ಎಷ್ಟರಮಟ್ಟಿಗೆ ಹೋಗಿದೆ ಎಂದು ಯೋಚಿಸಿದರೆ, ಪ್ರಜೆಗಳಲ್ಲಿ ಕೆಟ್ಟದು ನಶಿಸದಿರುವುದೇ ಅಲ್ಲದೆ ಮತ್ತಷ್ಟು ಹೆಚ್ಚಾಗುತ್ತಿದೆ. ಯೋಚಿಸಿದರೆ ಪ್ರತಿಮನುಷ್ಯನಿಗು ಒಬ್ಬ ಪೊಲೀಸ್ ಕಾವಲು ಇದ್ದರೂ ಮನುಷ್ಯ ಕೆಟ್ಟದನ್ನೇ ಮಾಡುವುದಕ್ಕೆ ಪ್ರಯತ್ನಿಸುತ್ತಾನೆ. ಆದರೆ ದಂಡಿಸುವವರು, ಶಿಕ್ಷಿಸುವವರು ಇದ್ದಾರಲ್ಲ ಎಂದು ಯೋಚಿಸುವುದಿಲ್ಲ. ಆದ್ದರಿಂದ ದರೋಡೆಗಳು, ಹತ್ಯೆಗಳು, ಮೋಸಗಳು ಪ್ರಜೆಗಳಲ್ಲಿ ಹೆಚ್ಚಾಗಿ ಹೋಗುತ್ತಿವೆಯಾಗಲಿ ಕಡಿಮೆಯಾಗುತ್ತಿಲ್ಲ. ಮೂಲಕಾರಣ ಮಾನವನಲ್ಲಿ ಪಾಪಭೀತಿ ಇಲ್ಲದೆ ಹೋಗುವುದೇ.

ಇನ್ನೂ ಯೋಚಿಸಿದರೆ ಪ್ರಭುತ್ವ ಎಷ್ಟೋ ಹಣ ಖರ್ಚುಮಾಡಿ ಪೊಲೀಸ್ ಸ್ಟೇಷನ್‌ಗಳನ್ನು ಹೆಚ್ಚು ಮಾಡುತ್ತಾಹೋದರೂ, ಪ್ರಭುತ್ವ ಆಸೆಪಟ್ಟ ಫಲಿತ ಇಲ್ಲದಿರುವುದಕ್ಕೆ ಕಾರಣ ಎಲ್ಲರಲ್ಲಿ ಅಲ್ಲದೆ ಕೆಲವು ಮಂದಿ ಪೊಲೀ ಸರಲ್ಲಿಯೂ ಸಹ ಸ್ವಲ್ಪಲೋಪ ಕಾಣಿಸುತ್ತಿದೆ. ಪೊಲೀಸ್ ಉದ್ಯೋಗ ಮಾಡುವವರು ಸಹ ಮನುಷ್ಯರೇ ಆದ್ದರಿಂದ ಅವರಲ್ಲಿಯೂ ಸಹ ಒಳ್ಳೆಯಕೆಟ್ಟ ಗುಣಗಳು ಇರುವುದರಿಂದ, ಕೆಲವರು ಅವರ ವೃತ್ತಿಯಲ್ಲಿ ಸಹ ಸ್ವಲ್ಪ ಕೆಡಕು

ಹೊಂದಿರುತ್ತಾರೆ. ಕೆಲವರು ದೋಷಿಗಳು ಪೊಲೀಸರ ಕೈಯಲ್ಲಿ ದೊರೆತಾಗ ಆ ದೋಷಿಗಳು ಪೊಲೀಸರಿಗೆ ಹಣದ ಆಸೆ ತೋರಿಸಿ ತಪ್ಪಿಸಿಕೊಳ್ಳುತ್ತಿದ್ದಾರೆ. ಪೊಲೀಸರು ಸಹ ಮನುಷ್ಯರಾಗಿರುವುದರಿಂದ ಕೆಲವರು ಇದು ಕೆಟ್ಟಕೆಲಸ ಎಂದು ಯೋಚಿಸದೆ, ಪಾಪಬರುತ್ತದೆಂದು ತಿಳಿಯದೆ, ಅವಿನೀತಿಪರರಾಗಿ ಹೋಗುತ್ತಿದ್ದಾರೆ. ಕೆಲವರು ಪೊಲೀಸ್ ಇನ್‌ಸ್ಪೆಕ್ಟರ್ಸ್ ಎಲ್ಲೂ ಇಲ್ಲದ ಗರ್ವಗುಣ ಪ್ರಭಾವದಿಂದ ಯಾವ ಊರಿನಲ್ಲಿ ಉದ್ಯೋಗ ಮಾಡುತ್ತಿದ್ದರೆ ಆ ಊರಿಗೆ ತಾನೆ ರಾಜನೆಂದು ಊಹಿಸಿಕೊಂಡು, ತನ್ನ ಇಷ್ಟಬಂದಂತೆ ಪ್ರವರ್ತಿಸುತ್ತಿರುತ್ತಾರೆ. ಜೂದರನ್ನು ಕುಡುಕರನ್ನು ತಡೆಗಟ್ಟುವುದಕ್ಕೆ ಪ್ರಭುತ್ವ ನಿಯಮಿಸಿದರೆ ಅವುಗಳನ್ನು ನಿರ್ವಹಿಸುವವರೊಂದಿಗೆ ಲಾಲೂಚಿ ಬಿದ್ದು ಆ ಕೆಲಸಗಳು ಸಾಗಿಹೋಗುವುದಕ್ಕೆ ಅವಕಾಶಕಲ್ಪಿಸುತ್ತಿದ್ದಾರೆ. ದೊಡ್ಡ ದೊಡ್ಡ ಕಳ್ಳ ರವಾನೆಗಳು, ಮಾಡುವವರನ್ನು, ಲಕ್ಷಗಳಿಂದ ಮೋಸಗಳು ಮಾಡುವವರನ್ನು ಸಮಾಜದಲ್ಲಿ ಕೆಟ್ಟದು ಮಾಡುವ ವರನ್ನು, ಹತ್ಯೆಗಳು, ಮಾನಭಂಗಗಳು ಮಾಡುವವರನ್ನು ನೋಡಿ ನೋಡದಂತೆ ಬಿಟ್ಟುಹಾಕುತ್ತಾ ಏನು ತಿಳಿಯದ ಅಮಾಯಕರನ್ನು, ಗೌರವಸ್ತರ ಮೇಲೆ ತನ್ನ ದೊಡ್ಡತನವನ್ನು ಪ್ರಕಟಿಸಿಕೊಳ್ಳುವುದಕ್ಕೆ ಕೈ ಮಾಡಿಕೊಳ್ಳುತ್ತಿದ್ದಾರೆ. ಈ ಕಡೆ ಪ್ರಜೆಗಳು ಈ ಕಡೆ ಪೊಲೀಸರೂ ಉಳಿದ ಎಲ್ಲಾ ಪ್ರಭುತ್ವ ರಂಗಗಳ ಕೆಲಸದವರೂ ಅವಿನೀತಿ ಅಕ್ರಮಗಳಲ್ಲಿ ಸಿಲುಕಿಕೊಂಡಿದ್ದಾರೆಂದರೆ ಅದು ಪ್ರಕೃತಿ ಸಹಜವೆ. ಏಕೆಂದರೆ ಪ್ರತಿಯೊಬ್ಬರಲ್ಲಿ ಪ್ರಕೃತಿ ಸಿದ್ದವಾದ ಗುಣಗಳಿರುವುದರಿಂದ ಒಳ್ಳೆಯ ಕೆಟ್ಟ ಗುಣಗಳು ಉದ್ರೇಕಗೊಳ್ಳುತ್ತಿರುತ್ತವೆ. ಅಂತಹ ಸಮಯದಲ್ಲಿ ತಮ್ಮಲ್ಲಿನ ಗುಣಪ್ರಭಾವ ತಿಳಿಯದ ಮನುಷ್ಯ ಯಾವ ಡಿಪಾರ್ಟ್‌ಮೆಂಟಿನಲ್ಲಿ ಕೆಲಸಮಾಡುವವನಾದರೂ ಪಾಪಭೀತಿ ತಿಳಿಯದೆ, ಕೆಟ್ಟಕಾರ್ಯಗಳು ಮಾಡುವು ದಕ್ಕೆ ಅವಕಾಶವಿದೆ. ಒಳ್ಳೆಯ ಫಲಿತ ಕೊಡದೆ ಕೆಡಕು ಸಾಗಿಹೋ ಗುತ್ತಿರುವುದಕ್ಕೆ ಕಾರಣ ಮನುಷ್ಯನಿಗೆ ಪಾಪದ ವಿವರ ತಿಳಿಯದೆ ಹೋಗುವುದೇ.

ಮಾನವರಿಗೆ ಪಾಪಪುಣ್ಯ ವಿವರ ತಿಳಿಸಬೇಕೆಂದರೆ, ಅವರನ್ನು ಕೆಟ್ಟದರಿಂದ ಒಳ್ಳೆಯಕಡೆ, ಒಳ್ಳೆಯದರಿಂದ ಇನ್ನೂ ಉನ್ನತ ಸ್ಥಿತಿಗೆ ಮರಳಿ

ಸಬೇಕೆಂದರೆ, ಒಬ್ಬ ಗುರುವಿನಿಂದಲೇ ಸಾಧ್ಯವಾಗುತ್ತದೆ. ಪಾಪಪುಣ್ಯ ವಿವರ ತಿಳಿಸಿ, ಕರ್ಮವನ್ನು ಹೇಗೆ ನಿರೋಧಿಸಬೇಕೋ ತಿಳಿಸಿ, ಗುಣ ಪ್ರಭಾವಗಳು ತಿಳಿಸಿ, ಮಾನವನ ಶರೀರದಲ್ಲಿನ ಮನಸ್ಸಿನ ವಿವರ ತಿಳಿಸಿ, ಗುರುಗಳು ಎಂತಹ ಕಠಿಣಾತ್ಮರನ್ನಾದರೂ, ಎಂತಹ ಹಂತಕರನ್ನಾದರೂ ಸುಲಭವಾಗಿ ಬದಲಾಯಿಸುತ್ತಾರೆ. ಹೊರಗಿನ ಶಿಕ್ಷೆಯಿಂದ ಮಾನವನು ಬದಲಾಗುವುದಿಲ್ಲ ವೆಂದು, ಅವನಲ್ಲಿನ ಮನಸ್ಸು ಗುಣಗಳು ಬದಲಾದಾಗ ಬದಲಾಗುತ್ತಾನೆಂದು ಗುರುಗಳಿಗೆ ತಿಳಿದಿದೆ. ಶಿಕ್ಷಿಸುವ ಅಧಿಕಾರ ಮಾನವರಲ್ಲಿನ ಸಹಜತ್ವವನ್ನು ಬದಲಾಯಿಸುವುದಿಲ್ಲ. ವಿವರ ಹೇಳುವುದರಿಂದಲೇ ಮನುಷ್ಯನಲ್ಲಿನ ಸಹಜತ್ವ ಬದಲಾಗುತ್ತದೆ. ಅಜ್ಞಾನಿ ಉನ್ನತವಾದ ಜ್ಞಾನಿಯಾಗುತ್ತಾನೆ. ಭಗವದ್ಗೀತೆಯಲ್ಲಿ ಭಗವಂತನು ಸಹ ದುರ್ಮಾರ್ಗರ ಸಂಖ್ಯೆಯನ್ನು ಕಡಿಮೆಮಾಡುವುದಕ್ಕೆ ಸನ್ಮಾರ್ಗರ ಸಂಖ್ಯೆಯನ್ನು ಹೆಚ್ಚಿಸುವುದಕ್ಕೆ ಧರ್ಮಗಳನ್ನು ಬೋಧಿಸುತ್ತೇ ನೆಂದಿದ್ದಾನೆ. ಆದರೆ ಎಲ್ಲಿಯೂ ಶಿಕ್ಷಿಸಿ ಚೆನ್ನಾಗಿಮಾಡುತ್ತೇನೆಂದು ತಿಳಿಸಲಿಲ್ಲ. ಹೊರಗಿನ ದಂಡನೆಗೆ ಬದಲಾಗದಂತೆ ತಪ್ಪುಮಾಡಿ ಶಿಕ್ಷೆಯನ್ನು ಹೇಗೆ ತಪ್ಪಿಸಿ ಕೊಳ್ಳಬೇಕೆಂದು ಯೋಚಿಸುವವನು, ತನ್ನ ಶರೀರದಲ್ಲಿ ಈ ಕೆಲಸ ಮಾಡುವು ದರಿಂದ ನನಗೆ ಪಾಪ ಬರುತ್ತದಲ್ಲವೆ! ಪಾಪ ತಪ್ಪದೆ ನಾನು ಅನುಭವಿಸಬೇಕಲ್ಲವೆ ಎಂದು ಅವನಿಗೆ ಭಯ ಉಂಟಾದಾಗ ತಪ್ಪುಮಾಡದೆ ಇರುತ್ತಾನೆ.

ಕೆಲವರು ಗುರುಗಳು ಮಾನವನಿಗೆ ಪಾಪಭಯ ಹುಟ್ಟುವುದಕ್ಕೆ ಮತ್ತು ಪಾಪ ಕೆಲಸಗಳು ಮಾಡದಂತೆ ಯಮಲೋಕವೊಂದಿದೆ ಎಂದು, ಅಲ್ಲಿ ನಾವು ಮಾಡಿರುವ ಕೆಟ್ಟಕೆಲಸಗಳಿಗೆ ಯಮಲೋಕದಲ್ಲಿ ಹೊಡೆಯುವುದು, ಕೊಯ್ಯುವುದು, ಸುಡುವುದು, ಬಿಸಿ ಎಣ್ಣೆಯಲ್ಲಿ ಹಾಕುವುದು, ಕಾಗೆಗಳಿಂದ ತಿವಿಸುವುದು, ಚೇಳು ಹಾವುಗಳಿಂದ ಕಚ್ಚಿಸುವುದು, ಶೂಲಗಳಿಂದ ಕೆತ್ತಿಸುವುದು ಮೊದಲಾದ ವಿವಿಧ ಹಿಂಸೆಗಳಿರುತ್ತವೆಂದು ತಿಳಿಸಿ ಪಾಪಭೀತಿ ಹುಟ್ಟಿಸಿದ್ದಾರೆ. ಆದ್ದರಿಂದ ಯಾವ ಕೆಲವರಿಗೋ ಬದಲಾವಣೆ ಬಂದಿರುತ್ತದೆ. ಎಲ್ಲರಲ್ಲಿಯೂ ಬದಲಾವಣೆಬರಲಿಲ್ಲ. ಕಾರಣವೇನೆಂದರೆ ಕೆಲವರು ಯಮಲೋಕ ಇದೆಯೆಂದು

ಕೇಳಿದರೂ, ಅಲ್ಲಿಗೆ ಹೋದಾಗ ತಾನೆ ಅನುಭವಿಸುವುದು ಆಗ ನೋಡಬಹುದೇ ಳೆಂದು, ಅಲ್ಲನುಭವಿಸುವುದು ಏನಾದರೇನು ಈಗ ಅನುಕೂಲವಾದ ಕೆಲಸಗಳು ಏಕೆ ಬಿಡಬೇಕೆಂದು, ಅಲ್ಲನುಭವಿಸುವುದು ಯಾರು ನೋಡಿದ್ದಾರೆಂದು ಹೀಗೆ ಅಂದುಕೊಳ್ಳುತ್ತಾ ಅವರಿಗಿಷ್ಟಬಂದ ಕೆಲಸಗಳು ಮಾಡುತ್ತಾ ಹೋಗುತ್ತಿದ್ದಾರೆ. ಇದು ಸ್ವಲ್ಪ ಹಿಂದಿನಕಾಲದ ಮಾತು. ಈ ದಿನ ಯುವಕರಾಗಿರುವವರ ಮಾತಿಗೆ ಬಂದರೆ ಅವರಿಗೆ ಯಮಲೋಕವೆಂಬ ವಿಷಯ ಸಹ ತಿಳಿದಿಲ್ಲ. ಅಸಲು ಪಾಪವೆಂಬ ವಿಷಯವೇ ತಿಳಿಯದೆ ಹೋಗಿದೆ.

ಇಂತಹ ಸಮಾಜಕ್ಕೆ ಕರ್ಮ ವಿವರ ತಿಳಿದ ಗುರುಗಳು ಎಷ್ಟೋ ಅಗತ್ಯ. ಆದರೆ ಈ ದಿನ ಗುರುಗಳೆಂದರೆ ತಿಳುವಳಿಕೆ ಇಲ್ಲದವರ ಕೆಳಗೆ ಜಮಕಟ್ಟುವ ಸಮಾಜವೇರ್ಪಟ್ಟಿದೆ. ಪ್ರಭುತ್ವ ಪೋಲೀಸ್ ಸ್ಟೇಷನ್‌ಗಳನ್ನು ಹೆಚ್ಚಿಸುತ್ತಾ ಹೋಗುತ್ತಿಯಾಗಲಿ, ಎಲ್ಲಾದರೂ ಆಶ್ರಮಗಳು ನಿರ್ಮಿಸಿ ಗುರುಗಳಿಗೆ ಪೋಷಣೆ ಕೊಟ್ಟು, ಸತ್ ಪ್ರವರ್ತನೆ ಹೊಂದುವ ಸದ್ಬೋಧನೆಗಳು ಮಾಡಲು ತಿಳಿಸುತ್ತಿಲ್ಲ. ಇತರ ಮತಗಳಲ್ಲಿ ಗುರುಗಳಿಗೆಷ್ಟೋ ಉನ್ನತಸ್ಥಾನವಿದೆ. ಅವರ ಮಾತನ್ನು ತೂಚ ತಪ್ಪದೆ ಆಚರಿಸುತ್ತಿದ್ದಾರೆ. ಸಿಕ್ಕರಮತದಲ್ಲಿ ಗುರುಗಳ ಆಜ್ಞೆಯನ್ನು ಎಷ್ಟೋ ಉನ್ನತವಾದ ಪದವಿಯಲ್ಲಿ ಇರುವವನು ಸಹ ಆಚರಿಸುತ್ತಿದ್ದಾರೆ. ಒಂದುಸಲ **ಪಂಜಾಬ್ ಮುಖ್ಯಮಂತ್ರಿ ಬರ್ನಾಲ** ಮತಪರವಾದ ತಪ್ಪು ಮಾಡಿರುವುದಕ್ಕೆ ಗುರುಗಳು ವಿಧಿಸಿದ ಶಿಕ್ಷೆ ಪ್ರಕಾರ ಅವರ ಮಂದಿರವಾದ ಗುರುದ್ವಾರದಲ್ಲಿನ ಸ್ಥಂಭಕ್ಕೆ ಕಟ್ಟಿಹಾಕಲ್ಪಟ್ಟು ನಂತರ ಅಲ್ಲಿಗೆ ಬರುವ ಭಕ್ತರ ಚಪ್ಪಲಿಗಳ ದೂಳನ್ನು ಒರೆಸಿದ್ದಾನೆ.

ನೋಡಿದಿರಲ್ಲ! ಅವರಲ್ಲಿನ ಗುರುಭಕ್ತಿ. ಹಾಗೆಯೇ ಮುಸ್ಲೀಮ್‌ರು ಅವರ ಮತ ಹಿರಿಯರನ್ನೇ ಅರಬ್ ದೇಶಗಳಲ್ಲಿ ಪರಿಪಾಲಕರಂತೆ ರಾಜರಂತೆ ಇಟ್ಟುಕೊಂಡಿದ್ದಾರೆ. ಅವರವರ ಮತಗಳನ್ನು ಅವರು ಕಾಪಾಡಿಕೊಳ್ಳುತ್ತಾ ಮುಖ್ಯವಾದುದು ದೈವಭಕ್ತಿ ನಂತರ ಎಲ್ಲಾ ಕೆಲಸಗಳ ಆಚಾರವಿದೆ. ಆದರೆ ಹಿಂದೂಮತದಲ್ಲಿ ಗುರುಗಳನ್ನು ಅಧಿಕಾರಿಗಳು ಸಣ್ಣ ದೃಷ್ಟಿಯಿಂದ

ನೋಡುತ್ತಿದ್ದಾರೆ. ಯಾವ ಕಡೆ ಗುರುತು ಇಲ್ಲದವರಾಗಿ ಗುರುಗಳು ಸಹ ಅವರವರ ಜೀವನಕ್ಕಾಗಿ ಪರದಾಡಬೇಕಾಗಿ ಬಂದಿದೆ. ಅಂತಹ ಸಮಯದಲ್ಲಿ ಮಾನವನನ್ನು ಕಟ್ಟುದಿಟ್ಟ ಮಾಡುವ ಬೋಧನೆಗಳು ಹೇಗೆ ಬೋಧಿಸುತ್ತಾರೆ? ಬೋಧಿಸಿದರೆ ಅವರಿಗೆ ಬತ್ಯವಿರುವುದಿಲ್ಲ. ಆದ್ದರಿಂದ ಕೆಲವರು ಗುರುಗಳು ಸಹ ಪ್ಲೇಟು ಬದಲಿಸಿ ಮಾನವನಿಗೆ ಆಹ್ಲಾದಕರವಾದ ವಿಷಯವನ್ನೇ ಹೇಳುತ್ತಾ, ಇವುಗಳಿಂದ ನಿಮಗೆ ಕಷ್ಟಗಳು ಹೋಗುತ್ತವೆ, ಇವುಗಳಿಂದ ಸುಖಗಳು ಬರುತ್ತವೆ ಎಂದು ಸಹಜವಾಗಿ ಮನುಷ್ಯರು ಕೋರಿಕೊಳ್ಳುವ ಸುಖಗಳ ಸಂಬಂಧವಾದ ಬೋಧನೆಗಳನ್ನು, ಅವರ ಮನೋಭಿಷ್ಟಕ್ಕೆ ಸರಿಹೋಗುವ ಬೋಧನೆಗಳನ್ನು ಹೇಳುತ್ತಿರುತ್ತಾರೆ. ಆದರೆ ನಿಜಗುರು ಎಲ್ಲಿಯೋ ಒಂದುಕಡೆ ಪ್ರಜೆಗಳ ಇಷ್ಟದ ಪ್ರಕಾರ ಅವರಿಗೆ ಅನುಕೂಲವಾಗಿ ಅಸತ್ಯ ಬೋಧನೆ ಮಾಡಬಾರದೆಂದು ತಿಳಿದು, ಸತ್ಯವಾದ ಬೋಧನೆಗಳು ತಿಳಿಸುತ್ತಾ ಮನುಷ್ಯರನ್ನು ಗುರುಗಳ ಕಡೆ ಮರಳಿಸಬೇಕು ಆದರೆ ಗುರುಗಳು ಪ್ರಜೆಗಳ ಕಡೆ ಮರಳಬಾರದೆಂಬ ನಿರ್ಭಯದಿಂದ ಇದ್ದು, ಮಾನವನ ಮನಸ್ಸಿಗೆ ಇಷ್ಟವಾಗದಿದ್ದರೂ ಕಠಿಣವಾದರೂ ಅವರಿಗೆ ಸತ್ಯವನ್ನೇ ತಿಳಿಸುತ್ತಾರೆ. ಅಂತಹ ಬೋಧನೆಗಳು ಎಷ್ಟೋ ವಿಮರ್ಶೆಗಳಿಗೆ ಒಳಗಾದರೂ ಅವರ ಪದ್ಧತಿ ಅವರು ಬಿಡದೆ, ಮಾನವನ ಬದಲಾವಣೆಗೋಸ್ಕರ ಪ್ರಯತ್ನ ಮಾಡುತ್ತಲೇ ಇರುತ್ತಾರೆ.

ಅಂಥವರು ಮನುಷ್ಯನನ್ನು ಕೆಟ್ಟದರಿಂದ ಮರಳಿಸುವುದಕ್ಕೆ ಯಮಲೋಕವೆಂಬ ಪಾಪವನ್ನು ಕುರಿತು ಯದಾರ್ಥ ತಿಳಿಸುತ್ತಾ, ಯಮಲೋಕ ಎಲ್ಲಿಯೋ ಇಲ್ಲವೆಂದು ಹಾಗೆ ಸ್ವರ್ಗ ಸಹ ಎಲ್ಲಿಯೋ ಇಲ್ಲವೆಂದು, ಇಲ್ಲಿಯೇ ಭೂಮಿ ಮೇಲೆಯೇ ಇದೆಯೆಂದು ತಿಳಿಸುತ್ತಿರುತ್ತಾರೆ. ಹೌದು ನಿಜವೇ ಯೋಚಿಸಿದರೆ ಯಮಲೋಕದಲ್ಲಿ ಯಾವ ಭಾದೆಗಳಾದರೇ ಇವೆಯೆಂದು ಕೊಂಡಿದ್ದೇವೊ ಅವುಗಳೆ ಭೂಮಿಮೇಲೆ ಇವೆ. ಭೂಮಿಮೇಲೆಯೇ ಮಾನವನು ಕತ್ತಿಗಳಿಂದ ಇರಿಸಿಕೊಳ್ಳುತ್ತಿದ್ದಾನೆ. ನಾಯಿಗಳಿಂದ ಕಚ್ಚಿಸಿಕೊಳ್ಳುತ್ತಿದ್ದಾನೆ. ನಾನಾ ರೂಪಗಳಾಗಿ ಯಮಬಾಧೆಗಳು ಅನುಭವಿಸುತ್ತಿದ್ದಾನೆ. ಸ್ವತಃವಾಗಿ ಅನುಭವಿ

ಸುತ್ತಿದ್ದರೂ ಇವುಗಳೇ ಯಮಬಾಧೆಗಳೆಂದು ತಿಳಿದುಕೊಳ್ಳದೆ ಎಲ್ಲಿಯೋ ಯಮ ಲೋಕ ಇದೆಯೆಂದುಕೊಳ್ಳುವುದು ತಪ್ಪು. ಎಲ್ಲಿಯೋ ಇದೆಯೆಂದರೆ ಮಾನವನಿಗೆ ಅಸಲು ಭಯವಿರುವುದಿಲ್ಲ. ಇಲ್ಲಿಯೇ ಇದೆಯೆಂದು ತಿಳಿಸಿದರೆ ಹೆಜ್ಜೆಹೆಜ್ಜೆಗು ಕಾಣಿಸುತ್ತಿರುವ ಸಂಘಟನೆಗಳಿಗೆ ಮಾನವನು ಭಯಪಡುತ್ತಾ ಹೋಗುತ್ತಾನೆ. ಇಲ್ಲಿಯೇ ಅನುಭವಿಸುತ್ತಿದ್ದೇವೆನ್ನುವುದಕ್ಕೆ ಗುರುತಾಗಿ ನಮ್ಮ ಬಾಯಿಂದ ಆಗಾಗ ನಮಗೆ ತಿಳಿಯದೆಯೇ ಪಾಪ ಅನ್ನುವಪದ ಬರುತ್ತಿರುತ್ತದೆ. ಉದಾಹರಣೆಗೆ ರೈಲುಕೆಳಗೆ ಬಿದ್ದು ಒಬ್ಬ ವ್ಯಕ್ತಿ ಕಾಲು ತುಂಡಾಗಿದೆಂದುಕೊಳ್ಳೋಣ. ಆಗ ಅಲ್ಲಿಗೆ ಹೋಗಿ ನೋಡಿದವರು ಅಯ್ಯೋ ಪಾಪ ಎಂದು ಅವರಿಗೆ ತಿಳಿಯದೆಯೇ ಅವರಬಾಯಿಂದ ಹೇಳುವುದು ನಡೆಯುತ್ತಿರುತ್ತದೆ. ಹಾಗೆ ಅನ್ನುತ್ತಿರುವವರು ಇಲ್ಲಿ ನಡೆದ ಕೆಲಸಕ್ಕೆ ನಾವು ಪಾಪ ಅನ್ನುವುದಕ್ಕೆ ಏನು ಸಂಬಂಧ ಎಂದು ಯೋಚಿಸುತ್ತಿಲ್ಲ. ಹೀಗೆ ಪ್ರತಿಯೊಂದು ಕಷ್ಟದ ಹತ್ತಿರ ಅಯ್ಯೋ ಪಾಪ ಅನ್ನುವಮಾತು ಬರುವುದಕ್ಕೆ ಕಾರಣ ಪಾಪ ಎಂಬುದೇ ಈ ಕಷ್ಟಕ್ಕೆ ಕಾರಣವೆಂದು ಒಳಗಿನಿಂದ ಯಾರೋ ತಿಳಿಸಿದಂತಿದೆ.

ನಮಗೆ ಬರುವ ಕಷ್ಟಗಳು ದುಃಖಗಳಿಗೆಲ್ಲ ಪಾಪವೇ ಮೂಲ ಕಾರಣವೆಂದು ತಿಳಿದಾಗ ಪ್ರತಿಮನುಷ್ಯ ಪಾಪ ಭೂಯಿಷ್ಟವಾದ ಕೆಲಸಗಳನ್ನು ಮಾಡುವಾಗ ಹಿಂಜರಿಯುತ್ತಾನೆ. ಏಕೆಂದರೆ ಈ ಕೆಲಸ ಮಾಡಬಾರದೆಂಬ ಅಭಿಪ್ರಾಯ ಅವನ ಅಂತರಂಗದಲ್ಲಿ ಏರ್ಪಡುತ್ತಿದೆ. ಅಂತರಂಗದ ಪ್ರಕಾರವೇ ಮನುಷ್ಯರು ನಡೆದುಕೊಳ್ಳುತ್ತಿರುತ್ತಾರೆ ಆದ್ದರಿಂದ ಅವರಾಕೆಲಸಗಳು ಮಾಡುವುದಿಲ್ಲ. ಹಾಗಲ್ಲದೆ ಪಾಪವೊಂದರ ವಿವರ ತಿಳಿಯದೆ, ಅಂತರಂಗ ಮಾಡೆನ್ನುತ್ತಿದ್ದರೆ ಹೊರಗಿನ ಪೊಲೀಸರಿಗೆ ಅವನು ಭಯಪಡದೆ ಮಾಡುತ್ತಾನೆ. ಆದ್ದರಿಂದ ಈ ದಿನ ಊರೂರಿಗು ಪೊಲೀಸ್ ಸ್ಟೇಷನ್ ಇಟ್ಟರೂ, ಮಾನವರ ಕೆಟ್ಟ ಕೆಲಸಗಳಲ್ಲಿ ವ್ಯತ್ಯಾಸ ಬರದೆ ಹೆಚ್ಚಾಗುತ್ತಲೇ ಇರುತ್ತದೆಂದು ತಿಳಿಯಬೇಕು. ಪ್ರಭುತ್ವ ಪರಿಪಾಲಕರಿಗು ಸಹ ಈ ವಿಷಯ ತಿಳಿದಿಲ್ಲ, ಆದ ಕಾರಣ ಪ್ರಜೆಗಳು ಮಾಡುವ ಕೆಟ್ಟಕಾರ್ಯಗಳನ್ನು ನಿರೋಧಿಸುವುದಕ್ಕೆ ಕೇವಲ ಪೊಲೀಸ್

ಸ್ಟೇಷನ್‌ಗಳ ಮೇಲೆಯೇ ಆಧಾರಪಟ್ಟಿದ್ದಾರೆ. ಹಾಗಲ್ಲದೆ ಪಾಪಪುಣ್ಯ ವಿವರ ತಿಳಿಸುವ ಬೋಧಕನನ್ನು ಪ್ರೋತ್ಸಹಿಸಿ, ಅವರಿಗೆ ಪೋಷಣೆಗೆ ಸ್ವಲ್ಪ ವೇತನಕೊಟ್ಟು ಮಂಡಲಕ್ಕೊಬ್ಬ ಗುರುವನ್ನು ಏರ್ಪಾಟು ಮಾಡಿದರೂ ಚೆನ್ನಾಗಿರುತ್ತದೆ. ಆದ್ದರಿಂದ ಪ್ರಭುತ್ವ ಕೇವಲ ಪೋಲೀಸ್ ಸ್ಟೇಷನ್‌ಗಳನ್ನೆ ಹೆಚ್ಚಿಸಿ ಪೋಷಿಸದೆ ಆಶ್ರಮಗಳನ್ನು ಸಹ ಅಭಿವೃದ್ಧಿ ಮಾಡುವುದರಿಂದ ಮಾನವನನ್ನು ಅಜ್ಞಾನದಿಂದ ಜ್ಞಾನದ ಕಡೆ ಮರಳಿಸಿದಂತಾಗುತ್ತದೆ.

## ಕರ್ತ–ಕರ್ಮ–ಕ್ರಿಯೆ–ಸಾಕ್ಷಿ

ಆಧ್ಯಾತ್ಮಿಕದಲ್ಲಿ ಕರ್ಮ ಅನ್ನುವ ಪದ ಬಹಳ ಮುಖ್ಯವಾದುದೆಂದು. ಕರ್ಮ ಅನ್ನುವ ಪದ ಈಗಿನಕಾಲದಲ್ಲಿ ಬಹಳ ಅರ್ಥರಹಿತವಾಗಿ ಹೋಗಿದೆ ಎಂದೇ ಹೇಳಬಹುದು. ಏಕೆಂದರೆ ಮಾನವನ ದೃಷ್ಠಿಯಲ್ಲಿ ಕೆಟ್ಟಕೆಲಸಗಳನ್ನೆ ಕರ್ಮ ಅನ್ನುವುದು ನಡೆಯುತ್ತಿದೆ. ಏನಾದರು ಒಬ್ಬನಿಗೆ ಕೆಡಕು ನಡೆಯುತ್ತಿರು ವಾಗಲೋ, ಕಷ್ಟ ಬಂದಾಗಲೋ ಅವನಿಗೆ ಕರ್ಮಹಿಡಿದಿದೆ ಅನ್ನುತ್ತಾರೆ. ಆದರೆ ಒಳ್ಳೆಯದು ನಡೆದಾಗ, ಸುಖವನ್ನನುಭವಿಸುವಾಗ ಕರ್ಮವೆಂದು ಅನ್ನುವುದಿಲ್ಲ, ಹಾಗೆ ಅನ್ನದೆಹೋಗುವುದರಲ್ಲಿ ಕರ್ಮ ಎಂದರೆ ಕೇವಲ ಕೆಟ್ಟದೆಂಬುದೆ ಮನುಷ್ಯರ ನಂಬಿಕೆ ಎಂದು ತಿಳಿಯುತ್ತಿದೆ. ಇಷ್ಟೇ ಅಲ್ಲದೆ ಕರ್ಮಗಳನ್ನು ಕಾರ್ಯ ಗಳೆಂದುಕೊಂಡು, ಕಾರ್ಯಗಳು ಬೇರೆ ಕರ್ಮಗಳು ಬೇರೆ ಎಂದುಕೊಳ್ಳದೆ, ಕೆಲಸಗಳನ್ನೇ ಕರ್ಮಗಳೆಂಬ ಸಾಂಪ್ರದಾಯ ಸಹ ಮಾನವರಲ್ಲಿ ಕೆಲವರಲ್ಲಿ ಕಾಣಿಸುತ್ತಿದೆ. ಕಾರ್ಯಗಳೆಂದರೂ ಕರ್ಮಗಳೆಂದರೂ ಯಾವ ಭೇದವಿಲ್ಲದ ಅರ್ಥವೆನ್ನುವವರು ಸಹ ಇದ್ದಾರೆ. ಆದ್ದರಿಂದ ಮುಖ್ಯವಾಗಿ ಕರ್ಮವೆಂದರೆ ಏನೊ ಮೊದಲು ನಾವು ತಿಳಿಯಬೇಕು. ಕರ್ಮ ಎಂದರೆ ಏನೋ ವಿವರಿಸಿ ಕೊಂಡು ನೋಡಿದರೆ ನಾವು ಮಾಡುವ ಪ್ರತಿ ಕೆಲಸದಲ್ಲಿ ಪ್ರಪಂಚದಲ್ಲಿ ಹಣರೂಪವಾಗಿಯೋ, ಧಾನ್ಯ ರೂಪವಾಗಿಯೋ, ವಸ್ತುರೂಪ ವಾಗಿಯೋ, ಯಾವುದೋ ಒಂದು ವಿಧವಾಗಿ ಕಾಣಿಸುವ ಫಲಿತ ಬರುತ್ತಿದೆ. ಇಷ್ಟೇ ಅಲ್ಲದೆ

ಪ್ರತಿ ಕೆಲಸದಲ್ಲಿಯೂ ಕಾಣಿಸದ ಫಲಿತವು ಸಹ ಬರುತ್ತಿದೆ ಎಂದು ತಿಳಿಯಬೇಕು. ಮಾಡಿದ ಕೆಲಸ ಒಳ್ಳೆಯದಾದರೆ ಪುಣ್ಯ, ಕೆಟ್ಟದ್ದಾದರೆ ಪಾಪ ನಮಗೆ ತಿಳಿಯದೆಯೇ ಬರುತ್ತಿರುತ್ತದೆ. ಈ ವಿಧವಾಗಿ ಬರುವ ಕಾಣಿಸದ ಫಲಿತಗಳಾದ ಪಾಪ+ಪುಣ್ಯ = ಕರ್ಮ ಎಂದು ಅನ್ನುತ್ತಿದ್ದೇವೆ. ಪಾಪಪುಣ್ಯಗಳು ನಾವು ನಿತ್ಯ ಮಾಡುವ ಕೆಲಸಗಳಲ್ಲಿ ಮಿಳಿತವಾಗಿರುವಾಗ, ಎಲ್ಲರೂ ಒಳ್ಳೆಯ ಕೆಲಸವನ್ನು ಮಾಡಿ ಪುಣ್ಯವನ್ನೇ ಸಂಪಾದಿಸಿಕೊಳ್ಳಬಹುದಲ್ಲ! ಎಂದು ಕೆಲವರಂದು ಕೊಳ್ಳಬಹುದು ಅದಕ್ಕೆ ಸಮಾಧಾನವೇನೆಂದರೆ! ಪ್ರತಿ ಕೆಲಸ ನಾವು ಸ್ವತಃ ನಿರ್ಣಯ ತೆಗೆದುಕೊಂಡು ಮಾಡುತ್ತಿಲ್ಲ. ಪ್ರತಿ ಕೆಲಸದ ಹಿಂದೆ ಕರ್ಮವೊಂದರ ವಿಧಾನ ಅಡಗಿದೆ. ಗತ ಜನ್ಮದಲ್ಲಿ ಮಾಡಿಕೊಂಡ ಪಾಪಪುಣ್ಯಗಳು ಮತ್ತೆ ಬರುತ್ತಿರುವ ಜನ್ಮಗ್ಗಳಲ್ಲಿ ಕೆಲಸಗಳ ರೂಪವಾಗಿ ಜಾರಿಗೆ ಆಗುತ್ತಿವೆ. ಗತ ಜನ್ಮಗಳ ಕರ್ಮಗಳ ಪ್ರಕಾರ ನಮ್ಮ ಮೆದಳಿನಲ್ಲಿ ಆಲೋಚನೆಗಳು ಕದಲಿ ನಿರ್ಣಯವಾಗಿ ಆ ಕೆಲಸಗಳಿಗೆ ಕಾರಣವಾಗುತ್ತಿವೆ. ನಮಗೆ ತಿಳಿಯದಂತೆ ನಡೆಯುವ ಈ ವಿಧಾನ ನಮಗೆ ತಿಳಿದಿಲ್ಲ. ಆದ್ದರಿಂದ ನಮ್ಮ ಮೆದಳಿನಲ್ಲಿ ಕದಲುವ ಆಲೋಚನೆ ಗಳು ನಡೆಯುವ ನಿರ್ಣಯಗಳು ನಾವೇ ಮಾಡುತ್ತಿದ್ದೇವೆಂದು ಅಂದುಕೊಳ್ಳು ವುದು ನಡೆಯುತ್ತಿದೆ. ಆದ್ದರಿಂದ ಮುಖ್ಯವಾಗಿ ತಿಳಿದುಕೊಳ್ಳಬೇ ಕಾಗಿರುವುದು ಏನೆಂದರೆ! ಪ್ರತಿಕಾರ್ಯದ ಹಿಂದೆ ಆ ಕೆಲಸಕ್ಕೆ ಕಾರಣ ನಾವಲ್ಲವೆಂದು, ಹಾಗೆ ಪ್ರತಿಕಾರ್ಯಕ್ಕೆ ಕಾರಣವಾದುದು “ಕರ್ಮ” ಎಂದು ತಿಳಿಯಬೇಕು.

ಇನ್ನು ಕರ್ಮಗಳು ಎಷ್ಟು ವಿಧಗಳು? ಅವು ಯಾವುವು? ಅನ್ನುವ ವಿಷಯ ತಿಳಿದುಕೊಳ್ಳೋಣ. ಈ ಪ್ರಶ್ನೆಯನ್ನು ಇತರರನ್ನು ಕೇಳಿದರೆ ನೀವೆ ಹೇಳಿದ್ದೀರಲ್ಲ ಕರ್ಮ ಎರಡು ವಿಧಗಳೆಂದು, ಅವು ಪಾಪ ಪುಣ್ಯಗಳೆಂದು ಅನ್ನಬಹುದು. ಇದು ಪ್ರಶ್ನೆಗೆ ತಕ್ಕ ಸರಿಯಾದ ಉತ್ತರ ಅಲ್ಲ. ಕರ್ಮ ಎಂದರೆ ಏನು ಅಂದಾಗ ಮೇಲಿನ ಉತ್ತರ ಸರಿಹೋಗುತ್ತದೆ. ಆದರೆ ಎಷ್ಟು ವಿಧಗಳು, ಅವು ಯಾವುವು? ಅಂದಾಗ ಆ ಉತ್ತರ ಸರಿಹೋಗುವುದಿಲ್ಲ. ಆ ಪ್ರಶ್ನೆಗೆ ಸರಿಯಾದ ಉತ್ತರವೇನೆಂದರು, ಕರ್ಮ ಮೂರು ವಿಧಗಳೆಂದು, ಒಂದು

ಪ್ರಾರಬ್ಧಕರ್ಮ, ಎರಡು ಆಗಾಮಿಕರ್ಮ, ಮೂರು ಸಂಚಿತಕರ್ಮ ಎಂದು ಅವುಗಳ ಹೆಸರುಗಳನ್ನು ಹೇಳಬಹುದು. ಈ ತ್ರಿಕರ್ಮಗಳ ವಿವರವೇನೆಂದು ಯೋಚಿಸಿದರು ಹೀಗಿದೆ.

**1) ಪ್ರಾರಬ್ಧಕರ್ಮ :** ಒಬ್ಬ ಜೀವಿಯು ಹುಟ್ಟಿದಾಗಿನಿಂದ ಮರಣಿಸುವವರೆಗೂ ಮಾಡುವಕೆಲಸಗಳಿಗೆ ಕಾರಣವಾದುದನ್ನು ಪ್ರಾರಬ್ಧಕರ್ಮ ಅನ್ನುತ್ತೇವೆ. ಹುಟ್ಟಿದಾಗಿನಿಂದ ಎಷ್ಟೋ ಕಾರ್ಯಗಳು ಮಾಡುತ್ತಾ, ಅದರಲ್ಲಿನ ಕಷ್ಟ ಸುಖ ಅನುಭವಗಳನ್ನು ಪಡೆಯುತ್ತಾ ಜೀವಿಯು ಪ್ರಾರಬ್ಧಕರ್ಮವನ್ನು ಅನುಭವಿ ಸುತ್ತಿದ್ದಾನೆ. ಗತ ಜನ್ಮಗಳಲ್ಲಿ ಮಾಡಿಕೊಂಡ ಕರ್ಮಗಳ ಕೂಡಲಿ ಸ್ವಲ್ಪ ಇರುವಾಗ, ಅದರಿಂದ ಸ್ವಲ್ಪಕರ್ಮ ನಿಗಧಿಸಲ್ಪಟ್ಟು, ಅದು ಜೀವನ ಪ್ರಾರಂಭಮಾಡಿದ ಕ್ಷಣದಿಂದ ಜೀವನ ಸಾಕುಮಾಡುವವರೆಗೂ ಮಾನವನನ್ನು ಆಡಿಸುತ್ತದೆ. ಆ ವಿಧವಾಗಿ ಒಂದು ಜನ್ಮದಲ್ಲಿ ಮಾನವನ ಕದಲಿಕೆಗಳನ್ನು ಕ್ರಮ ಮಾಡಿ ನಡೆಸುವ ಕರ್ಮವನ್ನು ಪ್ರಾರಬ್ಧಕರ್ಮ ಎನ್ನುತ್ತೇವೆ. ಜೀವನದಲ್ಲಿ ನಿಗಧಿಸಲ್ಪಟ್ಟ ಪ್ರಾರಬ್ಧ ಕರ್ಮದ ಪ್ರಕಾರ ಪ್ರತಿ ಜೀವರಾಶಿ ಕದಲಿ ಕೆಲಸ ಮಾಡಿ ಅದರಲ್ಲಿನ ಕಷ್ಟ ಸುಖಗಳನ್ನು ಅನುಭವಿಸಬೇಕಾಗಿದೆ. ಪ್ರಾರಬ್ಧಕರ್ಮ ಪ್ರತಿ ಜೀವರಾಶಿ ತಲೆಯಲ್ಲಿ ಸೂಕ್ಷ್ಮರೂಪವಾಗಿ ನಿಕ್ಷಿಪ್ತವಾಗಿರುವ ಕರ್ಮಚಕ್ರದಲ್ಲಿ ನೆಲೆಸಿದ್ದು, ಕಾಲಕ್ರಮದಲ್ಲಿ ಜಾರಿಗೆ ಬರುತ್ತಿದೆ. ಒಂದು ಕರ್ಮ ಕಾರ್ಯರೂಪ ಆಗಬೇಕೆಂದರೆ ತಲೆಯಲ್ಲಿರುವ ಗುಣಚಕ್ರದಲ್ಲಿನ ಗುಣಗಳನ್ನು ಪ್ರೇರೇಪಿಸಿ, ಅಂದರೆ ಆ ಸಮಯಕ್ಕೆ ಯಾವ ಕಾರ್ಯ ನಡೆಯಬೇಕೋ ಅದಕ್ಕೆ ಸಂಬಂಧಿಸಿದ ಗುಣಗಳನ್ನೇ ಪ್ರೇರೇಪಿಸಿ, ಒಳ್ಳೆಯದು ಕೆಟ್ಟದು ಎಂದು, ಇದು ಮಾಡಬಹುದು ಇದು ಮಾಡಬಾರದೆಂದು ಬುದ್ಧಿ ಎಚ್ಚರಿಸುತ್ತಿದ್ದರೂ, ಪ್ರಾರಬ್ಧಕರ್ಮ ಚಿತ್ತದ ಮೂಲಕ ಆ ಕೆಲಸವನ್ನೇ ಮಾಡುವಂತೆ ಚಿತ್ತಗಿಸುವಂತೆ ಮಾಡಿ, ಕಾರ್ಯವನ್ನು ನಡೆಸಿ ಅದರಲ್ಲಿನ ಫಲಿತವನ್ನು ಕಷ್ಟಸುಖರೂಪಗಳಿಂದ ಜೀವಿಯನ್ನು ಅನುಭವಿಸುವಂತೆ ಮಾಡುತ್ತಿದೆ. ಮಾನವನಿಗೆ ಇಷ್ಟವಾದರೂ ಅಯಿಷ್ಟವಾದರೂ ಪ್ರಾರಬ್ಧಕರ್ಮಾ ನುಸಾರವೇ ಆ ಕೆಲಸ ನಡೆಯುತ್ತಿರುತ್ತದೆ. ಆದರೆ ಮಾನವನ ಇಷ್ಟಪ್ರಕಾರ ನಡೆಯುತ್ತದೆಂದುಕೊಳ್ಳುವುದು ತಪ್ಪು.

ಈ ಪ್ರಾರಬ್ಧ ಕರ್ಮ ವಿಧಾನ ತಿಳಿಯದ ಮಾನವನು ನಮ್ಮ ಇಷ್ಟ ಪ್ರಕಾರವೇ ಕೆಲಸಗಳು ಮಾಡುತ್ತಿದ್ದೇವಲ್ಲ! ನಾವು ತೆಗೆದುಕೊಂಡ ನಿರ್ಣಯದ ಪ್ರಕಾರವೇ ಅಲ್ಲವೆ! ನಮ್ಮ ಶರೀರದ ಮೂಲಕ ಕೆಲಸಗಳು ನಡೆಯುತ್ತಿರುವುದು. ಹಾಗಿರುವಾಗ ಪ್ರಾರಬ್ಧಕರ್ಮ ಎನ್ನುವುದೇನೆಂದು ಕೇಳಬಹುದು. ಶರೀರವೇ "ನಾನೆಂಬ" ಭಾವವಿರುವ ಪ್ರತಿ ಮಾನವನು ಈ ವಿಧವಾಗಿಯೇ ಅಂದು ಕೊಳ್ಳುವುದು ನಡೆಯುತ್ತಿದೆ. ನಮಗೆ ಯೋಚನೆಗಳು ಬರುವುದಾಗಲಿ, ಕೆಲಸ ನಿರ್ಣಯವಾಗುವುದಾಗಲಿ, ಆ ಕಾರ್ಯ ನಿನ್ನಿಂದ ಮಾಡುವುದಾಗಲಿ ಎಲ್ಲಾ ಕರ್ಮವೊಂದರ ಆಚರಣೆಗಳೆ. ಪ್ರತಿ ಮನುಷ್ಯ ಕರ್ಮದಲ್ಲಿಯೇ ಒಳಗೊಂಡಿದ್ದಾನೆ. ಆದ್ದರಿಂದ ಅದಕ್ಕೆ ಅತೀತನಾಗದೆ ಕರ್ಮ ನೋಡಿಕೊಳ್ಳುತ್ತಾ ಮಾನವನನ್ನು ತಾನು ಬೇರೆ, ತನ್ನ ಕರ್ಮ ಬೇರೆ ಎಂದು ತಿಳಿಯದಂತೆ ಮಾಡುತ್ತಿದೆ. ಕರ್ಮಗಳು, ಗುಣಗಳು ಬೇರೆಯೆಂದು, ತಾನು ಬೇರೆಯೆಂದು ತಿಳಿಯದ ಮಾನವನು ಕರ್ಮದಿಂದ ನಡೆಯುವ ಕಾರ್ಯಗಳಿಗೆ ಕರ್ತ ತಾನೇ ಅಂದುಕೊಳ್ಳುತ್ತಿದ್ದಾನೆ. ವಾಸ್ತವಕ್ಕೆ ಮಾನವನು ಕ್ರಿಯೆಯಾದರೆ, ಪ್ರಕೃತಿ ಮನುಷ್ಯನಿಗೆ ಕರ್ತ ಆದರೆ, ಪ್ರಾರಬ್ಧವು ಕರ್ಮವಾಗಿದೆ. ಕರ್ತ, ಕರ್ಮ, ಕ್ರಿಯೆ ಅನ್ನುವವು ಯಾವುವು ಎಂದು ತಿಳಿದರು ಮಾನವನಿಗೆ ಸ್ವಲ್ಪ ಜ್ಞಾನ ಏರ್ಪಟ್ಟು ತಾನ್ಯಾರಾಗಿರುವುದು ತಿಳಿಯುತ್ತದೆ. ಸರ್ವ ಜೀವರಾಶಿಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು, ಗುಣಗಳಿಂದ ಇಂದ್ರಿಯಗಳಿಂದ ಆಡಿಸುತ್ತಾ, ಜೀವಿಯನ್ನು ಕ್ರಿಯೆಯಾಗಿ ಮಾಡಿ, ಪ್ರಾರಬ್ಧವೆಂಬುವುದನ್ನು ಕರ್ಮವಾಗಿ ಮಾಡಿ, ಪ್ರಕೃತಿ ಕರ್ತನಾಗಿರುವಾಗ, ದೇವರು ಎಲ್ಲವನ್ನೂ ನೋಡುತ್ತಾ ಸಾಕ್ಷಿಯಾಗಿದ್ದಾನೆ. ಈ ವಿಧವಾಗಿ ಕರ್ತ, ಕರ್ಮ, ಕ್ರಿಯೆ ಮತ್ತು ಸಾಕ್ಷಿ ಎನ್ನುವ ಪದಗಳು ನಮ್ಮ ಬ್ರಹ್ಮವಿದ್ಯೆಯಿಂದ ಹುಟ್ಟಿಕೊಂಡು ಬಂದಿವೆ.

ಕ್ರಿಯೆ ಎಂದರೆ ಕೆಲಸ ಅಥವಾ ಕಾರ್ಯ ಎಂದು ಅರ್ಥ ಅಲ್ಲವೆ! ಅಂತಹದರಲ್ಲಿ ಮಾನವನನ್ನು ಕ್ರಿಯೆ ಅನ್ನುವುದೇನೆಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ಉತ್ತರ ಏನೆಂದರೆ! ಮಾನವನು ಅಜ್ಞಾನ ದಶೆಯಲ್ಲಿ

ಪ್ರತಿಕೆಲಸದಲ್ಲಿ ಪೂರ್ತಿ ಲಗ್ನವಾಗಿ ನಾನು ಬೇರೆ ಎಂಬ ಭಾವನೆ ಇಲ್ಲದಂತೆ ಮಾಡುತ್ತಿದ್ದಾನೆ. ಆದ್ದರಿಂದ ಮಾನವನನ್ನು ಕ್ರಿಯೆ ಅನ್ನಬೇಕಾಗಿ ಬಂದಿದೆ. ನಡೆಯುತ್ತಿರುವ ಕೆಲಸವನ್ನು ನಾನು ಮಾಡುತ್ತಿದ್ದೇನೆಂಬ ಭಾವ ಪೂರ್ತಿ ಹೊಂದಿರುವುದರಿಂದ ಮಾನವನು ಕ್ರಿಯೆಯಾಗಿ ಹೋಗಿದ್ದಾನೆ. ನಡೆಯುತ್ತಿರುವ ಯಾವ ಕಾರ್ಯಕ್ಕಾದರೂ ತಾನೆ ಪೂರ್ತಿ ಕರ್ತನೆಂದುಕೊಳ್ಳುವವನು ಜ್ಞಾನಿಗಳ ಲೆಕ್ಕದಲ್ಲಿ ಕ್ರಿಯೆಯಾಗಿದ್ದಾನೆಂದು ತಿಳಿಯುತ್ತಿದೆ. ಪ್ರತಿ ಕ್ರಿಯೆ ಹಿಂದೆ ಕಾಣಿಸದ ಫಲಿತ ಬರುತ್ತಿದೆ ಅಂದಿದ್ದೇವಲ್ಲ! ಆದ್ದರಿಂದ ನಡೆಯುತ್ತಿರುವುದು ಒಳ್ಳೆಯ ಕ್ರಿಯೆಯಾದರೆ ಪುಣ್ಯ, ಕೆಟ್ಟದಾದರೆ ಪಾಪ ತಪ್ಪದೆ ಬರುತ್ತವೆ. ಅಗ್ನಿಶಿರಗಳಿಗೆ ಹೊಗೆ ಇರುತ್ತದೆಂದು ಗೀತೆಯಲ್ಲಿ ಹೇಳಿದಂತೆ, ಪ್ರತಿ ಕೆಲಸದ ಹಿಂದೆ ಕರ್ಮ ಇದೆ.

**2. ಆಗಾಮಿ ಕರ್ಮ :** ಪ್ರತಿ ಕೆಲಸದಲ್ಲಿ ಬರುವ ಹೊಸದಾದ ಕರ್ಮವನ್ನು ಆಗಾಮಿಕರ್ಮ ಎನ್ನುತ್ತಿದ್ದೇವೆ. ಹುಟ್ಟಿದಾಗಿನಿಂದ ಮಾನವನನ್ನು ಸುಖದುಃಖಗಳನ್ನು ಅನುಭವಿಸುವಂತೆ ಮಾಡುವುದು ಪ್ರಾರಬ್ಧವಾದರೆ, ಪ್ರಾರಬ್ಧದ ಪ್ರಕಾರ ನಡೆದ ಕೆಲಸದಲ್ಲಿ ಹೊಸದಾಗಿ ಬರುವುದು ಆಗಾಮಿಕ. ಇಲ್ಲಿ ಕೆಲವರಿಗೊಂದು ಅನುಮಾನ ಬರಬಹುದು. ಅದು ಏನೆಂದರೆ! ಗತ ಜನ್ಮದಲ್ಲಿನ ಕರ್ಮ ಪ್ರಾರಬ್ಧವಾಗಿ ಬದಲಾಗಿ ಪ್ರತಿ ಕೆಲಸ ಅದೇ ಮಾಡಿಸುತ್ತಿರುವಾಗ, ಮಧ್ಯದಲ್ಲಿನ ಜೀವಿಗೆ ಹೊಸ ಕರ್ಮ ಏಕೆ ಬರಬೇಕು? ಜೀವಿಯು ತಾನು ಸ್ವತಃವಾಗಿ ಏನು ಮಾಡಲಿಲ್ಲವೆಂದು, ಕರ್ಮವೇ ಗುಣಗಳೆಂಬ ಸೂತ್ರಗಳಿಂದ ಮಾಡಿಸುತ್ತದೆಂದರು, ಹೊಸ ಕರ್ಮಕ್ಕೆ ಜೀವಿಯು ಜವಾಬ್ದಾರನಲ್ಲವಲ್ಲ! ಎಂದು ಕೇಳಬಹುದು. ಆ ಲೆಕ್ಕಪ್ರಕಾರವಾದರೆ ಕಾರ್ಯಗಳ ಬಗ್ಗೆ ಯಾವ ನಿರ್ಣಯ ಮಾಡದ ಜೀವಿಗೆ ಹೊಸಕರ್ಮ ಯಾವ ಸಂಬಂಧವಿಲ್ಲ. ಸ್ವಲ್ಪವೂ ಆತನಿಗೆ ಹೊಸಕರ್ಮ ಅಂಟಬಾರದು. ಆದರೆ ಹೊಸ ಕರ್ಮ ಅಂಟುತ್ತಲೇ ಇದೆ. ಏಕೆಂದರೆ! ಜೀವಿಯು ತಾನು ಏನು ಮಾಡದಿದ್ದರೂ, ಎಲ್ಲಾ ಕ್ರಿಯೆಗಳಿಗೆ ಕರ್ಮವೇ ಕಾರಣವೆಂದು ಅಂದುಕೊಳ್ಳದೆ, ಎಲ್ಲಾ ಕ್ರಿಯೆಗಳಿಗೆ ತಾನೇ

ಕಾರಣವೆಂದು, ಎಲ್ಲವುದಕ್ಕೂ ತಾನೇ ಕರ್ತನೆಂದು ಅಂದುಕೊಳ್ಳುವುದರಿಂದ, ಜೀವಿಗೆ ಸಂಬಂಧವಿಲ್ಲದ "ಆಗಾಮಿ" ಅನ್ನುವ ಹೊಸ ಕರ್ಮ ಬಂದು ಆತನನ್ನೇ ಅಂಟುತ್ತಿದೆ. ಪ್ರತಿ ಕೆಲಸಕ್ಕೆ ಕರ್ಮ ಕಾರಣವಾದರೂ, ಪ್ರತಿ ಕೆಲಸಕ್ಕೆ ಹೊಸ ಕರ್ಮ ಬರುವುದು ನಡೆಯುತ್ತಿದೆ. ಅದನ್ನು ತಿಳಿದವನು ಕರ್ಮದಿಂದ ಕಾರ್ಯಗಳು ನಡೆಯುತ್ತಿವೆ ಎಂದು, ತನ್ನಿಂದ ನಡೆಯುತ್ತಿಲ್ಲವೆಂದು, ತನ್ನ ಶರೀರ ಕದಲಿ ಕೆಲಸ ಮಾಡುತ್ತಿದ್ದರೂ, ತಾನು ಬೇರೆ ಶರೀರ ಬೇರೆಯೆಂದು, ನಡೆಯುವ ಕೆಲಸಗಳಿಗೆ ತಾನು ಎಷ್ಟು ಮಾತ್ರ ಕರ್ತನಲ್ಲವೆಂದು ತಿಳಿದಾಗ, ಪ್ರತಿಕೆಲಸದಲ್ಲಿ ಬರುವ ಹೊಸಕರ್ಮ ಆತನನ್ನು ಸೇರದೆ ಜ್ಞಾನಾಗ್ನಿಯಿಂದ ಸುಟ್ಟುಹೋ ಗುತ್ತಿರುತ್ತದೆ. ಅದನ್ನೇ "ಯಜ್ಞಕರ್ಮ" ಎಂದು ಗೀತೆಯಲ್ಲಿ ಸಹ ಹೇಳಿದ್ದಾರೆ. ಯಜ್ಞಕರ್ಮವಾಗಿ ನೀನು ಕೆಲಸ ಮಾಡದೆಹೋದರೆ ಅದರಿಂದ ತಪ್ಪದೆ ಕರ್ಮ ಬಂಧನಗಳು ಉಂಟಾಗುತ್ತವೆಂದು **'ಯಜ್ಞಾರ್ಥಾತ್ಕರ್ಮಣೋನ್ಯತ್ರ ಲೋಕೋಯಂ ಕರ್ಮ ಬಂಧನಃ'** ಎಂದು ಗೀತೆಯಲ್ಲಿ ಭಗವಂತನಂದಿದ್ದಾನೆ.

ಪ್ರತಿಮಾನವನು ಚಿಕ್ಕ ವಯಸ್ಸಿನಿಂದ ಬಂದಿರುವ ಅಭ್ಯಾಸದ ಪ್ರಕಾರ ಅಹಮ್‌ನಿಂದ ನಾನು ಅಂದುಕೊಂಡರೆ ತಾನೆ, ನಾನು ಮಾಡಿದರೇನೆ ತಾನೇ ಕೆಲಸ ನಡೆಯುತ್ತಿದೆ ಎಂದು ತಿಳಿಯುತ್ತಾ, ತನ್ನ ಹಿಂದೆ ಆಡಿಸುವ ಪ್ರಾರಬ್ಧಕರ್ಮವನ್ನು ಗುರುತಿಸದಿರುವುದರಿಂದ ಹೊಸ ಕರ್ಮ ಬಂದು ಸೇರುತ್ತಿದೆ. ತಾನು ಮಾಡದ ಕೆಲಸಕ್ಕೆ ತಾನು ಅನವಶ್ಯಕವಾಗಿ ಜವಾಬ್ದಾರನಾಗಿ, ಬಂದಿರುವ ಕರ್ಮವನ್ನು ಹೊತ್ತುಕೊಂಡುಹೋಗಿ ಮತ್ತೊಂದು ಜನ್ಮದಲ್ಲಿ ಅನುಭವಿಸಬೇಕಾಗಿ ಬರುತ್ತಿದೆ. ಒಂದು ಜನ್ಮದಲ್ಲಿ ಅನುಭವಿಸುವುದು ಪ್ರಾರಬ್ಧವಾದರೆ ಅದೇ ಜನ್ಮದಲ್ಲಿ ಹೊಸದಾಗಿ ಬರುವುದು ಆಗಾಮಿಕರ್ಮ, ಖರ್ಚಾಗುವುದು ಪ್ರಾರಬ್ಧ, ಜಮ ಆಗುವುದು ಆಗಾಮಿಕ. ಪ್ರಾರಬ್ಧ ಹುಟ್ಟಿದಾಗಿನಿಂದ ಆಚರಣೆಗೆ ಬಂದು ಕಷ್ಟ ಸುಖಗಳನ್ನು ಅನುಭವಿಸುವಂತೆ ಮಾಡುತ್ತಿವೆ. ಆಗಾಮಿಕ ಹುಟ್ಟಿದಾಗಿನಿಂದ ಬರುವುದಿಲ್ಲ. ಏಕೆಂದರೆ ಜೀವಿಯು ಧರಿಸಿದ ಶರೀರದಜೊತೆಗೆ ಮನಸ್ಸು, ಬುದ್ಧಿ, ಚಿತ್ತ, ಅಹಮ್ ಸಹ ಬೆಳೆಯಬೇಕಾಗಿರುತ್ತದೆ. ಶರೀರಕ್ಕೆ ನಾಲ್ಕೈದು

ವರ್ಷಗಳು ವಯಸ್ಸು ಬರುವವರೆಗೂ ಒಳಗಿರುವ ಅಹಮ್ ಸಹ ಚಿಕ್ಕದಾಗಿದ್ದು ಕೆಲಸ ಮಾಡುವುದಿಲ್ಲ. ಶರೀರ ಬೆಳೆದಂತೆಲ್ಲ ಅಹಮ್ ಸಹ ಬೆಳೆದು ನಾಲ್ಕೈದು ವರ್ಷಗಳಿಂದ ಕೆಲಸ ಮಾಡುವುದಕ್ಕೆ ಆರಂಭಿಸುತ್ತದೆ. ಆಗಿನಿಂದ ಜೀವಾತ್ಮ ಅಹಮ್ ಒಂದರ ಕೆಲಸದಿಂದ ನಡೆಯುವ ಕೆಲಸಗಳಿಗೆ ತಾನೆ ಕಾರಣವೆಂದು ಕೊಳ್ಳುತ್ತದೆ. ಆಗ ಆಗಾಮಿಕರ್ಮ ಬಂದು ಸೇರುವುದಕ್ಕೆ ಅವಕಾಶವಿದೆ. ಆದ್ದರಿಂದ ಹುಟ್ಟಿದಾಗಿನಿಂದ ಆಗಾಮಿಕ ಬರುವುದಿಲ್ಲ. ಒಂದು ಜನ್ಮದಲ್ಲಿ ಮುಗಿದುಹೋಗುವುದು ಪ್ರಾರಬ್ಧ, ಅದೇ ಜನ್ಮದಲ್ಲಿ ಬಂದು ಸೇರುವುದು ಆಗಾಮಿಕ.

3. **ಸಂಚಿತ : –** ಒಂದು ಜನ್ಮದಲ್ಲಿ ಸಂಪಾದಿಸಿದ ಆಗಾಮಿಕರ್ಮ ಪೂರ್ತಿ ಮರುಜನ್ಮದಲ್ಲಿ ಪ್ರಾರಬ್ಧವಾಗಿ ಹೋಗುತ್ತಿಲ್ಲ. ಏಕೆಂದರೆ 80 ವರ್ಷಗಳು ಮಾನವ ಜನ್ಮದಲ್ಲಿ ಜೀವಿಸಿ ಆಗಾಮಿಕರ್ಮ ಸಂಪಾದಿಸಿಕೊಂಡವನು, ಅವನ ಕರ್ಮಾನುಸಾರ ನಾಯಿಜನ್ಮ ಎತ್ತಬೇಕಾಗಿ ಬಂದಾಗ ಹತ್ತರಿಂದ ಹದಿನೈದು ವರ್ಷಗಳಿಗೆ ಮೀರಿ ಬದುಕದ ನಾಯಿ ಜೀವನದಲ್ಲಿ 80 ವರ್ಷಗಳ ಉದ್ದಕ್ಕೂ ಬಂದಿರುವ ಆಗಾಮಿಕರ್ಮ ಮುಗಿದುಹೋಗುವುದಿಲ್ಲ. ಆಗ ಬಂದಿರುವ ಕರ್ಮದಿಂದ ಸ್ವಲ್ಪ ಕರ್ಮ ನಾಯಿಜನ್ಮಕ್ಕೆ ನಿಗಧಿಯಾಗಿರುತ್ತದೆ. ನಿಗಧಿಸಿರುವುದು ಪ್ರಾರಬ್ಧವಾದರೆ, ಉಳಿದಿರುವುದನ್ನು ಸಂಚಿತಕರ್ಮ ಅನ್ನುತ್ತಿದ್ದೇವೆ. ಹೀಗೆ ನಮ್ಮಹಿಂದೆ ಉಳಿದಿರುವ ಕರ್ಮವನ್ನು "ಸಂಚಿತ" ಅನ್ನುತ್ತೇವೆ. ಅಂದರೆ ಒಂದು ಜನ್ಮದಲ್ಲಿ ಅನುಭವಿಸುವುದು ಪ್ರಾರಬ್ಧ. ಹಾಗೆ ಒಂದು ಜನ್ಮದಲ್ಲಿ ಬರುವುದು ಆಗಾಮಿಕ. ಜನ್ಮ ಜನ್ಮಗಳಿಗು ಉಳಿಯುತ್ತಾ ಬರುವುದು ಸಂಚಿತ ಎಂದು ತಿಳಿಯಬೇಕು. ಸಂಚಿತದಿಂದ ಹೊಸ ಕರ್ಮ ತೆಗೆದುಕೊಂಡು ಹುಟ್ಟುವವನಿಗೆ ಆಗ ಏರ್ಪಟ್ಟ ಪ್ರಾರಬ್ಧ ಗತ ಜನ್ಮದಲ್ಲಿ ಹತ್ತು ಜನ್ಮಗಳ ಕೆಳಗಿನದು ಸಹ ಇರಬಹುದು. ಆದ್ದರಿಂದ ಪ್ರಸ್ತುತ ಜನ್ಮದಲ್ಲಿ ಅನುಭವಿಸುವುದು ಹಿಂದಿನ ಜನ್ಮದ ಕರ್ಮ ಅಂದುಕೊಳ್ಳುವುದು ಸತ್ಯ ಅಲ್ಲದಿರಬಹುದು.

ಏಕೆಂದರೆ ಜನ್ಮಜನ್ಮಗಳಿಗೂ ಉಳಿದ ಕರ್ಮ ವರಸೆಕ್ರಮದಲ್ಲಿ ಆಚರಣೆಗೆ ಬರುತ್ತದೆ, ಆದ್ದರಿಂದ ಈಗ ಆಚರಣೆಗೆ ಬಂದಿರುವುದು ಗತ ಜನ್ಮದ್ದೇ ಎಂದು

ಹೇಳುವುದಕ್ಕೆ ಸಾಧ್ಯವಿಲ್ಲ. ಹೆಚ್ಚಾಗಿ ಸಂಚಿತ ಇರುವವನಿಗೆ ಹೆಚ್ಚು ಜನ್ಮಗಳ ಕೆಳಗಿನದು ಆಗಿರಬಹುದು. ಕಡಿಮೆ ಸಂಚಿತ ಇರುವವನಿಗೆ ಕಡಿಮೆ ಜನ್ಮಗಳ ಕೆಳಗಿನದು ಆಗಿರಬಹುದು. ಒಬ್ಬೊಬ್ಬನಿಗೆ ಸಂಚಿತ ಖಾಲಿಯಾಗಿದ್ದು ಗತ ಜನ್ಮ ಆಗಾಮಿಕ ಪೂರ್ತಿ ಪ್ರಾರಬ್ಧವಾಗಿ ಬದಲಾಗಿರಬಹುದು. ಸಂಚಿತವೆಂಬುದು ಕಡಿಮೆಯಾಗುತ್ತಾ ಹೋಗಬಹುದು, ಬೆಳೆಯುತ್ತಾ ಹೋಗಬಹುದು. ಅದು ಜನ್ಮಗಳ ವಯಸ್ಸನ್ನನುಸರಿಸಿ, ಅವರು ಮಾಡುವ ಕೆಲಸಗಳಲ್ಲಿ ಅಹಮ್‌ನ್ನನುಸರಿಸಿ ಇರುತ್ತದೆ.

ಜ್ಞಾನ ತಿಳಿದವನು ಆಗಾಮಿಕವನ್ನು ಸಂಪಾದಿಸಿಕೊಳ್ಳದೆ ಪ್ರಾರಬ್ಧವನ್ನು ಮಾತ್ರ ಅನುಭವಿಸುತ್ತಿದ್ದಾನೆಂದು ಅಂದುಕೊಳ್ಳೋಣ. ಆಗ ಅವನಿಗಿರುವ ಸಂಚಿತ ಜನ್ಮಜನ್ಮಗಳಿಗೂ ಕಡಿಮೆಯಾಗುತ್ತಾ ಬಂದು ಕೊನೆಗೆ ಏನು ಇಲ್ಲದಂತೆ ಹೋಗುತ್ತದೆ. ಅಂಥವನ ಕರ್ಮವೆಲ್ಲವೂ ಮುಗಿದುಹೋಗಿ ಅವನು ಜನ್ಮಗಳಿಗೆ ಹೋಗುವುದಿಲ್ಲ, ಹೋಗುವುದಕ್ಕೆ ಕರ್ಮವಿಲ್ಲವಾದ್ದರಿಂದ ಅವನು ಮೋಕ್ಷ ಹೊಂದುತ್ತಾನೆ, ಕೆಲವರು ಅಜ್ಞಾನದಿಂದ ಮತ್ತಷ್ಟು ಕರ್ಮಗಳನ್ನು ಸಂಪಾದಿಸಿಕೊಳ್ಳುತ್ತಾ ಹೋಗುತ್ತಿರುತ್ತಾರೆ, ಅಂಥವರಿಗೆ ಸಂಚಿತ ಅಧಿಕವಾಗಿ ಹೋಗಿ ಕೆಲವು ನೂರಾರು ಜನ್ಮಗಳಿಗೆ ಸರಿಹೋಗುವುದಾಗಿ ಬೆಳೆದಿರುತ್ತದೆ. ಅಂಥವನು ಮೋಕ್ಷ ಪಡೆಯದೆ ಜನ್ಮಗಳು ಎತ್ತುತ್ತಾ ಕರ್ಮದಲ್ಲಿಯೇ ಬಳಲುತ್ತಿರುತ್ತಾನೆ. ಕರ್ತ, ಕರ್ಮ, ಕ್ರಿಯೆ, ಸಾಕ್ಷಿ ಯಾರೆಂದು ತಿಳಿಯದೆಹೋದರೆ ಸಂಚಿತ, ಆಗಾಮಿ, ಪ್ರಾರಬ್ಧವೆಂಬ ತ್ರಿ ಕರ್ಮಗಳನ್ನು ತಿಳಿಯದೆ ಪ್ರಾರಬ್ಧವನ್ನು ಅನುಭವಿಸುತ್ತಾ, ಆಗಾಮಿಕವನ್ನು ಸಂಪಾದಿಸುತ್ತಾ, ಸಂಚಿತವನ್ನು ವೃದ್ಧಿ ಮಾಡುತ್ತಾ ತಾನ್ಯಾರೋ, ತನ್ನಸ್ಥಿತಿ ಏನೊ, ತಿಳಿಯದೆ ಪ್ರತಿನಿತ್ಯ ಗುಣಗಳ ಪ್ರಭಾವದಲ್ಲಿ ಮುಳುಗಿಹೋಗಿ, ಕಾಣಿಸುವ ಪ್ರಪಂಚದ ಮೇಲೆ ದೃಷ್ಠಿ ನಿಲ್ಲಿಸಿ ಅಜ್ಞಾನದಲ್ಲಿಯೇ ಇರುತ್ತಾರೆ. ಕೈಗೆ ಸಿಗದ ಕಾಲ ತನ್ನ ಆಯುಸ್ಸನ್ನು ನಾಶಮಾಡುತ್ತಾ ಕೊನೆಯ ಘಳಿಗೆ ಹತ್ತಿರ ಸೇರಿಸಿದಾಗ, ತನ್ನವರು ಅಂದುಕೊಂಡವರೆಲ್ಲರನ್ನು ಬಿಟ್ಟುಹೋಗಬೇಕಾಗಿ ಬಂದಾಗ, ಯಾರು ತನ್ನನ್ನು

ನಿಲ್ಲಿಸಲಾರರೆಂದು ಯಾವ ಹಣ ತನ್ನನ್ನು ನಿಲ್ಲಿಸಲಿಲ್ಲವೆಂದು ತಿಳಿದಾಗ, ಎಂಥವನಾದರೂ ಧೀನಾತಿ ಧೀನಸ್ಥಿತಿಯಲ್ಲಿ ಉಳಿದು ತನ್ನನ್ನು ಯಾರು ರಕ್ಷಿಸುತ್ತಾರೆಂದು ಆಸೆಯಿಂದ ನೋಡುವುದಕ್ಕಿಂತ, ಈ ದಿನ ಮರಣ ವಾಸನ್ನವಾಗದ ಮೊದಲೆ, ಜ್ಞಾನ ತಿಳಿದು ಕರ್ತ, ಕರ್ಮ, ಕ್ರಿಯೆ, ಸಾಕ್ಷಿ ಅನ್ನು ವವರ್‍ಯಾರೋ ತಿಳಿದು, ಎಲ್ಲವುದಕ್ಕೂ ಸಾಕ್ಷಿಯಾದ ದೇವರನ್ನು ಆಶ್ರಯಿಸಿ, ಕರ್ತನಾದ ಪ್ರಕೃತಿ ಕೈಯಿಂದ ತಪ್ಪಿಸಿಕೊಂಡರು ಭಗವದ್ಗೀತೆಯಲ್ಲಿ ಹೇಳಿದಂತೆ ಕರ್ಮ ನಿನ್ನನ್ನು ಅಂಟುವುದಿಲ್ಲ, ಕ್ರಿಯೆಗಳು ನಿಮ್ಮಿಂದ ನಡೆಯುವುದಿಲ್ಲ. ನೀನು ನಿತ್ಯನಾಗಿ, ಅಮೃತನಾಗಿ, ಆತ್ಮವಾಗಿ, ಪರಮಾತ್ಮನಾಗಿ ಬದಲಾಗಿಹೋಗಬಹುದು.

## ಭೋಗಿ – (ಬೆಂಕಿಯ ಶಿಬಿರ)

ಭೋಗಿ ಎಂಬ ಮಾತನ್ನು ಬಹುಶ ಸಂಕ್ರಾಂತಿ ಹಬ್ಬದ ಸಂದರ್ಭಗಳಲ್ಲಿ ಕೇಳುತ್ತಿರುತ್ತೇವೆ. ಯುಗಾದಿ ಹಬ್ಬಕ್ಕೆ ಪ್ರತ್ಯೇಕತೆ ಇರುವಂತೆ ಸಂಕ್ರಾಂತಿ ಹಬ್ಬಕ್ಕೂ ಸಹ ಪ್ರತ್ಯೇಕತೆ ಇದೆ. ಯುಗಾದಿಗಾಗಲಿ, ಸಂಕ್ರಾಂತಿಗಾಗಲಿ ಆಧ್ಯಾತ್ಮಿಕತೆಯನ್ನು, ಗ್ರಹಗಳ ಪ್ರಯಾಣವನ್ನನುಸರಿಸಿ ಪ್ರತ್ಯೇಕತೆ ಇದೆ. ಸೂರ್ಯನು ಕಾಲಚಕ್ರದಲ್ಲಿ ಕಟಕರಾಶಿಯಲ್ಲಿ ಪ್ರವೇಶಿಸಿದಾಗ ಕಟಕ ಸಂಕ್ರಮಣ ಎಂದೂ, ಅದೇ ವಿಧವಾಗಿ ಸೂರ್ಯನು ಮಕರರಾಶಿಯಲ್ಲಿ ಪ್ರವೇಶಿಸಿದಾಗ ಮಕರ ಸಂಕ್ರಾಂತಿ ಎಂದೂ ನಮ್ಮ ಹಿರಿಯರು ಹೇಳುತ್ತಿರುತ್ತಾರೆ. ಈ ರಾಶಿಗಳೆಂಬುವವು ಏನು, ಏತಕ್ಕಿವೆ? ಎಂದು ಯೋಚಿಸಿದರೆ ಸ್ವಲ್ಪ ಸಮಾಚಾರ ತಿಳಿಯುತ್ತದೆ. ಮನುಷ್ಯನ ಆಧ್ಯಾತ್ಮಿಕ ಪಾಠದಲ್ಲಿ ಕಾಲಚಕ್ರ ಅನ್ನುವುದು ಬಹಳ ಪ್ರಾಮುಖ್ಯ ಇರುವುದು. ಕಾಲಚಕ್ರ ಒಟ್ಟು ಹನ್ನೆರಡು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಮಾನವನ ಜ್ಯೋತಿಷ್ಯ ಈ ಹನ್ನೆರಡು ಭಾಗಗಳನ್ನು ಆಧಾರ ಮಾಡಿಕೊಂಡಿದೆ. ಕಾಲಚಕ್ರದಲ್ಲಿದ್ದು ಕರ್ಮವನ್ನು ಪರಿಪಾಲನೆ ಮಾಡುವ ನವಗ್ರಹಗಳು ನಿರ್ಣಯ ಕಾಲದ ಪ್ರಕಾರ ಈ ಕಾಲಚಕ್ರದಲ್ಲಿಯೇ ತಿರುಗುತ್ತಿರುತ್ತವೆ. ಎಲ್ಲದಕ್ಕಿಂತ ಮುಖ್ಯಗ್ರಹ ಮತ್ತು ಮೊದಲ

ಗ್ರಹವಾದ ಸೂರ್ಯನು ಕಾಲಚಕ್ರದಲ್ಲಿ ಹೆಚ್ಚು ಪ್ರಸಿದ್ಧಿಹೊಂದಿದವನು. ಸೂರ್ಯನು ಮೊದಲನೆಯವನಾದ್ದರಿಂದ ಆತನಿಗೆ ಆದಿತ್ಯನೆಂದು ಸಹ ಹೆಸರು ಇದೆ. ಜ್ಯೋತಿಷ್ಯಶಾಸ್ತ್ರದಲ್ಲಿ ಸೂರ್ಯನನ್ನನುಸರಿಸಿ ಗ್ರಹಚಾರ ನಿರ್ಣಯಸಲ್ಪಡುತ್ತಿದೆ. ಕಾಲಚಕ್ರದಲ್ಲಿನ ಹನ್ನೆರಡು ಭಾಗಗಳ ಹೆಸರುಗಳು ಕ್ರಮವಾಗಿ ಹೀಗಿವೆ. 1) ಮೇಷ 2) ವೃಷಭ 3) ಮಿಥುನ 4) ಕರ್ಕಾಟಕ 5) ಸಿಂಹ 6) ಕನ್ಯ 7) ತುಲ 8) ವೃಶ್ಚಿಕ 9) ಧನಸ್ಸು 10) ಮಕರ 11) ಕುಂಭ 12) ಮೀನ. ಕಾಲ ಚಕ್ರವನ್ನು ಅದರಲ್ಲಿನ ಭಾಗಗಳನ್ನು ನಂತರ ಪುಟದ ಚಿತ್ರದಲ್ಲಿ ನೋಡಬಹುದು.

ಕಾಲಚಕ್ರದಲ್ಲಿನ ಅರ್ಧಭಾಗದಲ್ಲಿ ಸೂರ್ಯನ ಸಂಚಾರ ಇರುವಾಗ ಅದನ್ನು "ಆಯಣ" ಅನ್ನುತ್ತಾರೆ. ಇದನ್ನನುಸರಿಸಿ ಎರಡು ಆಯಣಗಳು ಇವೆಯೆಂದು, ಅವುಗಳೇ ಉತ್ತರಾಯಣ, ದಕ್ಷಿಣಾಯಣ ಎಂದು ತಿಳಿಯಬೇಕು. ಸೂರ್ಯನು ಕಾಲಚಕ್ರದಲ್ಲಿನ ಒಂದು ಭಾಗವನ್ನು ದಾಟುವುದಕ್ಕೆ ಒಂದು ತಿಂಗಳುದಿನಗಳು ಹಿಡಿಯುತ್ತದೆ. ಇದನ್ನನುಸರಿಸಿಯೇ ನಮಗೆ ತಿಂಗಳ ಹೆಸರುಗಳು ಸಹ ನಿರ್ಣಯಿಸಿದ್ದಾರೆ. ಅವು ಕ್ರಮವಾಗಿ 1) ಚೈತ್ರ 2) ವೈಶಾಖ 3) ಜೇಷ್ಟ 4) ಆಷಾಢ 5) ಶ್ರಾವಣ 6) ಭಾದ್ರಪದ 7) ಆಶ್ವೀಯುಜ 8) ಕಾರ್ತೀಕ 9)ಮಾರ್ಗಶೀರ್ಷ10) ಪುಷ್ಯ 11) ಮಾಘ 12) ಫಾಲ್ಗುಣ. ಕಾಲಚಕ್ರದಲ್ಲಿ ಸೂರ್ಯನು ಮೇಷರಾಶಿ ಭಾಗದಲ್ಲಿ ಪ್ರಯಾಣಿಸುವ ಮೂವತ್ತು ದಿನಗಳನ್ನು ಚೈತ್ರಮಾಸ ಅಂದಿದ್ದಾರೆ. 2) ವೃಷಭರಾಶಿಯಲ್ಲಿರುವ ಕಾಲವನ್ನು ವೈಶಾಖಮಾಸ ಅಂದಿದ್ದಾರೆ. 3) ಮಿಥುನರಾಶಿ ಕಾಲವನ್ನು ಜ್ಯೇಷ್ಟಮಾಸ ಎಂದಿದ್ದಾರೆ. 4) ಕರ್ಕಾಟಕರಾಶಿಯಲ್ಲಿ ಇರುವಾಗ ಆಷಾಢಮಾಸ ಅಂದಿದ್ದಾರೆ. 5) ಸಿಂಹರಾಶಿಯಲ್ಲಿರುವಾಗ ಶ್ರಾವಣಮಾಸ ಅಂದಿದ್ದಾರೆ, 6) ಕನ್ಯಾರಾಶಿಯಲ್ಲಿ ಇರುವಾಗ ಭಾದ್ರಪದಮಾಸ ಅಂದಿದ್ದಾರೆ 7) ತುಲಾರಾಶಿಯಲ್ಲಿ ಇರುವಾಗ ಆಶ್ವಿಯುಜಮಾಸ ಎಂದಿದ್ದಾರೆ 8) ವೃಶ್ಚಿಕರಾಶಿಯಲ್ಲಿ ಇರುವಾಗ ಕಾರ್ತಿಕಮಾಸ ಎಂದಿದ್ದಾರೆ. 9) ಧನಸ್ಸು ರಾಶಿಯಲ್ಲಿ ಇರುವಾಗ ಮಾರ್ಗಶೀರ್ಷಮಾಸ ಎಂದಿದ್ದಾರೆ. 10) ಮಕರರಾಶಿಯಲ್ಲಿ ಇರುವಾಗ ಪುಷ್ಯಮಾಸ ಎಂದಿದ್ದಾರೆ.

11) ಕುಂಭರಾಶಿಯಲ್ಲಿ ಇರುವಾಗ ಮಾಘಮಾಸ ಎಂದಿದ್ದಾರೆ. 12) ಮೀನ ರಾಶಿಯಲ್ಲಿ ಇರುವಾಗ ಫಾಲ್ಗುಣಮಾಸ ಎಂದಿದ್ದಾರೆ.

ಕಾಲಚಕ್ರದಲ್ಲಿನ ಹನ್ನೆರಡು ಭಾಗಗಳಲ್ಲಿ ಆರು ಭಾಗಗಳನ್ನು ಉತ್ತರಾಯಣವಾಗಿ, ಉಳಿದ ಆರು ಭಾಗಗಳನ್ನು ದಕ್ಷಿಣಾಯಣವಾಗಿ ಲೆಕ್ಕಿಸುವುದು ನಡೆಯುತ್ತಿದೆ. ಸೂರ್ಯನು ಮಕರರಾಶಿಯಲ್ಲಿ ಪ್ರವೇಶಿಸಿದ ಪುಷ್ಯಮಾಸದಿಂದ ಮಿಥುನರಾಶಿಯಲ್ಲಿ ಇರುವ ಜೇಷ್ಟಮಾಸದವರೆಗು ಆರು ತಿಂಗಳಕಾಲವನ್ನು ಉತ್ತರಾಯಣವೆಂದು, ಹಾಗೆಯೇ ಸೂರ್ಯನು ಕಟಕರಾಶಿಯಲ್ಲಿ ಪ್ರವೇಶಿಸಿದ ಅಷಾಢಮಾಸದಿಂದ ಧನಸ್ಸುರಾಶಿಯಲ್ಲಿ ಇರುವ ಮಾರ್ಗಶೀರ್ಷ ಮಾಸದ ವರೆಗೂ ಆರುತಿಂಗಳ ಕಾಲವನ್ನು ದಕ್ಷಿಣಾಯಣವೆಂದು ಹೇಳುವುದು ನಡೆಯುತ್ತಿದೆ. ಕಾಲಚಕ್ರದಲ್ಲಿ ಮೊದಲನೆಯದಾದ ಮೇಷರಾಶಿಯನ್ನು ಒಂದನೆಯದಾಗಿ ತೆಗೆದುಕೊಂಡರೆ ಕೊನೆಯದಾದ ಮೀನರಾಶಿ ಹನ್ನೆರಡನೆಯ ದಾಗುತ್ತದೆ. ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಒಂದನೇ ರಾಶಿ ಮಾನವನ ಜನ್ಮರಾಶಿ ಆಗುತ್ತದೆ, ಹಾಗೆಯೇ ಹನ್ನೆರಡನೆಯದು ಮರಣರಾಶಿ ಆಗುತ್ತದೆ. ಮನುಷ್ಯನ




**ಕಾಲ ಚಕ್ರ**

ಹುಟ್ಟು ಶರೀರ ಲಭ್ಯವೊಂದರ ವಿಷಯಗಳು ಒಂದನೇ ಸ್ಥಾನದಲ್ಲಿ ಇರುವಾಗ, ಕೊನೆಯ ಮರಣವನ್ನು ಕುರಿತಾದ ವಿಷಯವೆಲ್ಲಾ ಹನ್ನೆರಡನೆಯ ಸ್ಥಾನದಲ್ಲಿ ಇರುತ್ತದೆ. ಮನುಷ್ಯನ ಹುಟ್ಟು ಮತ್ತು ಮರಣಗಳ ವಿಷಯಗಳು ಉತ್ತರಾಯಣ ಭಾಗದಲ್ಲಿಯೇ ಇವೆ. ಉತ್ತರಾಯಣ ಭಾಗ ಜ್ಞಾನಸಂಬಂಧವಾದುದೆಂದು, ದಕ್ಷಿಣಾಯಣ ಭಾಗ ಅಜ್ಞಾನ ಸಂಬಂಧವಾದುದೆಂದು, ಸಹ ಹೇಳಲಾಗಿದೆ. ಉತ್ತರಾಯಣ ಕಾಲದಲ್ಲಿ ಮರಣಿಸಿದರೂ, ಹುಟ್ಟಿದರೂ ಮೋಕ್ಷ ಹೊಂದಿ ದೇವರಲ್ಲಿ ಐಕ್ಯವಾಗುವುದಕ್ಕೆ ಅವಕಾಶವಿದೆ. ಅಷ್ಟೇ ಅಲ್ಲದೆ ಉತ್ತರಾಯಣ ಕಾಲದಲ್ಲಿ ಹುಟ್ಟಿದವರು ದೈವಸಂಬಂಧ ಜ್ಞಾನಹೊಂದಿ ಜ್ಞಾನಿ ಜನ್ಮಹೊಂದುವುದಕ್ಕೂ ಸಹ ಅವಕಾಶವಿದೆ. ಸೂರ್ಯನು ಉತ್ತರಾಯಣದಲ್ಲಿ ಪ್ರವೇಶಿಸಿರುವ ಆರು ತಿಂಗಳಕಾಲ ದೈವಪರವಾಗಿ ಪ್ರಾಮುಖ್ಯತೆಹೊಂದಿ ಇರುವುದರಿಂದ ಆ ಕಾಲವನ್ನು **ಉತ್ತರಾಯಣ ಉತ್ತಮಕಾಲವೆಂದು** ಪೂರ್ವದಲ್ಲಿ ಅನ್ನುತ್ತಿದ್ದರು. ಕಾಲಕ್ರಮವಾಗಿ ಉತ್ತರಾಯಣ ಉತ್ತಮಕಾಲ ಬದಲಾವಣೆಯಾಗಿ ಉತ್ತರಾಯಣ ಪುಣ್ಯಕಾಲವೆಂದು ಹೇಳಲಾಗುತ್ತಿದೆ.

ಮೇಷ, ವೃಷಭ, ಮಿಥುನ ಈ ಮೂರು ರಾಶಿಗಳ ಕಾಲವನ್ನು, ಹಾಗೆಯೇ ಮಕರ, ಕುಂಭ, ಮೀನರಾಶಿಗಳಲ್ಲಿ ಮೂರು ತಿಂಗಳ ಕಾಲವನ್ನು ಉತ್ತರಾಯಣವೆಂದು ಹೇಳಿಕೊಂಡಿದ್ದೇವೆ. ಉಳಿದ ಆರುತಿಂಗಳ ಕಾಲವನ್ನು ದಕ್ಷಿಣಾಯಣವಾಗಿ ಲೆಕ್ಕಿಸಿಕೊಳ್ಳುತ್ತಿದ್ದೇವೆ. ಉತ್ತರಾಯಣ ಉತ್ತಮವಾದುದಾಗಿ ದೈವಪರವಾಗಿ ಲೆಕ್ಕಿಸಿಕೊಂಡಾಗ, ದಕ್ಷಿಣಾಯಣ ಪ್ರಪಂಚಪರವಾದ ಭೋಗಗಳಿಗೆ ಪ್ರತೀಕವಾಗಿ ಹೇಳಿಕೊಳ್ಳುತ್ತಿದ್ದೇವೆ. ದಕ್ಷಿಣಾಯಣ ಪ್ರಕೃತಿ ಭೋಗಗಳಿಗೆ ಗುರುತಾಗಿದೆ. ಪ್ರಪಂಚದಲ್ಲಿನ ಅನುಭವಗಳನ್ನು ಭೋಗಗಳನ್ನುತ್ತಿದ್ದೇವೆ. ಪ್ರಪಂಚ ಸಂಬಂಧವಿಷಯಗಳನ್ನು ಅನುಭವಿಸುವುದನ್ನು ಭೋಗ ಎನುತ್ತಿರುವಾಗ! ದೈವಸಂಬಂಧ ಆತ್ಮವನ್ನು ಅನುಭವಿಸುವುದನ್ನು ಯೋಗ ಎನ್ನುತ್ತಿದ್ದೇವೆ. ಭೋಗದಲ್ಲಿ ಕರ್ಮಗಳು ಅನುಭವಿಸಲ್ಪಡುತ್ತಿವೆ. ಯೋಗದಲ್ಲಿ ಕರ್ಮಗಳು ಸುಡುತ್ತಿವೆ. ದಕ್ಷಿಣಾಯಣವನ್ನು ಭೋಗಗಳಿಗೆ ಗುರುತಾಗಿ ಹೇಳಿಕೊಂಡಿದ್ದಾರೆ.

ಭೋಗಗಳು ಅಜ್ಞಾನಕ್ಕೆ ಸಂಬಂಧಿಸಿರುವವು, ಆದ್ದರಿಂದ ದಕ್ಷಿಣಾಯಣವನ್ನು ಪ್ರಪಂಚಸಂಬಂಧ ಭೋಗಗಳ ಚಿಹ್ನೆಯಾಗಿ ವ್ಯಕ್ತಪಡಿಸಿದ್ದಾರೆ. ಉತ್ತರಾಯಣವನ್ನು ದೈವಸಂಬಂಧ ಯೋಗಗಳಿಗೆ ಗುರುತಾಗಿ ಹೇಳಿಕೊಂಡಿದ್ದಾರೆ. ಈ ವಿಧವಾಗಿ ಹೇಳುವುದಲ್ಲದೇ ಎಲ್ಲರಿಗೂ ಸ್ವಲ್ಪ ಗುರುತಿರುವಂತೆ ಸಹ ಮಾಡಿದ್ದಾರೆ. ಪ್ರತಿ ಮನುಷ್ಯನಿಗೂ ಭೋಗಗಳನ್ನು ಅನುಭವಿಸುವುದು ಅಭ್ಯಾಸವಾಗಿದೆ. ಭೋಗಗಳೆಂದರೆ ಕೇವಲ ಸುಖಗಳೇ ಅಂದುಕೊಳ್ಳಬಾರದು. ಕಷ್ಟಗಳನ್ನು ಸುಖಗಳನ್ನು ಎರಡನ್ನು ಭೋಗಗಳೇ ಎನ್ನುತ್ತಿದ್ದಾರೆ. ಭೋಗಗಳೆಂದರೆ ಅನುಭವಿಸುವವೆಂದು ಅರ್ಥ.

ಹಾಗೆಯೇ ಪ್ರತಿ ಮನುಷ್ಯ ಯೋಗಗಳನ್ನು ಹೊಂದಲಾರದೆ ಹೋಗುತ್ತಿದ್ದಾನೆ. ಯೋಗಗಳೆಂದರೆ ಭೋಗಗಳಿಗೆ ವಿರುದ್ಧಗಳಾಗಿವೆ. ಕರ್ಮಾನುಭವ ಅಲ್ಲದಿರುವವು ಯೋಗಗಳು, ಕರ್ಮವನ್ನು ಸುಡುವವು ಯೋಗಗಳು, ಜ್ಞಾನವೆಂಬ ಅಗ್ನಿ ನಿಲಯಗಳು ಯೋಗಗಳು. ಕರ್ಮಗಳನ್ನು ಸುಡುವುದು ಜ್ಞಾನಾಗ್ನಿ ಮಾತ್ರವೇ ಎಂದು ಮರೆಯಬಾರದು. ಜ್ಞಾನಾಗ್ನಿ ನಿಲಯವಾದ ಯೋಗಗಳಿಗೆ ಗುರುತಾಗಿ ಉತ್ತರಾಯಣ, ಅನುಭವಗಳಿಗೆ ನಿಲಯಗಳಾದ ಭೋಗಗಳಿಗೆ ಗುರುತಾಗಿ ದಕ್ಷಿಣಾಯಣ ಜ್ಞಾಪಕವಿರುವಂತೆ ವರ್ಷದಲ್ಲಿ ಒಂದು ಹಬ್ಬವನ್ನು ಇಟ್ಟಿದ್ದಾರೆ. ಅದೇ ಸಂಕ್ರಾಂತಿಹಬ್ಬ, ಇದನ್ನೇ ಮಕರಸಂಕ್ರಾಂತಿ ಅನ್ನುತ್ತಾರೆ.

ಮಕರ ರಾಶಿಯೊಳಗೆ ಸೂರ್ಯನು ಪ್ರವೇಶಿಸುವುದನ್ನು ಮಕರ ಸಂಕ್ರಾಂತಿ ಅನ್ನುತ್ತೇವೆ. ಸಾಧಾರಣವಾಗಿ ಜನವರಿ 14ನೇ ತಾರೀಖಿನಂದೆ ಸಂಕ್ರಾಂತಿ ಬರುತ್ತಿರುತ್ತದೆ. ಬಹುಶ ಕೆಲವು ವರ್ಷಗಳಿಗೊಂದುಸಲ ಜನವರಿ 15ನೇ ತಾರಿಖು ಸಂಕ್ರಾಂತಿ ನಡೆಯುತ್ತಿರುತ್ತದೆ. ಜನವರಿ 13ನೇ ತಾರೀಖಿನವರೆಗೆ ದಕ್ಷಿಣಾಯಣ ಇರುವಾಗ, 14ನೇ ತಾರೀಖಿನಿಂದ ಉತ್ತರಾಯಣವಾಗುತ್ತದೆ. ದಕ್ಷಿಣಾಯಣ ಭೋಗಗಳಿಗೆ ಗುರ್ತಾದ್ದರಿಂದ ಆ ವಿಷಯ ಗುರ್ತಿರುವಂತೆ ಜನವರಿ 13ನೇ ತಾರೀಖನ್ನು ಸಂಕ್ರಾಂತಿಯ ಹಿಂದಿನ ದಿನವನ್ನು ಭೋಗಿ

ಎಂದಿದ್ದಾರೆ. ಭೋಗಿ ನಂತರ ಸಂಕ್ರಾಂತಿ ಅನ್ನುವುದು ಸಹಜವಾಗಿ ಇರುವುದೇ. ಭೋಗಿ ದಿನದಂದು ರಾತ್ರಿಗೆ ಉರಿ ಹಾಕಿ ಭೋಗಿ ಉರಿಯೆಂದು ಹೆಸರಿಡುವುದು ಸಹ ನಡೆದಿದೆ. ಭೋಗಿಯನ್ನು ಗುರುತಾಗಿ ಹೇಳಿಕೊಳ್ಳುವುದು ಆ ರಾತ್ರಿಗೆ ಉರಿ ಹಾಕುವುದು ಎಲ್ಲರೂ ಮಾಡುತ್ತಿರುವ ಕೆಲಸವೇ ಆಗಲಿ ಅದರ ಅರ್ಥ, ವಿವರ ಬಹಳಜನರಿಗೆ ತಿಳಿದಿಲ್ಲವೆಂದುಕೊಳ್ಳುತ್ತೇವೆ.

ದಕ್ಷಿಣಾಯಣ ಅಜ್ಞಾನ ಸಂಬಂಧ, ಪ್ರಪಂಚ ಸಂಬಂಧ ಗುರ್ತು ಎಂದು ಮೊದಲೇ ಹೇಳಿಕೊಂಡಿದ್ದೇವೆ. ಪ್ರಪಂಚ ಅನುಭವಗಳಿಗೆ ತಾರ್ಕಾಣ ವಾಗಿರುವ ದಕ್ಷಿಣಾಯಣವನ್ನು ಭೋಗಿ ಅನ್ನುವ ಹೆಸರಿನಿಂದ ಕೊನೆಯದಿ ನದಂದು ಗುರ್ತು ಮಾಡಿಕೊಳ್ಳುತ್ತಾ, ನಮ್ಮ ಜೀವನದಲ್ಲಿ ಸಹ ಇಂದಿನಿಂದ ಭೋಗಗಳು ಹೋಗಿ ಯೋಗಗಳು ಬರಬೇಕೆಂದು ಪೂರ್ವದಲ್ಲಿ ಕೋರಿ ಕೊಳ್ಳುತ್ತಿದ್ದರು. ಭೋಗಗಳು ಎಂದರೆ ಅನುಭವಗಳಿಗೆ ಕಾರಣವಾದ ಕರ್ಮ ಹೋಗಬೇಕೆಂದು, ಭಗವದ್ಗೀತೆಯಲ್ಲಿ ಹೇಳಿದಂತೆ ಕರ್ಮಗಳನ್ನು ಕಟ್ಟಿಗೆಗಳಾಗಿ, ಜ್ಞಾನವನ್ನು ಅಗ್ನಿಗೆ ಹೋಲಿಸಿ ರಾತ್ರಿ ಉರಿ ಹಾಕುತ್ತಿದ್ದರು. ಅನುಭವಕ್ಕೆ ಮುಂಬರುವ ಕರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ ಚಿಹ್ನೆಯೇ ಭೋಗಿ ಉರಿಹಾಕುವುದು. ದಕ್ಷಿಣಾಯಣ ಕೊನೆಯಲ್ಲಿ ಭೋಗಗಳಿಗೆ ಸ್ವಸ್ತಿಹೇಳುವುದು, ಭೋಗಿ ಉರಿ ಉರಿಸುವುದು, ಹಾಗೆಯೇ ಉತ್ತರಾಯಣ ಮೊದಲಿನಲ್ಲಿ ಯೋಗಕ್ಕೆ ಅಹ್ವಾನ ಹೇಳುವುದು ಸಂತೋಷಕರವಾದ ವಿಷಯ. ಆದ್ದರಿಂದ ಆ ದಿನವನ್ನು ಸಂಕ್ರಾಂತಿ ಉತ್ಸವವಾಗಿ ಹಬ್ಬ ಮಾಡಿಕೊಳ್ಳುವುದು ಪೂರ್ವಾಚಾರ. ಪೂರ್ವದಲ್ಲಿ ಹಿರಿಯರು ಭಾವಯುಕ್ತವಾಗಿ ಮಾಡಿದ ಆಚಾರ ಇಂದಿಗೂ ನಡೆಯುತ್ತಿದ್ದರೂ ಭೋಗಿ ಎಂದು ಏಕೆ ಅನ್ನುತ್ತಿದ್ದೇವೊ, ಭೋಗಿಉರಿಗಳು ಏಕೆ ಹಾಕುತ್ತಿದ್ದೇವೊ, ಸಂಕ್ರಾಂತಿ ಹಬ್ಬ ಏಕೆ ಮಾಡುತ್ತಿದ್ದೇವೊ ತಿಳಿದಿಲ್ಲ.

**"ಜ್ಞಾನಾಗ್ನಿ ಸರ್ವಕರ್ಮಾಣಾಂ ಭಸ್ಮಸಾತ್"** ಜ್ಞಾನವೆಂಬ ಅಗ್ನಿಯಿಂದ ಸರ್ವಕರ್ಮಗಳು ಭಸ್ಮಿಪಟಲವಾಗುತ್ತವೆಂದು ಗೀತೆಯಲ್ಲಿ ಭಗವಂತನು ಹೇಳಿದ್ದಾನೆ. ಭೋಗಿಗಿರುವ ಕರ್ಮಗಳನ್ನು ಜ್ಞಾನಕ್ಕಿರುವ ಅಗ್ನಿಸುಡುವುದನ್ನೇ

ಭೋಗಿ ಉರಿಗಳು ಅನ್ನುತ್ತಿದ್ದೇವೆ. ಸಂಕ್ರಾಂತಿಗಿಂತ ಹಿಂದಿನ ದಿನ ಅಜ್ಞಾನಕ್ಕೆ ಕೊನೆಯ ದಿನ ಆಗಬೇಕೆಂದು, ಸಂಕ್ರಾಂತಿಯ ಮೊದಲ ದಿನ ಜ್ಞಾನಕ್ಕೆ ಆರಂಭ ದಿನ ಆಗಬೇಕೆಂದು, ಅಂತರಾರ್ಥವನ್ನು ಬಾಹ್ಯರ್ಥವಾಗಿ ತಿಳಿಸುತ್ತಾ ಪೂರ್ವದಲ್ಲಿ ಭೋಗಿ ಉರಿಗಳು ಹಾಕಿದಾಗ ಅಂದಿನ ಆಚಾರ ಇಂದಿಗೂ ಇದೆ. ಆಚಾರವಿದೆ ಅರ್ಥ ಇಲ್ಲ. ಈಗಿನ ಆಚಾರಕ್ಕೂ ಅಂದಿನ ಅರ್ಥವನ್ನು ಜೋಡಿಸಿಕೊಂಡು ಮಾಡಿದರೆ ಎಷ್ಟೋ ಬೆಲೆಯಿಂದ ಕೂಡಿಕೊಂಡ ಕೆಲಸ ಆಗುತ್ತದೆ. ಆದ್ದರಿಂದ ಈದಿನ ಉದ್ದೇಶದಿಂದ ಕೆಲಸಮಾಡಿದರೆ ಒಂದುದಿನಕ್ಕೆ ಅದು ನೆರವೇರುತ್ತದೆ. ಉದ್ದೇಶವಿಲ್ಲದ ಕೆಲಸ ವ್ಯರ್ಥ, ಆದ್ದರಿಂದ ಬಜಾರಿನಲ್ಲಿ ಭೋಗಿ ಉರಿಯನ್ನು ಹಾಕಿದರೆ ಪ್ರಯೋಜನೆಯಿಲ್ಲ. ನಮ್ಮ ತಲೆಯಲ್ಲಿ ಭೋಗಗಳಿಗೆ ಕಾರಣವಾದ ಕರ್ಮಗಳನ್ನು ಜ್ಞಾನಉರಿಗಳಿಂದ ಉರಿಸಬೇಕು. ಈಗಲಾದರೂ ಬೆಲೆ ಅರ್ಥ ತಿಳಿದು ಸಂಕ್ರಾಂತಿ ಹಬ್ಬ ಮಾಡೋಣ. ಶರೀರದಲ್ಲಿ ಜ್ಞಾನವೆಂಬ ಅಗ್ನಿಯನ್ನು ಕೈಗೂಡಿಸಿಕೊಂಡು ಕರ್ಮಗಳನ್ನು ಸುಡುತ್ತೇವೆಂಬ ಅರ್ಥದಿಂದ ಹೊರಗೆ ಭೋಗಿ ಉರಿಗಳನ್ನು ಉರಿಸೋಣ.

# ದೇವರು – ಮಾಯೆ

ರಾಜಕೀಯದಲ್ಲಿ ಪಕ್ಷ ಪ್ರತಿಪಕ್ಷ ಇರುವಂತೆ, ಒಂದು ನಾಟಕದಲ್ಲಿ ವಿಲನ್ ಹೀರೋ ಇರುವಂತೆ, ಆಟದಲ್ಲಿ ಜಟ್ಟಿ ಪ್ರತಿಜಟ್ಟಿ ಇರುವಂತೆ, ಜಗನ್ನಾಟಕವೆಂಬ ಆಟದಲ್ಲಿ ಸಹ ಇಬ್ಬರು ಅಗತ್ಯವಾಗಿದ್ದಾರೆ. ಜಗತ್ತಿಗೆಲ್ಲಾ ಪರಮಾತ್ಮವೇ ದೊಡ್ಡದಾದರೂ, ಜಗನ್ನಾಟಕದಲ್ಲಿ ತನಗೆ ಪ್ರತಿಪಕ್ಷವಾಗಿ ಪ್ರಕೃತಿ ಎನ್ನುವುದನ್ನು ತಯಾರುಮಾಡಿಟ್ಟಿದ್ದಾನೆ. ಪ್ರಕೃತಿ ಪಂಚಭೂತಗಳಾಗಿ ಕಾಣಿಸುತ್ತಿದ್ದರೂ, ಪ್ರಕೃತಿಯಿಂದಲೇ ಕಾಣಿಸದ ಮಾಯೆಯನ್ನು ದೇವರು ತಯಾರುಮಾಡಿಟ್ಟಿದ್ದಾನೆ. ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಅನ್ನುವ ಐದು ಭಾಗಗಳಾಗಿರುವ ವಿಶ್ವವೆಲ್ಲಾ ದೇವರು ವ್ಯಾಪಿಸಿದ್ದಾನೆ. ಅದೇ ವಿಧವಾಗಿ ಐದು ಭಾಗಗಳಲ್ಲಿ ಮಾಯೆ ಸಹ ವ್ಯಾಪಿಸಿದೆ. ಒಂದು

ಆಟದಲ್ಲಿ ಸಮಾನ ಆಟಗಾರರು ಎರಡುಕಡೆ ಇದ್ದಾಗಲೇ ಆಟ ರಸವತ್ತರವಾಗಿ ಇರುತ್ತದೆ. ಇಬ್ಬರು ಸಮಾನವಾಗಿ ಆಟದಲ್ಲಿ ಕಾಣಿಸಿದರೂ ಕೊನೆಗೆ ಒಬ್ಬರಿಗೆ ಸೋಲು, ಒಬ್ಬರಿಗೆ ಗೆಲುವು ನೋಡದೆ ತಪ್ಪುವುದಿಲ್ಲ. ಹಾಗೆಯೇ ಜಗನ್ನಾಟಕದಲ್ಲಿ ದೇವರು, ಮಾಯ ಸಮಾನವಾಗಿ ಆಡುತ್ತಿದ್ದಾರೆ. ಗೆಲುವು ಸೋಲು ಕೊನೆಗೆ ತಿಳಿಯುತ್ತವೆ, ಗೆಲುವು, ಸೋಲುಗಳ ಸಂಗತಿಗೆ ಬಂದರೆ ಕೊನೆಗೆ ದೇವರೆ ಗೆಲ್ಲುತ್ತಾನೆ. ಆದರೂ ಅಲ್ಲಿಯವರೆಗೂ ನಮಗೆ ಅಗತ್ಯವಿಲ್ಲ. ನಾವು ನೋಡಬೇಕಾಗಿರುವುದು ತಿಳಿದುಕೊಳ್ಳಬೇಕಾಗಿರುವುದು ಆಟ ಯಾವ ವಿಧವಾಗಿ ಸಾಗುತ್ತಿದೆ, ಯಾರು ಯಾವ ವಿಧವಾಗಿ ಆಡುತ್ತಿದ್ದಾರೆ, ಆಡುವ ಚಂಡು ಯಾವಕಡೆ ಹೋಗುತ್ತಿದೆ ಎಂದು ಮಾತ್ರವೇ.

ಜಗನ್ನಾಟಕವೆಂಬ ಆಟದಲ್ಲಿ, ಪ್ರಕೃತಿ ಪರಮಾತ್ಮರು ಆಡಿಕೊಳ್ಳುವ ಚದರಂಗದಲ್ಲಿ ಪಗಡೆಯಂತೆ ಕದಲಿ ಆಡುವವನು ಜೀವಿ. ಜಗನ್ನಾಟಕವೆಂಬ ಚದರಂಗದಲ್ಲಿ ಪಗಡೆಗಳನ್ನು ಕದಲಿಸುವವರು ಪ್ರಕೃತಿ ಪರಮಾತ್ಮರೇ ಅದರೂ, ಪಗಡೆಯಂತೆ ಕದಲುವವನು ಜೀವಿಯೇ ಅದರೂ, ತನ್ನನ್ನು ಯಾರು ಕದಲಿಸುತ್ತಿದ್ದಾರೆಂಬ ವಿಷಯ ಜೀವಿಗೆ ತಿಳಿಯದು. ಏಕೆಂದರೆ ದೇವರು ಎಂದರೆ ದೇವಲ್ಪಡುವವನು, ಹುಡುಕಲ್ಪಡುವವನು ಎಂದು ಅರ್ಥ. ಅರ್ಥದ ಪ್ರಕಾರವೇ ದೇವರು ಶರೀರ ಧರಿಸಿದರು ಯಾರಿಗೂ ತಿಳಿಯುವವನಲ್ಲ. ನಾವು ಶರೀರ ಧರಿಸಿ ಇದ್ದೇವಲ್ಲ ಆದ್ದರಿಂದ ನಮಗೂ ಸಹ ತಿಳಿಯದು. ಇಲ್ಲಿ ಕೆಲವರಿಗೊಂದು ಪ್ರಶ್ನೆಬರಬಹುದು. **"ಪೂರ್ವದಲ್ಲಿ ಎಷ್ಟೋ ಜನ ದೇವರ ವಿಶ್ವರೂಪವನ್ನು ನೋಡಿದವರಿದ್ದಾರಲ್ಲವೆ! ಅದನ್ನನುಸರಿಸಿ ನೋಡಿದರೆ ನಿಮ್ಮ ಮಾತು ಅಸತ್ಯವಾಗುತ್ತದಲ್ಲ!"** ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ನಮ್ಮ ಮಾತು ಅಸತ್ಯವಾದರೆ ದೇವರೆಂಬ ಪದವೊಂದರ ಅರ್ಥವೇ ಅಸತ್ಯವಾಗುತ್ತದೆಂದು ಹೇಳಬಹುದು. ಪ್ರಪಂಚ ಹುಟ್ಟಿದಾಗಿನಿಂದ ದೇವರು ತಾನು ಇಂತಹವನೆಂದು ತಿಳಿಸುವುದಕ್ಕೋಸ್ಕರ ಭಗವದ್ಗೀತೆಯಲ್ಲಿ ಅರ್ಜುನನಿಗೆ ತನ್ನ ವಿಶ್ವರೂಪ ತೋರಿಸಿದ್ದೇನೆಂದು ಹೇಳಿದ್ದಾನೆ ಹೊರತು, ಮತ್ತೆಲ್ಲೇ ಆಗಲಿ

ಯಾವ ಸಂದರ್ಭದಲ್ಲಾಗಲಿ ವಿಶ್ವರೂಪ ತೋರಿಸಲಿಲ್ಲ, ಯಾರೂ ನೋಡಲಿಲ್ಲ. ದೇವರೆಂಬ ಅರ್ಥ ವ್ಯರ್ಥವಾಗದಂತೆ, ತನಗೆ ತಾನಾಗಿ ಅರ್ಜುನನಿಗೆ ದೇವರು ತೋರಿಸಿರುವುದು ವಿಶ್ವರೂಪ. ಮೊದಲಿನಿಂದ ಎಷ್ಟೋ ಜನ ನನ್ನ ವಿಶ್ವರೂಪವನ್ನು ನೋಡಬೇಕೆಂದು ಆಕಾಂಕ್ಷೆ ಹೊಂದಿದ್ದಾರೆ, ಆದರೂ ಯಾರಿಗೂ ತಿಳಿಯದ ವಿಶ್ವರೂಪವನ್ನು ನನ್ನ ಇಷ್ಟದಿಂದ ನಿನಗೆ ತೋರಿಸುತ್ತಿದ್ದೇನೆ. ಈ ಕಣ್ಣುಗಳಿಂದ ನೀನು ನೋಡಲಾರೆ ಆದ್ದರಿಂದ ಪ್ರತ್ಯೇಕವಾದ ಜ್ಞಾನನೇತ್ರಗಳನ್ನು ನಿನಗೆ ಕೊಡುತ್ತಿದ್ದೇನೆಂದು ದೇವರೇ ಹೇಳಿ ತೋರಿಸಿರುವುದು ವಿಶ್ವರೂಪ. ದೇವರು ಕೊಟ್ಟಿರುವ ಜ್ಞಾನದೃಷ್ಠಿ ಆ ಸ್ವಲ್ಪಸಮಯ ಹೊರತು ನಂತರವಾಗಲಿ ಮೊದಲಾಗಲಿ ಅರ್ಜುನನಿಗೆ ಇಲ್ಲ. ಆ ವಿಧವಾಗಿ ಒಂದು ನಿರೂಪಣೆಗೋಸ್ಕರ ನೋಡಲ್ಪಟ್ಟಿರುವುದು ವಿಶ್ವರೂಪ. ಅರ್ಜುನನಿಗಿಂತ ಮುಂಚೆಯಾಗಲಿ, ಅರ್ಜುನನ ನಂತರವಾಗಲಿ ಯಾರೂ ವಿಶ್ವರೂಪವನ್ನು ನೋಡಲಿಲ್ಲ. ಅದು ಕಾಣಿಸುವುದಿಲ್ಲ. ಅದೇ ಭಾರತದಲ್ಲಿಯೇ ಕೌರವಸಭೆಯಲ್ಲಿ ವಿಶ್ವರೂಪವನ್ನು ಕೃಷ್ಣನೇ ತೋರಿಸಿದ್ದಾನಲ್ಲ!? ಎಂದು ಕೆಲವರು ಕೇಳಬಹುದು. ಅದು ಕೇವಲ ಕಟ್ಟುಕಥೆ ಮಾತ್ರವೇ ಎಂದು ಹೇಳಬಹುದು. ಸಭೆಯಲ್ಲಿ ಎಲ್ಲರೂ ಮಾಮೂಲು ಕಣ್ಣುಗಳಿಂದಲೇ ನೋಡಿದ್ದಾರೆಂದು ಗಾಂಧಾರಿದೇವಿ ಸಹ ಕಣ್ಣುಗಳಿಗಿರುವ ಬಟ್ಟೆಯನ್ನು ತೆಗೆದು ನೋಡಿದ್ದಾಳೆಂದು ಬರೆಯಲಾಗಿದೆ. ಹಾಗೆ ಕಣ್ಣುಗಳಿಗೆ ಕಾಣಿಸುವುದು ವಿಶ್ವರೂಪ ಅಲ್ಲ. ಹಾಗೆ ಕಾಣಿಸಿದರೆ ಅದು ಹುಡುಕಲ್ಪಡುವುದೇ ಅಲ್ಲ, ಅಂದರೆ ದೇವರೇ ಅಲ್ಲ. ದೇವರು ಎಂದರೆ ಹುಡುಕಲ್ಪಡುವವನು ಅನ್ನುವ ಸೂತ್ರಬದ್ಧವಾಗಿ, ಅರ್ಥಸಹಿತವಾಗಿರುವ ವಿಧಾನವೆಂದು ತಿಳಿಯಬೇಕು. ಒಂದುಮಾತಿನಲ್ಲಿ ಹೇಳಬೇಕೆಂದರೆ ಯಾರಿಗೂ ತಿಳಿಯಲ್ಪಡದಿರುವವನು ದೇವರು. ಇದ್ದು ತಿಳಿಯದಿರುವವನು ದೇವರು. ಆದ್ದರಿಂದ ಯಾವ ಜೀವಿಗೂ ತನ್ನನ್ನು ದೇವರು ಹೇಗೆ ನಡೆಸುತ್ತಿದ್ದಾನೋ ತಿಳಿಯದಂತೆ ಹೋಗಿದೆ.

ಇನ್ನು ಮಾಯೆಯನ್ನು ಕುರಿತು ತಿಳಿದುಕೊಳ್ಳೋಣ. ಮಾಯೆ ಅನ್ನುವುದು ದೇವರಿಂದ ತಯಾರು ಮಾಡಿರುವುದು. ಆದ್ದರಿಂದ “ಮಮ

ಮಾಯಾ" ಎಂದು ದೇವರು ಗೀತೆಯಲ್ಲಿ ಹೇಳಿದ್ದಾನೆ. ಜಗನ್ನಾಟಕದಲ್ಲಿ ತನಗೆ ಸಮಾನವಾಗಿ ಆಡುವಂತೆ ಮಾಯೆಯನ್ನು ದೇವರು ಸೃಷ್ಠಿಸಿಕೊಂಡಿದ್ದಾನೆ. ತಾನೇ ಸೃಷ್ಠಿಸಿದರೂ, ತನಗೆ ವಿರುದ್ಧದಿಶೆಯಲ್ಲಿ ಆಡಲು ದೇವರೆ ಮಾಯೆಯನ್ನು ಅಜ್ಞಾಪಿಸಿದ್ದಾನೆ. ಆದ್ದರಿಂದ ದೇವರ ಮಾತನ್ನು ತಪ್ಪದೆ ಮಾಯೆ ಆಚರಿಸುತ್ತಿದೆ. ಈ ಮಾತು ಸ್ವಲ್ಪ ಆಶ್ಚರ್ಯವಾಗಿದ್ದರೂ, ದೇವರ ಬಳಿ ಭಕ್ತಿಯಾಗಿರುವುದು ಮಾಯೆ ಎಂದು ಹೇಳಬಹುದು. ಎಲ್ಲರಿಗಿಂತ ಮೀರಿದ ಭಕ್ತಿಯೇ ಅಲ್ಲದೆ, ಎಲ್ಲರಿಗಿಂತ ಹೆಚ್ಚಾಗಿ ಮಾತು ತಪ್ಪದ ವಿಧಾನ ಸಹ ಮಾಯೆ ಹತ್ತಿರವಿದೆ. ಆ ಪದ್ಧತಿ ಪ್ರಕಾರವೇ ಜಗನ್ನಾಟಕವೆಂಬ ಆಟದಲ್ಲಿ ದೇವರ ಆಜ್ಞೆಪ್ರಕಾರ ದೇವರಿಗೆ ವಿರುದ್ಧವಾಗಿ ಆಡುತ್ತಿದೆ. ದೇವರು ಪತಿಯಾದರೆ ಪತಿಯ ಬಳಿ ವಿನಯವಾಗಿ ಪ್ರವರ್ತಿಸುವ ಪತ್ನಿಯಾಗಿ ಮಾಯೆ ಇದೆ. ಆದುದರಿಂದಲೇ ಆಧ್ಯಾತ್ಮಿಕದಲ್ಲಿ ಪರಮಾತ್ಮನನ್ನು ಪ್ರಕೃತಿಯನ್ನು "ಪತಿಸತಿ"ಗಳೆಂದು ಅಂದಿದ್ದಾರೆ. ಪತಿಗಿಂತ ಸತಿ ಸ್ವಲ್ಪ ಕಡಿಮೆಯದೆಂದೆ  ಹೇಳಬಹುದು. ಪತಿಯಿಂದಲೇ ಸತಿ ತಯಾರು ಮಾಡಲ್ಪಟ್ಟಿದೆ. ಪರಮಾತ್ಮನಿಂದಲೇ ಪ್ರಕೃತಿ ತಯಾರು ಮಾಡಲ್ಪಟ್ಟಿದೆ. ಪತಿಗಿಂತ ಸತಿ ಕಡಿಮೆಯದೇ ಅನ್ನುವಂತೆ ಕನ್ನಡ ಭಾಷೆಯಲ್ಲಿ 'ಪ' ಎನ್ನುವ ಅಕ್ಷರಕ್ಕೆ 'ಸ' ಅನ್ನುವ ಅಕ್ಷರ ಸ್ವಲ್ಪ ಕಡಿಮೆಯಾಗಿ ಕಾಣಿಸುತ್ತಿದೆ. 'ಪ' ಮೊದಲು ಕೆಳಗೆ ಸೊನ್ನೆಯಿಂದ ಪ್ರಾರಂಭವಾದರೆ 'ಸ' ಮಾತ್ರ ಮೊದಲು ಕೆಳಗೆ ಅರ್ಧಸೊನ್ನೆ ಯಿಂದ ಪ್ರಾರಂಭವಾಗುತ್ತಿದೆ. ಇದರಿಂದ ಪ್ರಕೃತಿ ಪರಮಾತ್ಮನಿಗೆ ಒಳಪಟ್ಟಿದೆ ಎಂದು ತಿಳಿಯುತ್ತಿದೆ. ದೇವರ ಮಾರ್ಗದಲ್ಲಿ ಮಾಯೆ ಎಷ್ಟು ಆತಂಕಪಡಿಸಿದರೂ, ದೇವರ ಒಪ್ಪಿಗೆಯನ್ನು ಹೊಂದಿದವನನ್ನು ಮಾಯೆ ಆತಂಕಪಡಿಸುವುದಿಲ್ಲವೆಂದು, ಅವನು ಮೋಕ್ಷ ಪಡೆಯುತ್ತಾನೆಂದು ತಿಳಿಯುತ್ತಿದೆ. ಆದ್ದರಿಂದ ನನ್ನನ್ನು ಶರಣಬೇಡಿದವನು ಮಾಯೆಯನ್ನು ದಾಟಿ ಹೋಗುತ್ತಾನೆಂದು ಗೀತೆಯಲ್ಲಿ "ಮಾ ಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಂ ತರನ್ತಿತೇ" ಎಂದು ಭಗವಂತನು ಹೇಳಿದ್ದಾನೆ. ಅಷ್ಟೇ ಅಲ್ಲದೆ ವೇಮನಯೋಗಿ ತನ್ನ ಪದ್ಯದಲ್ಲಿ **"ಪತಿಯೊಪ್ಪಿದರೆ ಸತಿಯೊಪ್ಪುತ್ತಾಳೆ"** ಎಂದು ಸಹ ಹೇಳಿದ್ದಾನೆ. ದೇವರೇ ತಯಾರು ಮಾಡಿಟ್ಟಿರುವುದು ದೇವರಿಗೆ ಸುಮಾರು ಸಮವಾಗಿರುವುದು ಮಾಯೆ.

ಮಾಯೆ ಗುಣರೂಪವಾಗಿ ಮನುಷ್ಯನನ್ನು ಆವರಿಸಿದರೂ ಕಾಣಿಸುವ ಪ್ರಕೃತಿಯಾಗಿ ಸಹ ಇದೆ. ಮಾಯೆ ಹೊರಗೆ ಪಂಚಭೂತಗಳ ರೂಪವಾಗಿ, ಒಳಗೆ ಗುಣಗಳರೂಪವಾಗಿ ಮನುಷ್ಯನನ್ನು ಆಡಿಸುತ್ತಿದೆ. ಕೆಲವರು ನಾವು ಮಾಯೆಯನ್ನು ಜಯಿಸಿದ್ದೇವೆ ಅನ್ನುತ್ತಿರುತ್ತಾರೆ. ಮಾಯೆಯನ್ನು ಜಯಿಸುವುದು ದುಸ್ಸಾಧ್ಯವೆಂದು ದೇವರೇ ಗೀತೆಯಲ್ಲಿ ಹೇಳಿದ್ದಾನೆ. ಆದ್ದರಿಂದ ಮಾಯೆ ಎಷ್ಟೋ ಬಲವಾದುದೆಂದು ತಿಳಿಯುತ್ತಿದೆ. ಮಾಯೆ ಎಷ್ಟು ಬಲವಾದುದು? ನಮಗೆಷ್ಟು ಬಲ ಇದೆ? ಅದನ್ನು ಜಯಿಸುವುದಕ್ಕೆ ನಮ್ಮಬಲ ಸರಿಹೋಗುತ್ತದಾ? ಎಂದು ಆಲೋಚಿಸಿದರೆ ಈ ವಿಧವಾಗಿ ತಿಳಿಯುತ್ತಿದೆ. ಪಂಚಭೂತಗಳಲ್ಲಿ ಗಾಳಿಗೆ ಎಷ್ಟು ಬಲ ಇದೆಯೆಂದು ನೋಡಿದರೆ ಅದರ ಬಲಕ್ಕೆ ಯಾವುದನ್ನು ಸರಿಹೋಲಿಸಲಾರೆವು. ಗಾಳಿ ಬಲವನ್ನು ಅಳೆಯುವುದಕ್ಕೆ ಯಾವ ಮೀಟರ್‌ಗಳು ಕೆಲಸಕ್ಕೆ ಬರುವುದಿಲ್ಲ. ಯಾವ ಶಾಸ್ತ್ರಜ್ಞರ ಆಲೋಚನೆಗೆ ಸಿಗದಷ್ಟು ಬಲ ಗಾಳಿಗೆ ಇದೆ. ಅಡ್ಡವಿರುವ ಏನನ್ನಾದರೂ ತಳ್ಳಿಹಾಕುವ ಶಕ್ತಿ ಗಾಳಿಗಿದೆ. ಆ ವಿಧವಾಗಿಯೇ ನೀರು ಅಪರಿಮಿತವಾದ ಶಕ್ತಿ ಇರುವುದಾಗಿದೆ. ಸ್ವಲ್ಪಸಮಯ ದಲ್ಲಿಯೇ ಭೂಮಿಯೆಲ್ಲವನ್ನು ಮುಳಗಿಸಿ ಜೀವರಾಶಿಗಳೆಲ್ಲವನ್ನು ಸಾಯಿಸಬಲ್ಲದು. ಭೂಮಿ ಮೇಲಿರುವ ಪ್ರತಿಯೊಂದನ್ನು ಬೀಳಿಸಿ ತಳ್ಳಿಹಾಕಬಲ್ಲದು. ಹಾಗೆಯೇ ಅಗ್ನಿ ಎಲ್ಲವನ್ನು ಸುಟ್ಟು ಬೂದಿ ಮಾಡಬಲ್ಲದು. ಈ ವಿಧವಾಗಿ ಪ್ರಕೃತಿಯಲ್ಲಿನ ಐದು ಭಾಗಗಳಿಗೆ ಐದು ವಿಪರೀತವಾದ ಶಕ್ತಿಗಳು ಇವೆ. ಯಾವ ಒಂದು ಭಾಗದೊಂದಿಗೆ ಸಹ ಮಾನವನ ಶಕ್ತಿ ಸರಿಯಲ್ಲ. ಮಾನವನ ಶಾರೀರಕ ಮಾನಸಿಕ ಶಕ್ತಿಗಳಿಗಿಂತ ದೊಡ್ಡಶಕ್ತಿಗಳಾಗಿ ಪ್ರಕೃತಿ ಶಕ್ತಿಗಳು ಇವೆ. ಪ್ರಕೃತಿಯಲ್ಲಿನ ಐದು ಶಕ್ತಿಗಳನ್ನು ಸೇರಿಸಿದರೆ ಎಷ್ಟು ಶಕ್ತಿ ಇರುತ್ತದೋ ಅಷ್ಟುಶಕ್ತಿ ಮಾಯೆಗೆ ಇದೆಯೆಂದು ಹೇಳಬಹುದು. ಪ್ರಕೃತಿಯಿಂದ ಹುಟ್ಟಿರುವುದೇ ಮಾಯೆ. ಆದ್ದರಿಂದ ಪ್ರಕೃತಿ ಶಕ್ತಿಯಿಂದ ಸಮಾನವಾದ ಶಕ್ತಿ ಮಾಯೆಗೆ ಇದೆ. ಪ್ರಕೃತಿಯಲ್ಲಿನ ಪಂಚಭೂತಗಳ ಶಕ್ತಿಗಳು ಕಾಣಿಸುತ್ತವೆ. ಆದರೆ ಮಾಯಶಕ್ತಿ ಕಾಣಿಸುವುದಿಲ್ಲ. ಹಾಗೆಯೇ ಪ್ರಕೃತಿ ಕಣ್ಣಿಗೆ ಕಾಣಿಸುತ್ತಿದೆ. ಮಾಯೆ ಕಾಣಿಸದಂತೆ ಇದೆ. ದೇವರು ಇದ್ದು ಕಾಣಿಸದಂತೆ, ಮಾಯೆ ಸಹ ಮನುಷ್ಯರಲ್ಲಿಯೇ ಇದ್ದು ಕಾಣಿಸದಂತಿದೆ.

ಒಂದು ವಸ್ತುವು ಎಲ್ಲಾದರೂ ಕಾಣಿಸದಂತೆ ಹೋದಾಗ ಮಾಯವಾಗಿ ಹೋಗಿದೆ ಅನ್ನುತ್ತಿರುತ್ತೇವೆ. ಮಾಯವಾಗಿ ಹೋಗುವುದು ಎಂದರೆ ಕಾಣಿಸದಂತೆ ಹೋಗಿದೆ ಎಂದು ಅರ್ಥ. ಇದರ ಪ್ರಕಾರ ಮಾಯೆ ಎಂದರೆ ಕಾಣಿಸದಿರುವುದೆಂದು ಅರ್ಥ. ಪೂರ್ವದಲ್ಲಿ ಮಾಯೆ ಎಂದು ಹೇಳುತ್ತಿದ್ದರು ಆ ಪದ ಕಾಲಕ್ರಮವಾಗಿ ಸ್ವಲ್ಪ ಬದಲಾಗಿ "ಮಾಯ" ಅನ್ನುವಪದವಾಗಿ ಸಹ ಹೇಳಲಾಗುತ್ತಿದೆ. ಮಾಯವಾಗಿ ಹೋಗಿದೆ ಎಂದರೂ, ಮಾಯೆಯಾಗಿ ಹೋಗಿದೆಯೆಂದರೂ ಒಂದೇ ಅರ್ಥವೆಂದು ತಿಳಿಯಬೇಕು. ಇದ್ದು ತಿಳಿಯದಿರುವವನು ದೇವರು. ಇದ್ದು ಕಾಣಿಸದಿರುವುದು ಮಾಯೆ. **ದೇವರನ್ನು ಸಿಗುವವನಲ್ಲ ಎಂದರೆ ಮಾಯೆಯನ್ನು ದೊರಕುವುದಿಲ್ಲ ಅನ್ನಬೇಕು.** ದೇವರು ಮಾಯೆ ಎರಡು ಸುಮಾರು ಸಮಾನವೇ ಆಗಿವೆ, ಆದುದರಿಂದ ಒಂದು ಸಿಗುವವನಲ್ಲ ಎರಡನೆಯದು ದೊರಕುವುದಿಲ್ಲ.

ಕಾಣಿಸದ ಮಾಯೆಯನ್ನು ಜಯಿಸಿದರೆ ಯಾರಿಗೂ ತಿಳಿಯದ ದೇವರು ತಿಳಿಯಲ್ಪಡುತ್ತಾನೆ. ಯಾವಾಗ ದೇವರು ತಿಳಿಯಲ್ಪಟ್ಟಿದ್ದಾನೋ ಆಗ ಅವನು ಮೋಕ್ಷ ಹೊಂದಿರುತ್ತಾನೆ. ವಾಸ್ತವವಾಗಿ ಹೇಳಿದರೆ ಸುಮಾರು ದೇವರಂತಹದ್ದು ಮಾಯೆ. ಆದುದರಿಂದ ಅದನ್ನು ಜಯಿಸಬೇಕೆಂದರು ಮಾನವನ ಶಕ್ತಿಯುಕ್ತಿಗಳು ಸಾಕಾಗುವುದಿಲ್ಲ. ಅಂತಹದರಲ್ಲಿ ಹೇಗೆ ಜಯಿಸಬೇಕೆಂಬ ಪ್ರಶ್ನೆಬರುತ್ತದೆ. ಈ ಪ್ರಶ್ನೆಗೆ ಉತ್ತರವಾಗಿ **'ನನ್ನನ್ನು ಶರಣಬೇಡಿದಾಗ ಮಾಯೆಯನ್ನು ಸುಲಭವಾಗಿ ಜಯಿಸಬಹುದೆಂದು ಗೀತೆಯಲ್ಲಿ ದೇವರಂದಿದ್ದಾನೆ'**. ದೇವರನ್ನು ಶರಣುಬೇಡುವುದಕ್ಕೆ ಆತನ ಮೇಲೆ ವಿಶ್ವಾಸವಿರಬೇಕು, ಆತನ ವಿವರವೂ ವಿಧಾನವೂ ಸ್ವಲ್ಪ ತಿಳಿಯಬೇಕು. **ದೇವರ ವಿಧಾನಗಳು ಧರ್ಮಗಳು, ದೇವರ ವಿವರ ಜ್ಞಾನ.** ಮಾನವನು ಜ್ಞಾನವನ್ನು ಸಂಪೂರ್ಣವಾಗಿ ತಿಳಿದು ಧರ್ಮಗಳನ್ನು ಆಚರಿಸಿದಾಗ ಆತನಿಗೆ ಜ್ಞಾನಶಕ್ತಿ ಏರ್ಪಡುತ್ತದೆ. ಜ್ಞಾನಶಕ್ತಿಯನ್ನು ಸ್ವಲ್ಪಮಟ್ಟದವರೆಗೂ ಸಂಪಾದಿಸಿಕೊಂಡ ನಂತರ ಮಾಯೆಯನ್ನು ಜಯಿಸುವುದಕ್ಕೆ ಸಾಧ್ಯವಾಗುತ್ತದೆ. ಒಂದು ಜ್ಞಾನಶಕ್ತಿ ಇರುವವನನ್ನು ಹೊರತು, ಸ್ವಲ್ಪ ಜ್ಞಾನ

ಇರುವವನನ್ನು, ಜ್ಞಾನಮಾರ್ಗದಲ್ಲಿರುವವನನ್ನು ಮಾಯೆ ಬಿಡದೆ ವೇಧಿಸುತ್ತದೆ. ಮಾಯೆಯ ವೇಧನೆಗಳಿಗೆ ಸಂಪೂರ್ಣ ಜ್ಞಾನಶಕ್ತಿ ಇಲ್ಲದವನು ಬೇಸರ ಗೊಳ್ಳುತ್ತಾನೆ. ಬೇಸರಗೊಂಡವನು ಜ್ಞಾನ ಮಾರ್ಗವನ್ನು ತಪ್ಪಿಹೋಗುವುದಕ್ಕೆ ಅವಕಾಶ ಇದೆ.

ಮನುಷ್ಯನನ್ನು ಅಸಲಾದ ದೇವರ ಮಾರ್ಗದಿಂದ ತೊಲಗಿಸುವುದಕ್ಕೆ ಮಾಯೆ ಅನೇಕವಾದ ವಿಧಾನಗಳನ್ನು ಅನುಸರಿಸುತ್ತಿದೆ. ಅದರಲ್ಲಿ ಕೆಲವು ಮುಖ್ಯವಾದವು ದೇವರ ಮಾರ್ಗಗಳಾಗಿಯೇ ಕಾಣಿಸುವ ಅನೇಕ ವಿಧಾನಗಳು. ವಿಚಿತ್ರವೇನೆಂದರೆ ದೇವರ ಮಾರ್ಗಗಳು ಅಲ್ಲದಿದ್ದರೂ ಅವುಗಳನ್ನು ದೇವರ ಮಾರ್ಗಗಳಾಗಿ ತೋರಿಸುವುದೇ ಮಾಯೆಯೊಂದರ ಮುಖ್ಯ ಉದ್ದೇಶ. ಹಾಗೆ ತೋರಿಸುವುದರಿಂದ ದೇವರ ಮೇಲೆ ಸ್ವಲ್ಪ ವಿಶ್ವಾಸ ಇರುವವರೆಲ್ಲರೂ ಮಾಯ ಮಾರ್ಗದಲ್ಲಿ ಸಿಲುಕಿಕೊಂಡು ಇದೇ ಅಸಲಾದ ದೈವಮಾರ್ಗ ಅಂದು ಕೊಳ್ಳುತ್ತಿದ್ದಾರೆ. ಈ ದಿನ ಒಬ್ಬ ಪರಮಾತ್ಮ ಭಕ್ತರು ಹೊರತು **ಅನೇಕ ವಿಧಾನಗಳ ಜ್ಞಾನಗಳಲ್ಲಿರುವವರೂ, ಅನೇಕ ದೇವತಾಭಕ್ತರೂ, ದೃಶ್ಯಗಳಾದ ರೂಪಗಳ ಮೇಲೆ, ಕೇಳುವುದಾದ ಮಂತ್ರದ ಮೇಲೆ ಶ್ರದ್ಧೆಹೊಂದಿದವರೆಲ್ಲರೂ ಮಾಯೆ ಮಾರ್ಗದಲ್ಲಿರುವವರೇ ಎಂದು ಹೇಳದೆ ತಪ್ಪುವುದಿಲ್ಲ**. ಇಂದ್ರಿಯಗಳು ಪ್ರಕೃತಿಯಿಂದ ತಯಾರಾದ ಶರೀರಭಾಗಗಳು. ಇಂದ್ರಿಯಗಳಾದ ಕಣ್ಣು, ಕಿವಿ, ವೊಂದರ ವಿಷಯಗಳಾದ ದೃಶ್ಯ, ಕೇಳುವುದರ ಮೇಲಿರುವ ಜ್ಞಾನ ಪ್ರಕೃತಿಯೊಂದರ ಮಾಯಾ ವಿಧಾನವೇ ಎಂದು ತಿಳಿಯಬೇಕು. **'ಇಂದ್ರಿಯ ಗೋಚರವಾದವು ಮಾಯೆ ಸಂಬಂಧವಾದ ವಿಧಾನಗಳೆಂದು, ಇಂದ್ರಿಯಾತೀತವಾದ ವಿಧಾನಗಳು ದೈವಸಂಬಂಧ ವಿಧಾನಗಳೆಂದು ತಿಳಿಯಬೇಕು.** ಈ ದಿನ ಮಾಯಾ ಕಲುಷಿತವಾದ ಜ್ಞಾನವೇ ಭೂಮಿಮೇಲೆ ತೊಂಭತ್ತೊಂಭತ್ತರಷ್ಟು ಕಾಣಿಸುತ್ತಿದೆ. ಆದ್ದರಿಂದ ಕಾಣಿಸದ ಮಾಯೆಯನ್ನು ಗುರುತಿಸಿ ಜಯಿಸಿ ಸಿಗದ ದೇವರನ್ನು ಸಿಗುವಂತೆ ಮಾಡಿಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ.

# ಆದಿಯಲ್ಲಿನ ರಹಸ್ಯ

ಸೃಷ್ಠಿ ಮೊದಲ ಕಾಲದಲ್ಲಿ ಕೃತಯುಗದಲ್ಲಿ ಮಾನವರೆಲ್ಲರೂ ಒಂದೇ ಸಮಾಜವಾಗಿ ಇರುತ್ತಿದ್ದರು. ಆ ದಿನ ಮಾನವರಲ್ಲಿ ಯಾವ ಕುಲ, ಯಾವ ಮತವು ಇಲ್ಲ. ಕುಲ ಮತ ವ್ಯತ್ಯಾಸಗಳು ಇಲ್ಲದ ಮಾನವರೆಲ್ಲರೂ ಸಮಾನವಾಗಿ ಇದ್ದೂ, ತಮಗಿಂತ ಅತೀತವಾದ ದೈವವೊಂದಿಯೆಂದು ಆರಾಧಿಸುತ್ತಿದ್ದರು. ಎಲ್ಲರೂ ಬ್ರಹ್ಮವಿದ್ಯೆಯನ್ನು ತಿಳಿದಿರುತ್ತಿದ್ದರು. ಯೋಗಶಾಸ್ತ್ರವನ್ನು ತಪ್ಪದೆ ಎಲ್ಲರೂ ಆಚರಿಸುತ್ತಿದ್ದರು. ಹೀಗಿರುವ ಒಂದೇ ಸಂಘಭಾವವಿರುವ ಈಗಿನ ಮಾನವರಲ್ಲಿ ವಿವಾಹಗಳು ಮಾಡಿಕೊಳ್ಳುವುದಕ್ಕೋಸ್ಕರ, ಅಂದಿನ ಹಿರಿಯರು ವಾವಿ ವರಸೆಗಳಿಗೋಸ್ಕರ ಏರ್ಪಡಿಸಲ್ಪಟ್ಟ ಮನೆಹೆಸರು, ಗೋತ್ರ ಹೊರತು ಏನು ಇಲ್ಲ. ಆ ದಿನ ಏರ್ಪಡಿಸಿದ ಮನೆಹೆಸರು ಗೋತ್ರಗಳು ಇಂದಿಗೂ ಇವೆ. ಆ ದಿನ ನಾವು ಇಂತಹ ಮನೆಹೆಸರು ಇರುವವರೆಂಬ ಭಾವನೆ ಹೊರತು ನಮ್ಮದು ಇಂತಹ ಕುಲ, ಇಂತಹ ಮತ ಎನ್ನುವುದು ಮಾತ್ರ ಇಲ್ಲ.

ಹೀಗೆ ಕೆಲವು ನೂರಾರೂ ವರ್ಷಗಳು ಕಳೆದಾಗ, ಜ್ಞಾನ ಇರುವ ಸ್ಥಾನದಲ್ಲಿ ಅಜ್ಞಾನ ಸ್ಥಳ ಮಾಡಿಕೊಂಡಿದೆ. ಕೆಲವರು ಜ್ಞಾನಿಗಳಾಗಿ ಮತ್ತೆ ಕೆಲವರು ಅಜ್ಞಾನಿಗಳಾಗಿ ನಿಂತುಹೋಗಿದ್ದಾರೆ. ಈ ವಿಧವಾಗಿ ಜ್ಞಾನ, ಅಜ್ಞಾನವೆಂಬ ಎರಡು ಗುಂಪುಗಳು ಮೊಟ್ಟಮೊದಲನೆಯದಾಗಿ ಮನುಷ್ಯರಲ್ಲಿ ಏರ್ಪಟ್ಟಿವೆ. ಎರಡು ಭಾಗಗಳಾಗಿ ಏರ್ಪಟ್ಟಿರುವ ಮಾನವ ಜಾತಿಯಲ್ಲಿ ಜ್ಞಾನಿಗಳು ದೊಡ್ಡವರಾಗಿ, ಅಜ್ಞಾನಿಗಳು ಕಡಿಮೆಯವರಾಗಿ ಪರಿಗಣಿಸಲ್ಪಡುತ್ತಿದ್ದರು. ಬ್ರಹ್ಮಜ್ಞಾನ ತಿಳಿದವರೆಲ್ಲರು ಬ್ರಾಹ್ಮಣರಾಗಿ ಹೆಸರುವಾಸಿಯಾದರು. ಹೀಗೆ ಮೊಟ್ಟಮೊದಲು ಒಂದು ಕುಲದ ಹೆಸರು ಬಂದಿದೆ. ಅಂದಿನ ಬ್ರಹ್ಮಜ್ಞಾನಿಗಳು ಅಂದರೆ ಬ್ರಾಹ್ಮಣರು ಉಳಿದ ಅಜ್ಞಾನ ಗುಂಪಿನವರನ್ನು ಕುರಿತು ನಮಗಿಂತ ಕೆಳಗಿರುವವರೆಂದು (ಮಾದಿಗುವು ಇರುವವರೆಂದು), ಅವರಿಗಿಂತ ಉನ್ನತ ಜಾತಿಯವರು ನಾವೆಂದು ಹೇಳುತ್ತಿದ್ದರು. ಈ ವಿಧವಾಗಿ ಮೊದಲ ಭಾಗವಾದ ಬ್ರಾಹ್ಮಣರೆಲ್ಲರು ಎರಡನೆ ಭಾಗವಾದ ಅಜ್ಞಾನಿಗಳನ್ನು ಮಾದಿಗುವರೆಂದು (ಕೆಳಗಿನವರೆಂದು) ಹೇಳುತ್ತಾ, ಅಜ್ಞಾನಿಗಳನ್ನು ಬೇರೆ ಕುಲವಾಗಿ ಪರಿಗಣಿಸಿದರು.

ತಮಗಿಂತ ಕೆಳಗಿನ ಜಾತಿ ಅನ್ನುವ ಉದ್ದೇಶದಿಂದ ಮಾದಿಗುವವರೆಂದು (ಕೆಳಗಿನವರೆಂದು) ಕರೆಯುತ್ತಿದ್ದರು. ಕಾಲಕ್ರಮವಾಗಿ **'ಮಾದಿಗುವ' ಎನ್ನುವ ಪದವು 'ಮಾದಿಗ'** ಎನ್ನುತ್ತಾ ಹೇಳಲಾಗುತ್ತದೆ. ಈ ವಿಧವಾಗಿ ಪೂರ್ವದಲ್ಲಿ ಬ್ರಹ್ಮಜ್ಞಾನ ತಿಳಿದವರು ಬ್ರಾಹ್ಮಣರೆಂದು, ಅವರು ವಿನಹ ಜ್ಞಾನ ತಿಳಿಯದವರೆಲ್ಲರು **'ಮಾದಿಗ'** ರೆಂದು ಎರಡೇ ಎರಡು ಗುಂಪುಗಳು ಇದ್ದವು.

ಕೃತಯುಗದ ಮೊದಲ ಕಾಲದಲ್ಲಿ ಆದರೆ ಬ್ರಾಹ್ಮಣರು ಅವರಿಗಿಂತ ಕೆಳಗಿನವರು ಎನ್ನುವ ಎರಡು ಜಾತಿಗಳು ಇಲ್ಲ. ಎಲ್ಲರೂ ಜ್ಞಾನಿಗಳಾಗಿಯೇ ಇರುವವರೆಂದುಕೊಂಡಿದ್ದೇವೆ. ಆ ಕಾಲವನ್ನು ಕುಲ, ಮತರಹಿತ ಕಾಲವೆನ್ನ ಬಹುದು. ಮತವೆಂಬ ಪ್ರಸಕ್ತಿಯೆ ಇಲ್ಲದ ಆ ಕಾಲದಲ್ಲಿ, ಕುಲ ಅನ್ನುವ ಮಾತಿಲ್ಲದ ಆ ಕಾಲದಲ್ಲಿ, ಒಬ್ಬರಿಗೊಬ್ಬರು ವಿವಾಹಗಳು ಮಾಡಿಕೊಳ್ಳುವುದ ಕ್ಕೋಸ್ಕರ ವಾವಿ ವರಸೆಗಳು ಮಾತ್ರ ಹಿರಿಯರಿಂದ ಏರ್ಪಡಿಸಲ್ಪಟ್ಟಿದ್ದವು. ಆದಿನ ಒಂದೇ ಗುಂಪಾಗಿರುವ ಮನುಷ್ಯರಲ್ಲಿ ವಿವಾಹಗಳಿಗೋಸ್ಕರ 108 ಮನೆ ಹೆಸರುಗಳು, 108 ಗೋತ್ರಗಳ ಹೆಸರುಗಳನ್ನು ನಿಯಮಿಸಿ, ಅವುಗಳ ಮೂಲಕ 54 ಮನೆ ಹೆಸರುಗಳಿರುವವರು ಒಂದು ವಿಧದ ಗುಂಪೆಂದು, ಅವರೆಲ್ಲರೂ ಅಣ್ಣತಮ್ಮಂದಿರ ವರಸೆ ಆಗುತ್ತಾರೆಂದು ತಿಳಿಸಿದ್ದಾರೆ. ಮತ್ತೊಂದು 54 ಮನೆ ಹೆಸರು ಇರುವವರೆಲ್ಲರು ಮತ್ತೊಂದು ವಿಧವೆಂದು, ಅವರು ಸಹಾ ಅಣ್ಣತಮ್ಮಂದಿರ ವರಸೆ ಹೊಂದಿದ್ದಾರೆಂದು ತಿಳಿಸಿದ್ದರು. ಈ ವಿಧವಾಗಿ ಎರಡು ಗುಂಪುಗಳಾಗಿ ಮನೆ ಹೆಸರುಗಳನ್ನನುಸರಿಸಿ ನಿಯಮಿಸಿ ಒಂದು ಗುಂಪಿನವರು ಎರಡನೇ ಗುಂಪಿನಜೊತೆ, ಎರಡನೇ ಗುಂಪಿನವರು ಮೊದಲ ಗುಂಪಿನ ಜೊತೆ ವಿವಾಹ ಸಂಬಂಧಗಳು ಏರ್ಪಡಿಸಿಕೊಳ್ಳಬಹುದೆಂದು ತಿಳಿಸಿದ್ದರು. ಯಾವಾ ಗಾದರೂ ಮನುಷ್ಯ ಮನೆ ಹೆಸರನ್ನು ಮರೆತುಹೋದರೆ ಗೋತ್ರದ ಹೆಸರಾದರೂ ಜ್ಞಾಪಕ ಇರುತ್ತದೆಂದು, ಗೋತ್ರವನ್ನನುಸರಿಸಿ ಮನೆಹೆಸರು ತಿಳಿದುಕೊಳ್ಳ ಬಹುದೆಂದು, ಪ್ರತಿ ಮನೆಹೆಸರಿಗು ಒಂದು ಗೋತ್ರದ ಹೆಸರು ಅಂಟಿಸಿರುತ್ತಿದ್ದರು. ಹಾಗೆಯೇ ಗೋತ್ರವನ್ನು ಮರೆತುಹೋದರೂ ಮನೆಹೆಸರಿನಿಂದ ತಿಳಿದುಕೊಳ್ಳ

ಬಹುದೆಂದು, ಗೋತ್ರಕ್ಕೆ ಮನೆಹೆಸರು ಅಂಟಿಸಿದ್ದಾರೆಂದಾದರೂ ಅಂದುಕೊಳ್ಳ ಬಹುದು. ಸಮಾಜದಲ್ಲಿ ಹೊರಗೆ ಹೇಳಿಕೊಳ್ಳುವುದಕ್ಕೆ ಮನೆ ಹೆಸರನ್ನು, ಮದುವೆಯಲ್ಲಿ ದೇವರ ಆರಾಧನೆಯಲ್ಲಿ ದೇವರಿಗೆ ಹೇಳಿಕೊಳ್ಳುವುದಕ್ಕೆ ಗೋತ್ರ ವನ್ನು ಉಪಯೋಗಿಸುತ್ತಿದ್ದರು. ಎಷ್ಟು ಯುಗಗಳು ಬದಲಾದರೂ ಇಂದಿಗೂ ಆ ಪದ್ಧತಿ ಹಾಗೆಯೇ ಇದೆಯೆಂದು ಹೇಳಬಹುದು. ದೈವಪೂಜೆಗಳಲ್ಲಿ ಗೋತ್ರ ವನ್ನೂ, ಸಮಾಜ ವ್ಯವಹಾರಗಳಲ್ಲಿ ಮನೆ ಹೆಸರನ್ನೂ ಇಂದಿಗೂ ಹೇಳುತ್ತಿದ್ದಾರೆ. ಆದರೂ ಮೊದಲು ಇಟ್ಟಿರುವ 108 ಮನೆ ಹೆಸರಗಳು ಮಾತ್ರವೆ ಅಲ್ಲದೆ, ಪೂರ್ವದಲ್ಲಿ ವಾಸಿಸಿದ ಊರನ್ನು ಬಿಟ್ಟು ಮತ್ತೊಂದು ಊರಿನೊಳಗೆ ಬಂದು ಸ್ಥಿರವಾದಾಗ, ಇಂತಹ ಊರಿನವರೆಂದು ಹೇಳುತ್ತಾ ಸ್ವಲ್ಪ ಕಾಲಕ್ಕೆ ಆ ಹೆಸರನ್ನೇ ಮನೆ ಹೆಸರಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಉದಾಹರಣೆಗೆ ಚಲ್ಲಾ ಎಂಬ ಮನೆಹೆಸರು ಇರುವವರು ಮಾಲಪಾಡು ಎಂಬ ಊರಿನಲ್ಲಿ ನಿವಾಸ ವಿರುತ್ತಾ, ಸ್ವಲ್ಪಕಾಲಕ್ಕೆ ಆ ಊರು ಬಿಟ್ಟು ಮತ್ತೊಂದು ಊರಿನಲ್ಲಿ ನಿವಾಸ ಏರ್ಪಡಿಸುತ್ತಿದ್ದಾರೆಂದುಕೊಳ್ಳೋಣ, ಆಗ ಅವರು ಇಂತಹವರೆಂದು ಗುರುತಿ ಗೋಸ್ಕರ ಮಾಲಪಾಟಿನವರೆಂದು ಊರ ಹೆಸರನ್ನು ಹೇಳಿಕೊಳ್ಳುತ್ತಿದ್ದರು. ಸ್ವಲ್ಪಕಾಲಕ್ಕೆ ಮನೆಯಲ್ಲಿನ ಹಿರಿಯರು ಮರಣಿಸಿದಾಗ ಮಕ್ಕಳಿಗೆ ಅಸಲಾದ ಮನೆಹೆಸರು ತಿಳಿಯದೆ ಹೋಗುವುದರಿಂದ, ಮಾಲಪಾಟಿ ಅನ್ನುವುದೇ ಮನೆ ಹೆಸರಂದುಕೊಳ್ಳುವುದರಿಂದ, ಅಂದಿನಿಂದ ಅವರ ಮನೆಹೆಸರನ್ನು ಮಾಲಪಾಟಿ ನವರೆಂದೇ ಹೇಳುತ್ತಿದ್ದರು. ಈ ವಿಧವಾಗಿ ಎಷ್ಟೋ ಮನೆ ಹೆಸರುಗಳನ್ನು ಬದಲಿಸಿಕೊಂಡವರು ಇದ್ದಾರೆ. ಇದರಿಂದ ಮನೆ ಹೆಸರುಗಳ ಸಂಖ್ಯೆ 108 ಬದಲಾಗಿಹೋಗಿದೆ. ಈ ವಿಧವಾಗಿ ನಿತ್ಯ ವ್ಯವಹಾರದಲ್ಲಿರುವ ಮನೆಹೆಸರು ಮರೆತುಹೋದವರು ಯಾವಾಗಲೂ ವ್ಯವಹಾರದಲ್ಲಿ ಇಲ್ಲದ ಗೋತ್ರವನ್ನು ಮರೆತುಹೋಗದಂತಿರುತ್ತಾರ? ಇದರಿಂದ ಮನೆಹೆಸರು, ಗೋತ್ರದ ಹೆಸರು ಬದಲಾದವರೂ ಸಹ ಬಹಳಜನ ಇದ್ದಾರೆಂದು ತಿಳಿಯುತ್ತಿದೆ. ವಾಸ್ತವ ಹೇಳಿದರೆ ನನ್ನ ಮನೆಹೆಸರು ನನಗೆ ತಿಳಿದರೂ ಗೋತ್ರದ ಹೆಸರು ಮಾತ್ರ ತಿಳಿದಿಲ್ಲ. ಅವಶ್ಯಕ್ಕೆ ಯಾವುದೋ ಒಂದು ಹೇಳಬೇಕಾಗಿ ಬರುತ್ತಿದೆ. ನನ್ನಂಥವರು ಎಷ್ಟುಜನರಿದ್ದಾರೋ.

ಕೃತಯುಗದಲ್ಲಿಯೇ ಸ್ವಲ್ಪಕಾಲ ಕಳೆದಾಗ ಎಲ್ಲರೂ ಜ್ಞಾನಿಗಳಾದರೂ, ಆ ಸಮಯದಲ್ಲಿ ಅವರಿಂದ ಜ್ಞಾನಿಗಳು 95% ರಷ್ಟಕ್ಕೆ ಇಳಿದುಹೋಗಿದ್ದಾರೆ. 5% ರಷ್ಟು ಅಜ್ಞಾನಿಗಳು ಏರ್ಪಟ್ಟಿದ್ದಾರೆ. ಆಗ ಜ್ಞಾನಿಗಳು, ಅಜ್ಞಾನಿಗಳೆಂಬ ಎರಡು ವರ್ಗಗಳು ಏರ್ಪಟ್ಟಿವೆ. ಎರಡು ವರ್ಗಗಳಲ್ಲಿ ಜ್ಞಾನ ತಿಳಿದವರು ಜ್ಞಾನ ತಿಳಿಯದವರಿಗಿಂತ ದೊಡ್ಡವರೆಂದು, ತಿಳಿಯದವರಿಗೆ ಕೆಳಗೆ ಆಸನಗಳು, ತಿಳಿದವರಿಗೆ ಉನ್ನತ ಆಸನಗಳು ಏರ್ಪಾಟು ಮಾಡಿದರು. ಆಗಿನಿಂದ ಯಾವ ಸಭೆಯಲ್ಲಿಯಾದರೂ ಅಜ್ಞಾನಿಗಳು ಕೆಳಗೆ ಕುಳಿತುಕೊಂಡಾಗ ಜ್ಞಾನಿಗಳು ಮೇಲೆ ಕುಳಿತುಕೊಳ್ಳುತ್ತಿದ್ದರು. ಆಗಿನಿಂದ ಉಚ್ಚ ನೀಚ ಅನ್ನುವ ವರ್ಗಭೇದಗಳು ಏರ್ಪಟ್ಟಿವೆ. ಜ್ಞಾನಿಗಳೆಲ್ಲರನ್ನು ಮೇಲಿನವರೆಂದು ಅಜ್ಞಾನಿಗಳೆಲ್ಲರನ್ನು ಕೆಳಗಿನವರೆಂದು (ದಿಗುವಿನವರೆಂದು) ಅನ್ನುತ್ತಿದ್ದರು. ಈಗಿನ ಕಾಲದಲ್ಲಿ ಸಹಾ ಜ್ಞಾನ ತಿಳಿದ ಸ್ವಾಮೀಜಿಗೆ ಮೇಲಿನ ಸ್ಥಾನದಲ್ಲಿ ಆಸನ ಏರ್ಪಾಡುಮಾಡಿ, ಜ್ಞಾನ ತಿಳಿಯದವರೆಲ್ಲರೂ ಕೆಳಗೆ ಕುಳಿತುಕೊಳ್ಳುವುದು ನಡೆಯುತ್ತಿದೆ. ಹಾಗೆ ತಿಳಿದ ಗುರುಗಳನ್ನಾಗಲಿ, ಸ್ವಾಮಿಗಳನ್ನಾಗಲಿ ಮೇಲೆ ಕೂರಿಸಿ ಉಳಿದವರು ಕೆಳಗೆ ಕುಳಿತುಕೊಳ್ಳುವುದು ಗೌರವಪ್ರದವಾದ ನಮ್ಮ ಸಂಪ್ರದಾಯವೆನ್ನುತ್ತಿದ್ದರು. ಹಾಗೆ ಮೇಲೆ ಕುಳಿತುಕೊಂಡವರು ಕೆಳಗೆ ಕುಳಿತುಕೊಂಡವರನ್ನು ನಮ್ಮ ಕೆಳಗಿನ (ದಿಗುವಿನ) ವರೆಂದು ಅನ್ನುವುದು ಇಂದಿಗೂ ಇದೆ. ಒಂದು ಉಪನ್ಯಾಸ ವೇದಿಕೆಮೇಲೆ ಒಬ್ಬ ಸ್ವಾಮೀಜಿ ಕುಳಿತುಕೊಂಡಿರುವಾಗ, ಒಬ್ಬ ವ್ಯಕ್ತಿ ಸ್ವಾಮೀಜಿ ಹತ್ತಿರಕ್ಕೆ ಹೋಗಿ ಸ್ವಾಮೀಜಿ ನೀವು ಈ ಹೊತ್ತು ಯಾರ ಮನೆಯಲ್ಲಿ ಊಟ ಮಾಡುತ್ತೀರಾ ಅಂದನು. ಅದಕ್ಕೆ ಸ್ವಾಮೀಜಿ "ಆ ವಿಷಯವನ್ನು ನಮ್ಮ ದಿಗುವಿನವರನ್ನು ಕೇಳು ತಿಳಿಯುತ್ತದೆ" ಅಂದನು. ಹೀಗೆ ಮೇಲಿನವರು, ಕೆಳಗಿನವರು (ದಿಗುವಿನವರು) ಅನ್ನುವ ಮಾತುಗಳು ಕೃತಯುಗದಲ್ಲಿಯೇ ಪ್ರಾರಂಭವಾಗಿವೆ. ಆಗಿನಿಂದ ಮಾಯ ಪ್ರಭಾವ ಬೆಳೆಯುತ್ತಾ, ಅದರ ಪ್ರಕಾರವೇ ಅಜ್ಞಾನಿಗಳ ಸಂಖ್ಯೆ ಸಹ ಹೆಚ್ಚಾಗುತ್ತಾ, ಕೃತಯುಗದಲ್ಲಿಯೇ ಅಜ್ಞಾನಿಗಳ ಸಂಖ್ಯೆ 90 ರಷ್ಟು ಬೆಳೆದು, ಜ್ಞಾನಿಗಳ ಸಂಖ್ಯೆ ಕೇವಲ ಶೇಕಡ ಹತ್ತರಷ್ಟಕ್ಕೆ ಬಿದ್ದುಹೋಗಿದೆ. ಆಗ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರು "ನಮ್ಮ ಸಂಖ್ಯೆ

ಸ್ಥಗಿತವಾಗಿದೆ, ನಮ್ಮ ಕೆಳಗಿನವರ (ದಿಗುವಿನವರ) ಸಂಖ್ಯೆ ಬೆಳೆದುಹೋಗಿದೆ" ಎಂದು ಅನ್ನುತ್ತಿದ್ದರು. ಆದಿನ ಬ್ರಾಹ್ಮಣರು ಇಟ್ಟಿದ ನಮ್ಮ ಕೆಳಗಿನವರೆಂಬ (ಮಾದಿಗರೆಂಬ) ಮಾತು ಇಂದಿಗೂ ಒಂದು ಕುಲದ ಹೆಸರಿನಿಂದ ಇರುವ ವಿಷಯ ಎಲ್ಲರಿಗೂ ತಿಳಿದ ವಿಷಯವೇ.

ನೂರಕ್ಕೆ 90 ಜನರು ಇರುವ ಅಜ್ಞಾನವರ್ಗ ಮತ್ತೊಂದು ಶೇಕಡ ಐದರಷ್ಟು ಬೆಳೆದು ಕೃತಯುಗದಲ್ಲಿಯೇ ಶೇ.95 ರಷ್ಟಾಗಿದೆ. ಆ ಸಮಯದಲ್ಲಿ ಅಜ್ಞಾನ ವರ್ಗದವರು ಬ್ರಾಹ್ಮಣರು ಇಟ್ಟಿರುವ ನಮ್ಮ ಕೆಳಗಿನವರೆಂಬ (ಮಾದಿಗರೆಂಬ) ಹೆಸರು ನೀಚವಾದುದೆಂದು ತಿಳಿದು, ಆ ಹೆಸರನ್ನು ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ತಿಳುವಳಿಕೆಯನ್ನು ಉಪಯೋಗಿಸಿ **"ಮಾಡುವ ಕೆಲಸಗಳನ್ನನುಸರಿಸಿ ಕುಲ"** ಅನ್ನುವ ಮಾತನ್ನು ಹೊರಗೆ ತಂದಿದ್ದಾರೆ. ಪ್ರತ್ಯೇಕವಾದ ಕೆಲಸಗಳು ಮಾಡುವವರು ಅವರ ಕೆಲಸವನ್ನನುಸರಿಸಿ ಪ್ರತ್ಯೇಕವಾದ ಕುಲ ಏರ್ಪಡಿಸಿಕೊಂಡಿದ್ದಾರೆ. ಉದಾಹರಣೆಗೆ ಬಟ್ಟೆಹೊಗೆಯುವವರು ಅಗಸನೆಂದು, ಬಟ್ಟೆಗಳನ್ನು ನೇಯುವವನನ್ನು ಸಾಲೆಯವನೆಂದು, ನೇಕಾರನೆಂದು, ಗ್ರಾಮ ಪರಿಪಾಲಕನನ್ನು ರೆಡ್ಡಿಯೆಂದು, ಭೂಮಿಯನ್ನು ಗುತ್ತಿಗೆ ಮಾಡುವವರನ್ನು ಚೌದರಿಯೆಂದು (ಒಕ್ಕಲಿಗ), ಹಸುಗಳು, ಕುರಿ ಕಾಯುವವನನ್ನು ಗೊಲ್ಲರೆಂದು, ಹೊಲಗಳಿಗೆ ಕಾವಲಾಗಿರುವವರನ್ನು ನಾಯಕ (ವಾಲ್ಮೀಕ) ರೆಂದು, ನಾಟಕ ಗಳಾಡುವವನನ್ನು ಭೋಗದವನೆಂದು, ಸರ್ಕಸ್ ಆಟ ಆಡುವವನನ್ನು ಬಿದಾಸರೆಂದು, ವ್ಯಾಪಾರ ಮಾಡುವವರನ್ನು ಶೆಟ್ಟಿಯೆಂದು, ರಾಜ್ಯ ಆಳುವವನನ್ನು ಕ್ಷತ್ರಿಯನೆಂದು, ಮಾಂಸ ಮಾರುವವನನ್ನು ಕಟುಕನೆಂದು ಹೀಗೆ ಎಷ್ಟೋ ಕುಲಗಳು ತಯಾರಾಗಿವೆ. ಎಲ್ಲಾ ಕುಲಗಳು ನಮ್ಮ ಕೆಳಗಿನವ (ಮಾದಿಗ) ಅನ್ನುವ ವರ್ಗದಿಂದ ಹುಟ್ಟಿರುವವೆ. ಅಂದರೆ ಎಲ್ಲಾ ಕುಲಗಳಿಗೆ ತವರುಮನೆ ಪೂರ್ವದಲ್ಲಿ ಮಾದಿಗುವ ಎಂದು ಬ್ರಾಹ್ಮಣರಿಂದ ಹೆಸರು ಇಡಲಾದ ವರ್ಗವೇ ಎಂದು ತಿಳಿಯಬೇಕು. ಆ ವಿಧವಾಗಿ ನಮ್ಮ ಕೆಳಗಿನವ (ಮಾದಿಗ) ಅನ್ನುವ ವರ್ಗದಿಂದ ಎಷ್ಟೋ ಕುಲಗಳು ಸೀಳಿಹೋಗಿ ಕೊನೆಗೆ ಯಾವ ಕುಲದ ಕೆಳಗೆ

ಹೋಗದಂತೆ ಕೆಲವರು ಆ ವರ್ಗದಲ್ಲಿಯೇ ಉಳಿದಿದ್ದಾರೆ. ಅವರು ಈಗಲೂ ಮಾದಿಗುವಿನವರೆಂದು ಕರೆಯಲ್ಪಡುತ್ತಿದ್ದಾರೆ. ವಾಸ್ತವಕ್ಕೆ "ಮಾ ದಿಗ" ಎನ್ನುವುದು ಎಲ್ಲಾ ಕುಲಗಳಂತೆ ಇದು ಒಂದು ಕುಲವಾ? ಎಂದು ಯೋಚಿಸಿದರೆ ಎಲ್ಲರಿಗೂ ತವರುಮನೆಯಾದ ಅದನ್ನು ಒಂದು ಕುಲವಾಗಿ ಲೆಕ್ಕಿಸುವುದು ತಪ್ಪೇ. ಅಷ್ಟೇ ಅಲ್ಲದೆ ಅದು ನೀಚ ಕುಲವೆಂಬುದು ಮತ್ತಷ್ಟು ತಪ್ಪು. ಇಲ್ಲಿಯೊಂದು ಪ್ರಶ್ನೆಬರಬಹುದು. ನೀವೆ ಹೇಳಿದ್ದೀರಲ್ಲ ಕೆಳಗಿನವ (ಮಾದಿಗ) ರೆಂದು, ಮಾದಿಗ ಎಂದರೂ ನೀಚವೆಂದರೂ ಎರಡು ಒಂದೇ ಅರ್ಥ ತಾನೆ! ಅಂತಹದರಲ್ಲಿ ನೀಚಕುಲವೆಂದರೆ ತಪ್ಪೇನು? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಪೂರ್ವದಲ್ಲಿ ಬ್ರಹ್ಮಜ್ಞಾನಿಗಳು ಇರುತ್ತಿದ್ದರು, ಆದ್ದರಿಂದ ಅವರು ಅಜ್ಞಾನಿಗಳನ್ನು ದಿಗುವಿನವರೆಂದು ಅನ್ನುತ್ತಿದ್ದರು. ಈಗಿನಕಾಲದಲ್ಲಿ ಬ್ರಹ್ಮಜ್ಞಾನ ತಿಳಿದವರೇ ಇಲ್ಲದಿರುವಾಗ ಎಲ್ಲರೂ ಕೆಳಗಿನವರೇ(ದಿಗುವಿನವರೇ)(ಮಾದಿಗರೇ) ಎಂದು ಗುರುತಿಸಿಕೊಳ್ಳಬೇಕು. ದ್ವಾಪರಯುಗದ ಅಂತಿಮ ಕಾಲಕ್ಕೆ ನೂರಕ್ಕೆ ನೂರರಷ್ಟು ಅಜ್ಞಾನಿಗಳು ತಯಾರಾಗಿದ್ದಾರೆ. ಅದನ್ನು ಗ್ರಹಿಸಿದ ಪರಮಾತ್ಮ ಭೂಮಿಮೇಲೆ ಜ್ಞಾನಬೀಜವನ್ನು ಬಿತ್ತುವುದಕ್ಕೆ ದ್ವಾಪರಯುಗದಲ್ಲಿಯೇ ಕೃಷ್ಣನಾಗಿ ಬಂದು ಭಗವದ್ಗೀತೆಯನ್ನು ಹೇಳಿಹೋಗಿದ್ದಾನೆ. ಅದು ಇಲ್ಲಿಯವರೆಗು ಅರ್ಥವಾಗಲಿಲ್ಲ. ಗೀತೆಯನ್ನು ಪ್ರಮಾಣ ಗ್ರಂಥವಾಗಿ ಮನುಷ್ಯರು ಒಪ್ಪಿಕೊಳ್ಳುತ್ತಿಲ್ಲ. ನಮಗೆ ವೇದಗಳೇ ಮುಖ್ಯವೆನ್ನುತ್ತಿದ್ದಾರೆ. ಅಲ್ಲಿಗೂ ಪ್ರಯೋಜವಿಲ್ಲವೆಂದುಕೊಂಡ ದೇವರು ಕಲಿಯುಗದಲ್ಲಿಯೇ ಮತ್ತೊಂದು ಸಲ ಹುಟ್ಟಿ ಗೀತೆಯಲ್ಲಿನ ಸಾರಾಂಶವನ್ನೇ ಬೋಧಿಸಿದ್ದಾನೆ. ಅದನ್ನು ಸಹ ಪ್ರಜೆಗಳು ಅರ್ಥ ಮಾಡಿಕೊಳ್ಳ ಲಾರರೆಂದು ಮತ್ತೊಂದುಸಲ ನಾನೇ ಬಂದು ಕೆಲವು ವರ್ಷಗಳು ವಿವರಿಸಿ ಹೇಳಿದರೇನೆ ಅರ್ಥವಾಗುತ್ತದೆಂದು ದೇವರೇ ಮತ್ತೊಂದುಸಲ ಬರುತ್ತೇ ನೆಂದಿದ್ದಾನೆ. ಆ ಬೋಧನಾ ಕರ್ತನಾದ ದೇವರು ಯಾವಾಗ ಬರುತ್ತಾನೋ ನಮಗೆ ತಿಳಿಯದು. ಆದರೆ ನಾವೆಲ್ಲರೂ ಅಜ್ಞಾನದಶೆಯಲ್ಲಿಯೇ ಇದ್ದೇವೆಂದು ತಿಳಿಯುತ್ತಿದೆ. ಜ್ಞಾನ ತಿಳಿಯದ ನಾವು ಈ ದಿನ ಯಾವ ಕುಲದಲ್ಲಿ ಇದ್ದರೂ ಕೃತಯುಗದಲ್ಲಿನ ಬ್ರಹ್ಮಜ್ಞಾನಿಗಳು ಹೇಳಿದಂತೆ ದಿಗುವಿನವರೇ (ಮಾದಿಗರೆ).

ಈ ದಿನ ಕಲಿಯುಗದಲ್ಲಿ ನೋಡಿದರೆ ಮಾದಿಗುವವರ್ಗ (ನಮ್ಮ ಕೆಳಗಿನವರ್ಗ ದಿಂದ) ಎಷ್ಟೋ ಜನ ಎಷ್ಟೋ ಕುಲಗಳಾಗಿ ಕೃತಯುಗದಿಂದ ಸೀಳಿಹೋಗುತ್ತಾ ಬಂದು, ಇಂದಿಗೆ ಸ್ವಲ್ಪ ಮಾದಿಗವರ್ಗವು ಉಳಿದಿದೆ. ನಾವು ಅಲ್ಲಿಂದ ಬಂದಿರುವವರೇ ಆದುದರಿಂದ ಮಾ ದಿಗುವವರ್ಗವನ್ನು ಒಂದು ಕಡಿಮೆಕುಲ ವಾಗಿ ವರ್ಣಿಸಬಾರದು. ಈ ದಿನ ಯಾರು ಯಾವ ಕುಲದ ಹೆಸರಿನಿಂದಿದ್ದರೂ, ಜ್ಞಾನ ಇಲ್ಲದಿರುವಾಗ ನಾವು ಸಹಾ ದಿಗುವಿನವರೇ (ಮಾದಿಗರೇ) ಎಂದು ಜ್ಞಾಪಕಮಾಡಿಕೊಂಡು, ಈಗಿನಿಂದ ಬ್ರಹ್ಮಜ್ಞಾನಕ್ಕೆ ಆಧಾರವಾದ ಭಗವದ್ಗೀತೆಯನ್ನು ಓದಿ ತಿಳಿದುಕೊಂಡು ಎಗುವಿನವರಾಗಿ (ಮೇಲಿನವರಾಗಿ) ಬದಲಾಗುವುದಕ್ಕೆ ಪ್ರಯತ್ನಿಸೋಣ. ನಿಮಗೆ ಹೇಳುವುದೇ ಅಲ್ಲ ಬ್ರಹ್ಮಜ್ಞಾನ ಪೂರ್ತಿಯಾಗಿ ತಿಳಿಯದವರೆಗೂ ನಾನು ಸಹ ಕೆಳಗಿನವನೇ. ನಾನು ಸಹ ಮೇಲಿನವನು ಆಗಬೇಕೆಂದು ಪ್ರಯತ್ನಿಸುತ್ತಿದ್ದೇನೆ. ಇದೆಲ್ಲವೂ ಆದಿಯಿಂದ ಬಂದಿರುವ ತತಂಗ. ಈ ತತಂಗ ಯಾರಿಗೂ ತಿಳಿದಿಲ್ಲ ಆದ್ದರಿಂದ ಇದನ್ನು ಆದಿಯಲ್ಲಿನ ರಹಸ್ಯ ವೆನ್ನುತ್ತಿದ್ದೇವೆ.

ಮೊದಲಿರುವ ಒಂದು ಗುಂಪಿನಿಂದಲೇ ಈಗಿರುವ ಕುಲಗಳೆಲ್ಲವೂ ಬಂದಿವೆಯೆಂದು ಹೇಳುವುದಕ್ಕೆ ಒಂದು ದೊಡ್ಡ ಆಧಾರವಿದೆ. ಅದು ಏನೆಂದರೆ! ಮೊದಲಿರುವ ಒಂದೇ ಮನೆಹೆಸರಿನಿಂದ ಎಷ್ಟೋ ಕುಲಗಳು ಈ ದಿನ ಇವೆ. ಉದಾಹರಣೆಗೆ ಗುತ್ತಾ ಎನ್ನುವ ಮನೆ ಹೆಸರು ರೆಡ್ಡಿ ಕುಲದಲ್ಲಿದೆ. ಅದೇ ಗುತ್ತಾ ಎನ್ನುವ ಮನೆ ಹೆಸರು ಕಮ್ಮಕುಲದಲ್ಲಿಯೂ ಇದೆ. ಹಾಗೆ ಉಳಿದ ಕೆಲವು ಕುಲಗಳಲ್ಲಿ ಸಹ ಇದೆ. ಇದನ್ನನುಸರಿಸಿ ನೋಡಿದರೆ ಮೊದಲಿರುವ ಗುತ್ತಾ ಎನ್ನುವ ಮನೆಹೆಸರಿರುವ ಒಂದು ಗುಂಪಿನಿಂದಲೇ ಅದೇ ಹೆಸರಿನ ಮೇಲಿರುವ ಎಷ್ಟೋ ಕುಲಗಳು ಹುಟ್ಟಿವೆ ಎಂದು ತಿಳಿಯುತ್ತಿದೆ. ಈ ವಿಧವಾಗಿ ಅನೇಕ ಕುಲಗಳಾಗಿ ಸೀಳಿಹೋದ ಈ ಮನುಷ್ಯರೆಲ್ಲರೂ ಪೂರ್ವದಲ್ಲಿ ಒಂದೇ ಗುಂಪಾಗಿ ಇರುತ್ತಿದ್ದರೆಂದು, ಆ ದಿನ ಕುಲಗಳೇ ಇಲ್ಲವೆಂದು ತಿಳಿಯುತ್ತಿದೆ.

# ನಿನ್ನ ಸಂಸಾರ

ಸಂಸಾರ ಎಂದರೆ ತಿಳಿಯದವರ್‍ಯಾರು ಇರುವುದಿಲ್ಲ. ಹೆಂಡತಿ ಮಕ್ಕಳಜೊತೆ ಬೆರೆತು ಜೀವಿಸುವುದು ಸಂಸಾರವೆಂದು ಎಲ್ಲರೂ ಅನ್ನುತ್ತಿರುವಾಗ ಕೇಳಿದ್ದೇವೆ. ಕೆಲವರು ಸಂಸಾರ ಸಮುದ್ರದಂತಹದೆಂದು ತಿಳಿಯುವಂತೆ ಸಂಸಾರ ಸಾಗರವೆಂದು ಅನ್ನುತ್ತಿರುತ್ತಾರೆ. ಸಮುದ್ರಕ್ಕಿಂತ ಸಂಸಾರವೇ ದೊಡ್ಡದೆನ್ನುವಂತೆ ಸಮುದ್ರವನ್ನಾದರೂ ಈಜಬಹುದು, ಸಂಸಾರವನ್ನು ಈಜಲಾರೆವೆಂದು ಅನ್ನುತ್ತಿರುತ್ತಾರೆ. ಕೆಲವರು ಆಧ್ಯಾತ್ಮಿಕವನ್ನು ಬೋಧಿಸುವ ಬೋಧಕರು ಸಂಸಾರವನ್ನು ಮೋಕ್ಷ ಬಂಧಕವೆಂದು, ಮೋಕ್ಷಸಾಧನೆಯಲ್ಲಿ ಸಂಸಾರ ಬಹಳ ಆತಂಕವಾದುದೆಂದು ಹೇಳುತ್ತಿರುತ್ತಾರೆ. ದೈವಜ್ಞಾನವನ್ನು ತಿಳಿದುಕೊಂಡು ಮೋಕ್ಷವನ್ನು ಪಡೆಯುವುದಕ್ಕೆ ಗೌತಮಬುದ್ಧನು ಯುಕ್ತವಯಸ್ಸಿರುವ ಹೆಂಡತಿಯನ್ನು, ಒಂದು ವರ್ಷದೊಳಗೆ ವಯಸ್ಸಿರುವ ಮಗನನ್ನು ಬಿಟ್ಟು ಅರಣ್ಯಕ್ಕೆ ಹೋಗಿದ್ದಾನೆ. ಈ ವಿಧವಾಗಿ ಎಷ್ಟೋಜನ ಎಷ್ಟೋ ವಿಧಗಳಲ್ಲಿ ಸಂಸಾರವನ್ನು ಕುರಿತು ಹೇಳುತ್ತಾ ಅದೇನೋ ದೊಡ್ಡ ಪೀಡೆ ಆದಂತೆ ವರ್ಣಿಸಿದ್ದಾರೆ. ಇನ್ನೂ ಕೆಲವರು ನಾನು ತಿಳಿಯದಿರುವಾಗ ಮದುವೆ ಮಾಡಿಕೊಂಡಿದ್ದೇನೆ, ಈಗಲಾದರೆ ಮಾಡಿಕೊಳ್ಳುವವನು ಅಲ್ಲವೆಂದು ಹೇಳುತ್ತಿರುತ್ತಾರೆ. ಇದೆಲ್ಲವೂ ನೋಡಿದ ನಂತರ ಸಂಸಾರ ಎಂದರೆ ಏನೆಂದು, ಅದರಮೇಲೆ ಬಹಳಜನ ಕೆಟ್ಟ ಉದ್ದೇಶವನ್ನು ಏಕೆ ಹೊಂದಿದ್ದಾರೆಂದು ಆಲೋಚಿಸದೆ ತಪ್ಪುವುದಿಲ್ಲ. ಸ್ವಲ್ಪ ಯೋಚಿಸಿದರೆ ಹಿಂದೂ (ಇಂದೂ) ಮತಕ್ಕೆ ತಲೆಮಾಣಿಕ್ಯವಾದಂತಹ ಭಗವದ್ಗೀತೆಯನ್ನು ಬೋಧಿಸಿದ ಕೃಷ್ಣನು ತನ್ನ ಗೀತೆಯಲ್ಲಿ ಎಲ್ಲಿಯೂ ಸಂಸಾರ ಕೆಟ್ಟದೆಂದು ಹೇಳಲಿಲ್ಲ. ಸಂಸಾರ ಕೆಟ್ಟದೆಂದು ಹೇಳದೆ ಹೋಗುವುದಲ್ಲದೆ, ಶ್ರೀಕೃಷ್ಣನೇ ಎಂಟುಜನ ಹೆಂಡತಿಯರನ್ನು ಮದುವೆಯಾಗಿ ದೊಡ್ಡ ಸಂಸಾರವನ್ನು ಇಟ್ಟುಕೊಂಡಿದ್ದಾನೆ. ಎಷ್ಟೋಜನರಿಗೆ ಕೆಟ್ಟದಾಗಿ ಕಾಣಿಸಿದರು ಸಂಸಾರವನ್ನು ಕುರಿತು ಶ್ರೀಕೃಷ್ಣನ ಉದ್ದೇಶ ಏನಿರುತ್ತದೋ ನಾವು ತಿಳಿದುಕೊಳ್ಳಬೇಕಾಗಿದೆ. ಮದುವೆ ಆಗದಿರುವವನನ್ನು ಬ್ರಹ್ಮಚಾರಿ ಎಂದು ಸಹ ಅನ್ನುತ್ತಿರುತ್ತಾರೆ. ಕೃಷ್ಣನು ಮದುವೆ ಮಾಡಿಕೊಂಡರೂ ಸಹ ಬ್ರಹ್ಮಚಾರಿ

ಎಂದು ಹೆಸರೇಗೆ ಹೊಂದಿದ್ದಾನೆ ತಿಳಿದುಕೊಳ್ಳಬೇಕಾಗಿದೆ. ಹೀಗೆ ಎಲ್ಲಾ ಯೋಚಿಸಿದರೆ ಈ ವಿಧವಾಗಿ ನಮಗೆ ತಿಳಿಯುತ್ತಿದೆ ಅದೇನೆಂದರೆ!

**"ಸಾರ"** ಎಂದರೆ ರುಚಿ ಎಂದು, **"ಸಂ"** ಎಂದರೆ ಒಳ್ಳೆಯದು ಎಂದೂ, ಸಂಸಾರ ಎಂದರೆ ಒಳ್ಳೆಯ ರುಚಿ ಇರುವುದೆಂದು ತಿಳಿಯುತ್ತಿದೆ. ಸಂಸಾರ ಅನ್ನುವ ಪದ ಸಾರವನ್ನು ಸೂಚಿಸುತ್ತಿರುವಾಗ ಎಲ್ಲರಿಗೂ ಕೆಟ್ಟಸಾರವಾಗಿ ಏಕೆ ಅರ್ಥವಾಗಿದೆಯೋ? ಯೋಚಿಸಿ ನೋಡಿದರೆ ಮನುಷ್ಯರು ಅರ್ಥಹೀನರೂ, ಆಲೋಚನಾರಹಿತರೂ ಅಗಿಹೋಗಿದ್ದಾರೆ. ತಮಗೆ ಇಷ್ಟವಾದವನು ಅಸತ್ಯವನ್ನು ಹೇಳಿದರೂ ಅದನ್ನು ಕುರುಡರಂತೆ ನಂಬುವುದು, ತಮಗೆ ಇಷ್ಟವಿಲ್ಲದವನು ಸತ್ಯವನ್ನು ಹೇಳಿದರೂ ನಂಬದಿರುವುದು ಅಭ್ಯಾಸವಾಗಿದೆ. ಹೇಳುವವನನ್ನನುಸರಿಸಿ ಸತ್ಯವಾದರೂ ಅಸತ್ಯವಾದರೂ ಪ್ರಚಾರವಾಗುತ್ತದೆ. ಜನರಿಗೆ ಇಷ್ಟವಾಗುವಂತೆ ಹೇಳಿದರೆ ಎಂತಹ ಅಸತ್ಯವಾದರು ಸುಲಭವಾಗಿ ಪ್ರಚಾರ ಆಗುತ್ತದೆ. ಜನರಿಗೆ ಇಷ್ಟವಾಗದ ವಿಧವಾಗಿ ಹೇಳಿದರೆ ಅದು ಎಷ್ಟು ಸತ್ಯವಾದರು ಪ್ರಚಾರ ಆಗುವುದಿಲ್ಲ. ಈ ಸೂತ್ರವನ್ನು ತಿಳಿದ ಕೆಲವರು ಬೋಧಕರು ಪ್ರಜೆಗಳ ಮೆಚ್ಚುಗೆ ಪಡೆಯುವುದಕ್ಕೆ, ಅವರಿಂದ ಲಾಭವನ್ನು ಪಡೆಯುವುದಕ್ಕೆ ಕೇಳುವವರಿಗೆ ಇಷ್ಟವಾಗುವಂತೆ ಹೇಳುತ್ತಿದ್ದಾರೆ. ನಿಜವನ್ನು ಹೇಳಿದರೆ ನಿಷ್ಠೂರವೆಂದು, ತಾವು ನಿಷ್ಠೂರ ಆಗದಂತೆ ಸಿಹಿಯಾದ ಮಾತುಗಳನ್ನು ಕೇಳುವವರಿಗೆ ಹೇಳುವುದರಿಂದ ಅಸತ್ಯ ಹೆಚ್ಚಾಗಿ ಪ್ರಚಾರವಾಗಿಹೋಗಿದೆ. ಇಲ್ಲಿ ಕೆಲವರಿಗೊಂದು ಪ್ರಶ್ನೆಬರಬಹುದು. ಸತ್ಯಾಸತ್ಯಗಳನ್ನು ಹೇಗೆ ಗುರುತಿಸಬಹುದು? ಸತ್ಯಕ್ಕಾಗಲಿ, ಅಸತ್ಯಕ್ಕಾಗಲಿ ಏನಾದರೂ ಗುರುತಾಗಲಿ, ಪ್ರಮಾಣವಾಗಲಿ ಇರುತ್ತದಾ? ಎಂದು ಕೇಳಬಹುದು. ಇದು ಪ್ರಶ್ನೆಯಾದ್ದರಿಂದ ಉತ್ತರವನ್ನು ನೋಡಬೇಕಾಗಿದೆ.

ಶಾಸ್ತ್ರ, ಅಶಾಸ್ತ್ರ ಎನ್ನುವವು ಕೇಳಿಯೇ ಇರುತ್ತೇವೆ. ಇದರಿಂದ ಶಾಸ್ತ್ರಸಮ್ಮತ ವಿಷಯಗಳೂ, ಶಾಸ್ತ್ರಸಮ್ಮತವಲ್ಲದ ವಿಷಯಗಳೆಂದು ಹೇಳಿಕೊಳ್ಳ ಬಹುದು. ಶಾಸ್ತ್ರಸಮ್ಮತ ವಿಷಯಗಳೆಂದರೆ ಸತ್ಯಗಳೆಂದು, ಶಾಸ್ತ್ರಸಂಬಂಧವಲ್ಲದ ಅಶಾಸ್ತ್ರೀಯ ವಿಷಯಗಳೆಂದರೆ ಅಸತ್ಯಗಳೆಂದು ಹೇಳಬಹುದು. ಸತ್ಯ

ಶಾಸ್ತ್ರಬದ್ಧವಾದುದು, ಆದ್ದರಿಂದ ಒಂದು ಸತ್ಯವನ್ನು ಒಂದು ಶಾಸನದ ಮೇಲೆಯೇ ಆಧಾರ ಬಿದ್ದು ಹೇಳಬೇಕಾಗಿರುತ್ತದೆ. ಹೇಳುವ ವಿಷಯ ಶಾಸ್ತ್ರಬದ್ಧವಾದ ಸತ್ಯವಾದಾಗ ಅದು ಕೇಳುವವರಿಗೆ ಇಷ್ಟವಾಗಬಹುದು. ಇಷ್ಟವಾಗದಿರಬಹುದು. ಇಷ್ಟವಾಗುವುದು, ಇಷ್ಟವಾಗದಿರುವುದು ಕೇಳುವವರೊಂದರ ವಿಚಕ್ಷಣಾ ಬುದ್ಧಿಮೇಲೆ ಆಧಾರಪಟ್ಟಿರುತ್ತದೆ. ಕೇಳುವವನು ಬುದ್ಧಿಹೀನನಾಗಿ, ಯೋಚನಾ ರಹಿತನಾಗಿ ಕೇಳಿರುವುದನ್ನು ಅವಗಾಹನೆ ಮಾಡಿಕೊಳ್ಳದೆಹೋದರೆ ಸತ್ಯವನ್ನು ಹೇಳಿದವನು ಸಹ ಅಸತ್ಯಪರನಾಗಿ, ಅಧರ್ಮಪರನಾಗಿ ಕಾಣಿಸುತ್ತಾನೆ. ಅಸತ್ಯವನ್ನು ಬೋಧಿಸುವವನಿಗೆ ಶಾಸ್ತ್ರಬದ್ಧತೆ ಎಂಬುದು ಏನೂ ಇರುವುದಿಲ್ಲ. ಆದ್ದರಿಂದ ಅಂತಹವನು ಇನ್ನೊಬ್ಬನಿಗೆ ಇಷ್ಟವಾಗುವಂತೆ ಹೇಳಬಹುದು. ಅಸತ್ಯಬೋಧಕರು ಶಾಸ್ತ್ರವನ್ನು ಅನುಸರಿಸಬೇಕಾದ ಕೆಲಸವಿಲ್ಲ, ಆದ್ದರಿಂದ ಅವರು, ಅವರ ಇಷ್ಟಬಂದಂತೆ ಹೇಳಬಹುದು, ಕೇಳುವವರ ಮೆಚ್ಚುಗೆ ಪಡೆಯಬಹುದು. ಈ ವಿಷಯವನ್ನೇ ಭಗವದ್ಗೀತಾ ಶಾಸ್ತ್ರದಲ್ಲಿ ಸಾಂಖ್ಯಯೋಗದಲ್ಲಿ 41 ಶ್ಲೋಕಗಳಲ್ಲಿ ಭಗವಂತನು ಸಹಾ ಹೇಳಿದ್ದಾನೆ.

***1) ಶ್ಲೋ ॥ 41 : ವ್ಯವಸಾಯಾತ್ಮಿಕಾ ಬುದ್ಧಿ ರೇಕಹ ಕುರುನನ್ದನ!***
***ಬಹುಶಾಖಾ ಹ್ಯನನ್ತಾಶ್ಚ ಬುದ್ಧಯೋವ್ಯವಸಾಯಿನಾಮ್॥***

ಈ ಶ್ಲೋಕದಲ್ಲಿ ಮೊದಲೇ "ವ್ಯವಸಾಯಾ" ಅನ್ನುವ ಪದ ಬಂದಿದೆ. ಹಾಗೆಯೇ ಕೊನೆಯಲ್ಲಿ " ಅವ್ಯವಸಾಯಾ" ಅನ್ನುವ ಪದವು ಬಂದಿದೆ. ವ್ಯವಸಾಯ ಎಂದರೆ ಬೆಳೆಯುವುದೆಂದು, ನಡೆದುತೀರುವುದು ಎಂದು, ಶಾಸ್ತ್ರಬದ್ಧವಾದುದೆಂದು, ಸತ್ಯವೆಂದು ಅರ್ಥವಿದೆ. ಅವ್ಯವಸಾಯಾ ಎಂದರೆ ಬೆಳೆಯುವುದು ಅಲ್ಲವೆಂದು, ನಡೆಯದಿರುವುದೆಂದು, ಅಶಾಸ್ತ್ರೀಯ ವಾದುದೆಂದು, ಅಸತ್ಯವೆಂದು ಅರ್ಥವಿದೆ. ಇದರಪ್ರಕಾರ ಶ್ಲೋಕದಲ್ಲಿ ಏನು ಹೇಳಿರುವುದೆಂದರೆ! ಶಾಸ್ತ್ರಬದ್ಧವಾದ ಸತ್ಯವನ್ನು ಹೇಳುವವನು ಒಂದೇ ವಿಧವಾಗಿ ಹೇಳುತ್ತಿರುತ್ತಾನೆ. ಅಶಾಸ್ತ್ರೀಯವಾದ ಅಸತ್ಯವನ್ನು ಮಾತನಾಡುವವನು ಅನೇಕ ವಿಧಗಳಾಗಿ

ಹೇಳುತ್ತಿರುತ್ತಾನೆ. "ವ್ಯವಸಾಯಾತ್ಮಿಕಾ ಬುದ್ಧಿ ರೇಕೆಹ ಕುರುನಂದನ " ಎಂದರೆ ಶಾಸ್ತ್ರಬದ್ಧವಾದ ಬುದ್ಧಿ ಇರುವವನು ಒಂದೇ ವಿಧವಾಗಿ ಮಾತನಾಡುತ್ತಾನೆ ಎಂದು ಅರ್ಥವೂ ಇದೆ. **"ಬಹುಶಾಖಾ ಹನನ್ತಾಶ್ಚ ಬುದ್ಧಯೋವ್ಯವಸಾಯಿನಾಮ್"** ಎಂದರೆ ಅನೇಕ ಶಾಖೆಗಳಾಗಿ, ಅಸಂಖ್ಯಾತಗಳಾಗಿ ಮಾತನಾಡುವವನ ಬುದ್ಧಿ ಅಶಾಸ್ತ್ರವಾದುದು ಎಂದು ಅರ್ಥವೂ ಇದೆ. ಇದರಿಂದ ಶಾಸ್ತ್ರವನ್ನು ಬಿಟ್ಟು ಮಾತನಾಡುವವನು ಎಷ್ಟು ವಿಧಗಳಲ್ಲಿ ಮಾತನಾಡಿದರೂ ಅವು ಅಸತ್ಯಗಳೆಂದೇ ಹೇಳಬಹುದು. ಆದುದರಿಂದ ಹೇಳುವುದು ಯಾವ ವಿಷಯವಾದರೂ ಶಾಸ್ತ್ರಬದ್ಧವಾ, ಅಲ್ಲವಾ ಎಂದು ನೋಡಬೇಕಾದ ಅಗತ್ಯವಿದೆ. ಈಗ ಇಲ್ಲಿ ಸಹ ಕೆಲವರು ಪ್ರಶ್ನೆ ಕೇಳವುದಕ್ಕೆ ಅವಕಾಶ ಇದೆ. ಅದೇನೆಂದರೆ! ನಾವು ಕೇಳುತ್ತಿರುವ ವಿಷಯ ಶಾಸ್ತ್ರಬದ್ಧವಾದುದಾ ಅಲ್ಲವಾ ಎಂದು ಹೇಗೆ ತಿಳಿಯ ಬಹುದು? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ!

ನಾವು ನಿತ್ಯವೂ ಕೇಳುವ ಸರ್ವಸಾಧಾರಣ ವಿಷಯಗಳಲ್ಲಿ ಹಾಗೆ ನೋಡಬೇಕಾದ ಕೆಲಸವಿಲ್ಲ. ನೋಡಬೇಕಾಗಿರುವುದು ಏನಾದರು ಹೊಸ ವಿಷಯ ನಮಗೆ ತಿಳಿದಾಗಲೇ, ಅದು ನಿಶ್ಚಯವಾದುದಾ ಅಲ್ಲವಾ ಎಂದು ನೋಡಬೇಕು. ಉದಾಹರಣೆಗೆ ಮನುಷ್ಯ ಶರೀರ ಗರ್ಭದಿಂದ ಹುಟ್ಟಲಿಲ್ಲ, ಸೋರೆಯಿಂದ ಹುಟ್ಟಿರುವುದೆಂದು ಯಾರಾದರೂ ಹೇಳಿದರೆ ಆಗದು ಹೊಸ ವಿಷಯವಾಗುತ್ತದೆ. ಅದು ಸತ್ಯವೊ ಅಲ್ಲವೊ ಎಂದು ಯೋಚಿಸಬೇಕಾದ ಅವಶ್ಯಕವಿದೆ. ಹಾಗೆಯೇ ಗರ್ಭದಿಂದ ಹುಟ್ಟುವ ಮನುಷ್ಯನ ಶರೀರವು ಗರ್ಭದಲ್ಲಿ ಸಜೀವವಾಗಿ ಇಲ್ಲ. ಹೊರಗೆ ಬಂದನಂತರ ಗಾಳಿಯನ್ನು ಮೊದಲ ಶ್ವಾಸವಾಗಿ ತೆಗೆದುಕೊಂಡಾಗ ಮಾತ್ರವೇ ಸಜೀವವಾಗುತ್ತಿದೆಯೆಂದು, ಗಾಳಿಯನ್ನು ಮೊದಲ ಶ್ವಾಸವಾಗಿ ತೆಗೆದುಕೊಳ್ಳುವುದಕ್ಕೆ ಪ್ರಸವಿಸಿದ ನಂತರ ಎಷ್ಟು ಸಮಯವಾದರೂ ಅಲ್ಲಿಯ ವರೆಗೂ ಅದು ಸಜೀವವಲ್ಲ, ಆ ಶಿಶುವಿಗೆ ಪ್ರಾಣ ಇಲ್ಲವೆಂದು ಯಾರಾದರೂ ಹೇಳಿದಾಗ, ಆ ವಿಷಯ ಸತ್ಯವೊ ಅಸತ್ಯವೊ ಎಂದು ನೋಡುವುದಕ್ಕೆ ಶಾಸ್ತ್ರವನ್ನು ಆಧಾರ ಮಾಡಿಕೊಳ್ಳಬೇಕು. ಶಾಸ್ತ್ರಗಳೆಂದರೆ ಏನು? ಶಾಸ್ತ್ರಗಳೆಷ್ಟು ಎಂದು

ತಿಳಿಯದವರು ಪ್ರಸ್ತುತಕಾಲದಲ್ಲಿ ಎಷ್ಟೋ ಜನ ಇದ್ದಾರೆ. ಉದಾಹರಣೆಗೆ ನಾವು ಒಬ್ಬ ಸ್ವಾಮಿ ಹೇಳುವ ಬೋಧನೆಯನ್ನು ಕೇಳುತ್ತಾ ಆತನ ಬಾಯಿಂದ ಶಾಸ್ತ್ರಗಳು ಅನೇಕಗಳಿವೆಯೆಂಬ ಮಾತನ್ನು ಕೇಳಿದ್ದೇವೆ. ಒಬ್ಬ ದೊಡ್ಡ ಸ್ವಾಮಿಜೀ ಟಿ,ವಿ.ಯಲ್ಲಿ ಎಷ್ಟೋ ಲಕ್ಷಗಳ ಜನರು ಪ್ರೇಕ್ಷಕರಾಗಿ ನೋಡುತ್ತಿರುವಾಗ ಆ ವಿಧವಾಗಿ ಹೇಳುವುದು ಕೇಳಿದ ನಾವು ಆ ಮಾತು ಸತ್ಯವಾ ಅಲ್ಲವಾ ಎಂದು ಹಿಂತಿರುಗಿ ನೋಡಬೇಕಾಗಿ ಬಂದಿದೆ. ಆಗ ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆ ಯನ್ನು ತೆರೆದು ನೋಡಬೇಕಾಗಿ ಬಂದಿದೆ. ಅದರಲ್ಲಿ ಸಾಂಖ್ಯಯೋಗದಲ್ಲಿ.

*1) ಶ್ಲೋ ॥ 42:* ***ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದ ನ್ತ್ಯವಿಪಶ್ಚಿತಃ।***
***ವೇದವಾದರತಾಃ ಪಾರ್ಥ! ನಾನ್ಯ ದಸ್ತೀತಿವಾದಿನಃ ॥***

***1) ಶ್ಲೋ ॥ 43 : ಕಾಮಾತ್ಮಾನ ಸ್ಸ್ವರ್ಗಪರಾ ಜನ್ಮಕರ್ಮಫಲ ಪ್ರದಾಮ್।***
***ಕ್ರಿಯಾವಿಶೇಷ ಬಹುಳಾಂ ಬೋಗೈಶ್ವರ್ಯಗತಿಂ ಪ್ರತಿ॥***

***1) ಶ್ಲೋ ॥ 44 : ಭೋಗೈಶ್ವರ್ಯ ಪ್ರಸಕ್ತಾನಾಂತಯಾ ಪಹೃತ ಚೇತಸಾಮ್ ।***
***ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥***

ಈ ಶ್ಲೋಕಗಳನ್ನು ಪರಿಶೀಲಿಸಿದರೆ ಎಷ್ಟೋ ತಿಳಿಯದ ವಿಷಯಗಳು ತಿಳಿಯುತ್ತಿವೆ. ಶಾಸ್ತ್ರಗಳು ವೇದಗಳಿಗಿಂತ ವಿಭಿನ್ನವಾದವೆಂದು, ವೇದಗಳು ಅಶಾಸ್ತ್ರಗಳೆಂದು ತಿಳಿಯುತ್ತಿವೆ. ವೇದವಾದರತಾಃ ಎನ್ನುವ 42ನೇ ಶ್ಲೋಕವನ್ನು ನೋಡಿ ಕೊನೆಗೆ 44ನೇ ಶ್ಲೋಕದಲ್ಲಿ **"ವ್ಯವಸಾಯಾತ್ಮಿಕಾ ಬುದ್ಧಿಃಸಮಾಧೌ ನವಿಧೀಯತೇ"** ಅನ್ನುವ ವಾಕ್ಯವನ್ನು ನೋಡಿದರೆ ವೇದಗಳು ಶಾಸ್ತ್ರಗಳಲ್ಲವೆಂದು ತಿಳಿಯುತ್ತಿದೆ. ನಂತರ ಪಕ್ಕದಲ್ಲೇ ಇರುವ

**1) ಶ್ಲೋ ॥45 : ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ! ।**
**ನಿರ್ದ್ವಂದ್ವೋ ನಿತ್ಯ ಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**

ಶ್ಲೋಕದಲ್ಲಿ "ತ್ರೈಗುಣ್ಯ ವಿಷಯಾ ವೇದಾ" ಅನ್ನುವ ವಾಕ್ಯವನ್ನು ನೋಡಿದರೆ ವೇದಗಳು ಮೂರು ಗುಣ ವಿಷಯಗಳಿಂದ ತುಂಬಿಕೊಂಡಿವೆಯೆಂದು ತಿಳಿಯುತ್ತಿದೆ. ಅಲ್ಲಿಯೇ ಇರುವ "ನಿಸ್ತ್ರೈಗುಣ್ಯೋ" ಅನ್ನುವ ಪದವನ್ನು ನೋಡಿದರೆ ಗುಣಗಳಾದ ಅವುಗಳನ್ನು ಬಿಟ್ಟುಹಾಕು ಅನ್ನುವ ವಿಷಯವೂ ಸಹ ಅರ್ಥವಾಗುತ್ತದೆ.

ಇವೆಲ್ಲವೂ ವಿಶದವಾಗಿ ವಿವರಿಸಿಕೊಂಡು ನೋಡಿದರೆ ಶಾಸ್ತ್ರಗಳು ಕೆಲವು ಇರುವಾಗ, ಶಾಸ್ತ್ರಗಳಲ್ಲದಿರುವವು ಕೆಲವು ಇವೆಯೆಂದು ತಿಳಿಯುತ್ತಿದೆ. ಶಾಸ್ತ್ರಗಳಾಗಿ ಇರುವವು ಷಟ್‌ಶಾಸ್ತ್ರಗಳೆಂದು, ಶಾಸ್ತ್ರಗಳು ಅಲ್ಲದಿರುವವು ಚತುರ್ ವೇದಗಳೆಂದು ತಿಳಿಯುತ್ತಿವೆ. ಭೂಮಿ ಮೇಲೆ ಆರುಶಾಸ್ತ್ರಗಳ ವಿನಹ ಇರುವವು ಯಾವಾದರೂ ಅವು ಎಲ್ಲವೂ ವೇದಗಳ ಕೆಳಗೆ ಜಮ ಆಗುತ್ತವೆ. ಇದರಿಂದ ಅಷ್ಟಾದಶ ಪುರಾಣಗಳು ಸಹ ವೇದಗಳ ಗುಂಪಿಗೆ ಸೇರಿರುವವೆಂದೆ ತಿಳಿಯ ಲಾಗುತ್ತದೆ. ಬಾವಿಯಲ್ಲಿ ನೀರು ಎಷ್ಟು ಇದ್ದರೂ ದಾಹದ ನಿಮಿತ್ತಅವಶ್ಯಕತೆಗೆ ಸ್ವಲ್ಪ ಬಳಸಿಕೊಂಡಂತೆ ವೇದಗಳನ್ನು ಸಹ ಬಳಸಿಕೊಳ್ಳಿರೆಂದು, ಅಷ್ಟೇಯಾಗಲಿ ಹೆಚ್ಚಾಗಿ ವೇದಗಳನ್ನು ಹೇಳಿಕೊಳ್ಳಬೇಡವೆಂದು ಭಗವಂತನು ಹೇಳಿದ್ದಾನೆ. ಭಗವಂತನು ಭಗವದ್ಗೀತೆಯಲ್ಲಿ ಯಾವ ಸಂದರ್ಭದಲ್ಲಿ ಸಹ ವೇದಗಳನ್ನು ಸಮ್ಮತಿಸಲಿಲ್ಲ. ವೇದಗಳಿಂದ ಆತ್ಮಜ್ಞಾನ ತಿಳಿಯುವುದಿಲ್ಲವೆಂದಿದ್ದಾನೆ, ವೇದಗಳಿಂದ ದೈವಪ್ರಾಪ್ತಿಯಾದ ಮೋಕ್ಷ ದೊರೆಯುವುದಿಲ್ಲ ಎಂದಿದ್ದಾನೆ. ಆದುದರಿಂದ ಆರುಶಾಸ್ತ್ರಗಳಲ್ಲಿ ದೊಡ್ಡದು, ಕೊನೆಯದಾದ ಬ್ರಹ್ಮ ವಿದ್ಯಾಶಾಸ್ತ್ರವಾಗಿ ಹೆಸರುವಾಸಿಯಾದ ಭಗವದ್ಗೀತೆ ಆಧಾರದಿಂದ ಸಂಸಾರ ಎಂದರೆ ಏನೋ, ಅದರಲ್ಲಿ ನಿಜವಾದ ಸಾರ ಏನೋ, ಸಂಸಾರ ಎಲ್ಲಿದೆಯೋ ತಿಳಿದುಕೊಳ್ಳೋಣ. ಕೆಲವರು ಹಿಂದುಗಳು ಅಜ್ಞಾನವಶದಿಂದ ಮಾಯ ಪ್ರಭಾವದಿಂದ ತುಂಬಿದವ ರಾಗಿ ಹಿಂದುಗಳಿಗೆ ಪ್ರಮಾಣ ಗ್ರಂಥಗಳು ವೇದಗಳೆಂದು ಅನ್ನುತ್ತಿದ್ದಾರೆ. ನಾವು ಹೇಳುವುದೇನೆಂದರೆ! ಸೃಷ್ಠಿ ಆದಿಯಲ್ಲಿಯೇ ಸೂರ್ಯನಿಗೆ ಹೇಳಲಾದ ಭಗವದ್ಗೀತೆಯೇ ಹಿಂದುಗಳಿಗೆ ಪ್ರಮಾಣ ಗ್ರಂಥವೆಂದು ತಿಳಿಸುತ್ತಿದ್ದೇವೆ.

ಭಗವದ್ಗೀತೆಯನ್ನು ದ್ವಾಪರಯುಗದಲ್ಲಿ ಶ್ರೀಕೃಷ್ಣನು ಹೇಳಿದ್ದಾನೆಂದು ಅದನ್ನು ಕೆಲವರು ಸಣ್ಣ ದೃಷ್ಠಿಯಿಂದ ನೋಡುತ್ತಾ ವೇದಗಳೇ ದೊಡ್ಡವೆಂದು ಅಂದು ಕೊಳ್ಳುತ್ತಿದ್ದಾರೆ. ದ್ವಾಪರಯುಗದಲ್ಲಿ ಹೇಳಲಾದ ಗೀತೆಯೇ ಸೃಷ್ಠಿ ಆದಿಯಲ್ಲಿ ದೇವರಿಂದ ಹೇಳಲಾಗಿದೆ ಎಂದು, ಅದರಹಿಂದೆ ಹುಟ್ಟಿರುವವೇ ವೇದಗಳೆಂದು ತಿಳಿಯಬೇಕು.

ಸೃಷ್ಠಿ ಆರಂಭವಾದಾಗಲೇ ಪರಮಾತ್ಮನಿಂದ ಹೇಳಲಾಗಿರುವುದು ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆ. ಸೃಷ್ಠಿ ನಂತರ ಮನುಷ್ಯರಿಂದ ಹೇಳಲಾಗಿರುವವು ವೇದಗಳು. ವಿಶ್ವವನ್ನು ತಯಾರು ಮಾಡಿದ ದೇವರನ್ನು ಕುರಿತು ಹೇಳುವುದು ಬ್ರಹ್ಮವಿದ್ಯೆ, ಪ್ರಕೃತಿಯನ್ನು ಕುರಿತು ಹೇಳುವವು ವೇದಗಳು. ವಿಶ್ವದಲ್ಲಿ ಕಾಣಿಸುವ ಪ್ರಕೃತಿ ಮತ್ತು ಕಾಣಿಸದ ಪರಮಾತ್ಮ ವ್ಯಾಪಿಸಿವೆ. ಕಾಣಿಸುವ ಪ್ರಕೃತಿಯನ್ನು ಕಾಣಿಸದ ದೇವರು ತಯಾರು ಮಾಡಿದ್ದಾನೆ. ಪ್ರಕೃತಿ ಹೇಗೆ ತಯಾರಾಗಿರುವುದು ಯಾವಾಗ ತಯಾರಾಗಿರುವುದು ಮನುಷ್ಯನಿಗೆ ತಿಳಿಯದು. ಆದ್ದರಿಂದ ಪ್ರಕೃತಿ ಪರಮಾತ್ಮರೊಂದರ ಆದಿ ಮನುಷ್ಯರಿಗೆ ತಿಳಿದಿಲ್ಲವೆಂದು "ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದಿ ಉಭಾವಪಿ" ಎಂದು ಭಗವದ್ಗೀತೆ ಕ್ಷೇತ್ರಕ್ಷೇತ್ರಜ್ಞ ಯೋಗದಲ್ಲಿ 20ನೇ ಶ್ಲೋಕದಲ್ಲಿ ಅಂದಿದ್ದಾರೆ. ಅದೇ ಶ್ಲೋಕದಲ್ಲಿಯೇ ಪ್ರಕೃತಿಯಿಂದಲೇ ಗುಣಗಳು ಹುಟ್ಟಿವೆಯೆಂದು ತಿಳಿಸುತ್ತಾ "ವಿಕಾರಾಂಶ್ಚ ಗುಣಾಂ ಶ್ಚೈವ ವಿದ್ಧಿ ಪ್ರಕೃತಿ ಸಂಭವಾನ್" ಎಂದು ಸಹ ಹೇಳಿದ್ದಾರೆ. ಅಲ್ಲಿಯೇ 22ನೇ ಶ್ಲೋಕದಲ್ಲಿ ಪ್ರಕೃತಿಯಿಂದ ಹುಟ್ಟಿರುವವೇ ಗುಣಗಳೆಂದು ತಿಳಿಸುತ್ತಾ "ಪ್ರಕೃತಿ ಜಾನ್ ಗುಣಾನ್" ಅಂದಿದ್ದಾರೆ. ಅಷ್ಟೇ ಅಲ್ಲದೆ ವಿಜ್ಞಾನ ಯೋಗದಲ್ಲಿ 14ನೇ ಶ್ಲೋಕದಲ್ಲಿ ಗುಣಗಳಿಂದ ಕೂಡಿಕೊಂಡಿರುವುದೇ ಮಾಯೆ ಎಂದು ತಿಳಿಸುತ್ತಾ "ಗುಣಮಯಾ ಮಮ ಮಾಯಾ" ಅಂದಿದ್ದಾರೆ. ಸಾಂಖ್ಯಯೋಗದಲ್ಲಿ 45ನೇ ಶ್ಲೋಕದಲ್ಲಿ ವೇದಗಳೆಂದರೆ ಮೂರು ಗುಣಗಳ ವಿಷಯಗಳೇ ಎಂದು ತಿಳಿಸುತ್ತಾ "ತ್ರೈಗುಣ್ಯ ವಿಷಯಾ ವೇದ" ಅಂದಿದ್ದಾರೆ. ಇವೆಲ್ಲವೂ ಒಂದಾಗಿಸಿ ನೋಡಿದರೆ ಪ್ರಕೃತಿಯಿಂದ ಹುಟ್ಟಿರುವವು ಗುಣಗಳೆಂದು, ಗುಣಗಳೇ

ಮಾಯಯೆಂದು, ಮಾಯೆಗೆ ಪ್ರತಿರೂಪವಾದ ಗುಣಗಳ ವಿಷಯಗಳೇ ವೇದಗಳೆಂದು ತಿಳಿಯುತ್ತಿದೆ. ಮನುಷ್ಯ ಹುಟ್ಟಿದಾಗಿನಿಂದ ಮಾಯೆಯಲ್ಲಿಯೇ ಸಿಲುಕಿಕೊಂಡು ದೇವರನ್ನು ತಿಳಿಯದಂತಿದ್ದಾನೆ. ಮನುಷ್ಯ ಮಾಯಾ ಪ್ರಭಾವದಿಂದಲೇ ದೇವರನ್ನು ತಿಳಿಸುವ ಬ್ರಹ್ಮವಿದ್ಯೆಯನ್ನು ಬಿಟ್ಟು ಮಾಯೆಯಿಂದ ಕೂಡಿಕೊಂಡ ವೇದಗಳನ್ನು ಆಶ್ರಯಿಸಿದ್ದಾನೆ. ವೇದಗಳು ಹೇಳಿದಂತೆ ಮಾಡುತ್ತಿದ್ದಾನೆ. ವೇದಗಳನ್ನು ಪ್ರಮಾಣವಾಗಿ ಹೇಳಿಕೊಳ್ಳುತ್ತಿದ್ದಾನೆ. ಮಾಯೆ ಯನ್ನು ಬಿಟ್ಟು ದೇವರನ್ನು ತಿಳಿದುಕೊಳ್ಳಬೇಕೆಂಬ ಮನುಷ್ಯ ಯಾರಾದರಾಗಲಿ, ಮಾಯೆಗೆ ಪ್ರತಿರೂಪವಾದ ವೇದಗಳನ್ನು ಬಿಟ್ಟು ದೇವರಿಗೆ ಪ್ರತಿರೂಪವಾದ ಬ್ರಹ್ಮವಿದ್ಯಾ ಶಾಸ್ತ್ರವಾಗಿ ಹೆಸರುವಾಸಿಯಾದ ಭಗವದ್ಗೀತೆಯನ್ನು ಆಶ್ರಯಿಸಬೇ ಕಾಗಿದೆ!. ಈಗ ನಮಗೆ ಸತ್ಯಾಸತ್ಯಗಳ ಸಮಸ್ಯೆ ಬಂದಿದೆ ಆದ್ದರಿಂದ ಸಂಸಾರ ವೆಂಬುದನ್ನು ವೇದಗಳಿಂದ ಅಲ್ಲದೆ ಭಗವದ್ಗೀತೆ ಆಧಾರದಿಂದ ಸತ್ಯವನ್ನು ತಿಳಿದುಕೊಳ್ಳೋಣ.

ಸಂಸಾರವೆಂಬುದು ಒಬ್ಬ ಮನುಷ್ಯನಿಗೆ ಸಂಬಂಧಿಸಿರುವುದಾ, ಅಥವಾ ಒಬ್ಬ ಜೀವಿಗೆ ಸಂಬಂಧಿಸಿರುವುದಾ? ಎಂದು ಯೋಚಿಸಿದರೆ ಭಗವದ್ಗೀತೆ ಪ್ರಕಾರ ಜೀವಿಗೆ ಸಂಬಂಧಿಸಿದ ವಿಷಯವೆಂದು ತಿಳಿಯುತ್ತಿದೆ. ಆಧ್ಯಾತ್ಮಿಕ ಕೇವಲ ಮನುಷ್ಯರಿಗೇ ಅಲ್ಲದೆ ಸರ್ವಜೀವರಾಶಿಗಳಿಗು ವರ್ತಿಸುತ್ತದೆ. ಆದ್ದರಿಂದ ಸಂಸಾರವೆಂಬುವುದು ಜೀವಿಗೆ ಸಂಬಂಧಿಸಿರುವ ವಿಷಯವೆಂದು ತಿಳಿಯಬೇಕು. ಒಬ್ಬ ಮನುಷ್ಯನಿಗೆ ಹೊರಗಿನ ಸಂಸಾರವಿರಬಹುದು, ಇಲ್ಲದಂತಿರಬಹುದು. ಆದರೆ ಪ್ರತಿ ಜೀವಿಗು ಒಳಗಿನ ಸಂಸಾರವಿದೆ. ಬಹಳಜನ ಅಂದುಕೊಳ್ಳುವಂತೆ ಹೊರಗಿನ ಹೆಂಡತಿ ಮಕ್ಕಳು ಸಂಸಾರವಲ್ಲ. ಹೊರಗಿನ ಹೆಂಡತಿಮಕ್ಕಳೊಂದಿಗೆ ಬೆರೆತು ಜೀವಿಸುವುದನ್ನು ಕುಟುಂಬದೊಂದಿಗೆ ಬೆರೆತಿರುವಂತಿರುತ್ತದೆ. ಪ್ರತಿ ಕುಟುಂಬದಲ್ಲಿ ನಿರಾಶೆ, ನಿಸ್ಪೃಹಹೊಂದಿ ಸಾರವಿಲ್ಲದಿರುವುದಾಗಿರುತ್ತದೆ ಆದ್ದರಿಂದ ಕುಟುಂಬ ಸಂಸಾರ ಅಲ್ಲ. ಕುಟುಂಬದಲ್ಲಿ ಅಶಾಂತಿಯೇ ಇರುತ್ತದಾದ್ದರಿಂದ ಕುಟುಂಬವನ್ನು ನಿಸ್ಸಾರವಾಗಿ ಹೇಳಬಹುದಾಗಲಿ ಸಂಸಾರವಾಗಿ ಹೇಳಬಾರದು.

ಭೂಮಿಮೇಲೆ ಪ್ರತಿ ಕುಟುಂಬ ಸಾಫಿಯಾಗಿ ಸಾಗದೆ ಮಾನಸಿಕವಾಗಿಯೋ, ಆರ್ಥಿಕವಾಗಿಯೋ, ಅನಾರೋಗ್ಯವಾಗಿಯೋ ಮತ್ತೆ ಎಷ್ಟೋ ಸಮಸ್ಯೆಗಳ ಬಲೆಯಲ್ಲಿ ಆತಂಕಗಳಿಂದ ನಡೆಯುತ್ತಿರುತ್ತದೆ. ಪೂರ್ವದಲ್ಲಿ ತಿಳಿದ ಹಿರಿಯರು ಹೆಂಡತಿಮಕ್ಕಳಜೊತೆ ಕಳೆಯುವ ಜೀವನವನ್ನು ಕುಂಟುತ್ತಾ ಕುಂಟುತ್ತಾ ಸಮಸ್ಯೆಗಳಿಂದ ಸಾಗುವುದೆಂದು, ಅದನ್ನು ಕುರಿತು ಆ ವಿಷಯ ಎಲ್ಲರಿಗೂ ತಿಳಿಯುವಂತೆ "ಕುಂಟುಂಬ" ಅಂದಿದ್ದಾರೆ. ಕುಂಟು ಎಂದರೆ ಸರಿಯಾಗಿ ನಡೆಯದಿರುವುದೆಂದು ಅರ್ಥ. ಸರಿಯಾಗಿ ನಡೆಯದವನನ್ನು ಕುಂಟುತ್ತಿದ್ದಾನೆ ಅನ್ನುತ್ತೇವಲ್ಲವೆ! ಹಾಗೆಯೇ ಹೆಂಡತಿಮಕ್ಕಳಜೊತೆ ಕಳೆಯುವ ಜೀವನ ಸಮಸ್ಯೆಗಳ ಮಯವಾದ್ದರಿಂದ ಅದನ್ನು ಕುಂಟುಂಬ ಅಂದಿದ್ದಾರೆ. ಕಾಲಕ್ರಮವಾಗಿ "ಕುಂಟುಂಬ" ಅನ್ನುವ ಪದದಲ್ಲಿ "ಕು" ಪಕ್ಕದಲ್ಲಿ ಸೊನ್ನೆ ಹೋಗಿರುವುದರಿಂದ ಈ ದಿನ ಕುಟುಂಬವಾಗಿ ಹೆಸರುವಾಸಿಯಾಗಿದೆ. ಈ ದಿನ ಸಹ ಕುಂಟುತ್ತಲೇ ನಡೆಯುತ್ತಿರುವ ಕುಟುಂಬವನ್ನು ಸಂಸಾರವೆಂದು ಕೆಲವರು ವೇದವಾದಿ ಗಳಂದರೂ ವಾಸ್ತವಕ್ಕೆ ಕುಟುಂಬ ಸಾರವಿಲ್ಲದ ನಿಸ್ಸಾರವೇ ಆಗಲಿ ಸಂಸಾರವಲ್ಲ. ಕುಟುಂಬ ಸಂಸಾರವಾಗದಿದ್ದಾಗ ನಿಜವಾದ ಸಂಸಾರ ಯಾವುದು? ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ!

ಒಬ್ಬ ಜೀವಿಯು ಒಂದು ಶರೀರದಲ್ಲಿ ನಿವಾಸವಿರುತ್ತಿದ್ದಾನೆ. ಶರೀರದಲ್ಲಿ ಜೀವಿಯು ಒಬ್ಬನೇ ವಾಸವಿರುತ್ತಿಲ್ಲ. ಜೀವಿಯಜೊತೆ ಆತ್ಮಸಹ ಇರುತ್ತಿದೆ. ಸಾವಿನಲ್ಲಿಯೂ, ಹುಟ್ಟಿನಲ್ಲಿಯೂ, ಸಾವುಹುಟ್ಟುಗಳ ಮಧ್ಯದಲ್ಲಿರುವ ಜೀವನದಲ್ಲಿಯೂ ಜೀವಿಗೆ ಜೊತೆಯಾಗಿರುವ ಆತ್ಮಸಹಾ ಜೀವಿಯಜೊತೆ ಶರೀರದಲ್ಲಿಯೇ ನಿವಾಸವಿದೆ. ಆತ್ಮವಿಲ್ಲದೆ ಜೀವಾತ್ಮವಾಗಲಿ, ಜೀವಾತ್ಮವಿಲ್ಲದೆ ಆತ್ಮವಾಗಲಿ ಎಲ್ಲಿಯೂ ಇರುವುದಿಲ್ಲ. ಆದುದರಿಂದ ಶರೀರದಲ್ಲಿ ಜೀವವಿದೆ ಎಂದರೆ ಅದರಲ್ಲಿ ಜೀವಾತ್ಮ, ಆತ್ಮ, ಎರಡೂ ನಿವಾಸ ಇರುತ್ತವೆಂದು ತಿಳಿಯಬೇಕು. ಕಾಣಿಸುವ ಹೊರಗಿನ ಗೃಹದಲ್ಲಿ ಒಬ್ಬ ಪತ್ನಿ, ಪತಿಯೇ ಅಲ್ಲದೆ ಉಳಿದವರು ಸಹ ಕೆಲವರು ನಿವಾಸವಿರುವಂತೆ, ಶರೀರವೆಂಬ ಗೃಹದಲ್ಲಿ

ಜೀವಾತ್ಮ, ಆತ್ಮವೇ ಅಲ್ಲದೆ ಪ್ರಕೃತಿಯಿಂದ ತಯಾರಾದ 24 ಭಾಗಗಳು ಸಹ ನಿವಾಸಿಸುತ್ತಿವೆ. ಇದನ್ನನುಸರಿಸಿ ನೋಡಿದರೆ ಶರೀರಗೃಹದಲ್ಲಿ ಒಟ್ಟು 26 ಮಂದಿ ನಿವಾಸಿಸುತ್ತಿದ್ದಾರೆಂದು ಅರ್ಥವಾಗುತ್ತಿದೆ. ಹೊರಗಿನ ಕುಟುಂಬದಲ್ಲಿ 26 ಮಂದಿಯಿರುವ ಮನೆಯನ್ನು ದೊಡ್ಡ ಕುಟುಂಬ ಅನ್ನುತ್ತಾರೆ. ಬಹುಶ ಅಷ್ಟು ಜನರಿರುವ ಕುಟುಂಬಗಳು ಬಹು ಅಪರೂಪವಾಗಿರುತ್ತವೆ. ಆದರೆ ಪ್ರತಿ ಶರೀರಗೃಹದಲ್ಲಿ ಮಾತ್ರ ಖಚಿತವಾಗಿ 26 ಮಂದಿ ಇರುತ್ತಾರೆ. ಶರೀರಗೃಹದಲ್ಲಿ 26 ಮಂದಿಗೆ ಪ್ರತ್ಯೇಕವಾಗಿ ಒಬ್ಬೊಬ್ಬರಿಗೆ ಒಂದೊಂದು ಕೆಲಸ ಇದೆ. 26 ಜನರಲ್ಲಿ ಯಾರೊಬ್ಬರು ಕಡಿಮೆಯಾದರೂ ಅವನಿಗೆ ಸಂಬಂಧಿಸಿದ ಕೆಲಸ ನಿಂತುಹೋಗುತ್ತದೆ. ಜೀವಿಯನ್ನು ಪಕ್ಕಕ್ಕೆ ಇಟ್ಟು ನೋಡಿದರೆ ಉಳಿದವರು ಒಟ್ಟು 25 ಜನರು ಆಗುತ್ತಾರಲ್ಲವೆ! ಆ 25 ಜನರು ಸಮನ್ವಯದಿಂದ ಕೆಲಸ ಮಾಡುತ್ತಿರುವಾಗ ಜೀವಿಯು ಶರೀರದಲ್ಲಿ ಜೀವನ ಸಾಗಿಸುತ್ತಿದ್ದಾನೆ. ಶರೀರದಲ್ಲಿ ವಾಸಮಾಡುವ ಜೀವಿಯು ಹುಟ್ಟಿನಿಂದ ಜ್ಞಾನಿ ಆದರೂ ಆಗಿರಬಹುದು, ಅಜ್ಞಾನಿ ಆದರೂ ಆಗಿರಬಹುದು. ಅಜ್ಞಾನಿಯಾದ ಜೀವಿಯು ತನ್ನ ಶರೀರದಲ್ಲಿ ತಾನೊಬ್ಬನೇ ಇರುವಂತೆ ತಿಳಿಯುತ್ತಿರುತ್ತಾನೆ. ತನ್ನ ಪಕ್ಕದಲ್ಲಿ ಯಾರಿರುವುದು, ಎಷ್ಟುಜನ ಇರುವುದು, ಅವರು ಏನು ಮಾಡುತ್ತಿರುವುದು, ತಿಳಿಯದ ಕುರುಡುತನದಿಂದ ಪಕ್ಕದವರನ್ನು ನೋಡಲಾರದ ಸ್ಥಿತಿಯಲ್ಲಿದ್ದು, ಶರೀರದಲ್ಲಿ ನಡೆಯುವ ಕೆಲಸಗಳೆಲ್ಲವನ್ನು ತಾನೆ ಮಾಡಿದಂತೆ, ತನ್ನ ವಿನಹಃ ಯಾರೂ ಇಲ್ಲವೆಂಬಂತೆ ಅಂದುಕೊಳ್ಳುತ್ತಿರುತ್ತಾನೆ. ಒಂದುವೇಳೆ ಹಿಂದಿನ ಜನ್ಮದಲ್ಲಿ ಜ್ಞಾನಿ ಆದರೂ, ಇಲ್ಲವೆ ಈ ಜನ್ಮದಲ್ಲಿ ಜ್ಞಾನವನ್ನು ತಿಳಿದುಕೊಂಡವನಿಗಾದರೂ ತನ್ನ ಶರೀರವನ್ನು ಕುರಿತು ಪೂರ್ತಿಯಾಗಿ ತಿಳಿದು ಅದರಲ್ಲಿ ಯಾರಿರುವುದು, ಏನು ಮಾಡುತ್ತಿರುವುದು ತಿಳಿದಿರುತ್ತದೆ. ಈ ವಿಧವಾಗಿ ಶರೀರದೊಳಗಿರುವ ಸಂಸಾರವನ್ನು ಕುರಿತು ತಿಳಿಯಬೇಕೆಂದರೆ ಪ್ರಸ್ತುತಕಾಲದಲ್ಲಿ ಅಂತಹ ಜ್ಞಾನ ಬಹು ಅಪರೂಪವಾಗಿ ದೊರಕುತ್ತಿದೆ. ಹಾಗೆ ಏಕೆ ಹೇಳುತ್ತಿದ್ದೇವೆಂದರೆ! ಬಹಳಜನರು ಜ್ಞಾನವನ್ನು ಹೇಳುವ ಸ್ವಾಮೀಜಿಗಳು ಸಹಿತವು ಮನಸ್ಸನ್ನು, ಬುದ್ಧಿಯನ್ನು, ಚಿತ್ತವನ್ನು, ಅಹಮ್‌ನನ್ನು ಬೇರೆಬೇರೆಯಾಗಿ ಇರುವಂತೆ

ಹೇಳುತ್ತಿಲ್ಲ. ಮನಸ್ಸು ಒಂದೇ ಇದೆಯೆಂದು, ಸಂದರ್ಭಾನುಸಾರ ಮನಸ್ಸನ್ನೇ ಬುದ್ಧಿ ಎಂದೂ, ಚಿತ್ತವು ಎಂದೂ ಹೇಳುತ್ತಿದ್ದೇವೆನ್ನುತ್ತಿದ್ದಾರೆ. ಇದರಿಂದ ಅವರ ದೃಷ್ಠಿಯಲ್ಲಿ ಮನಸ್ಸು, ಬುದ್ಧಿ, ಚಿತ್ತ ಮೂರು ಸೇರಿ ಒಂದೇ ಮನಸ್ಸಾಗಿ ಲೆಕ್ಕಿಸಲ್ಪಡುತ್ತಿದೆ. ಅಂತಃಕರಣಗಳಾದ ಮನಸ್ಸು, ಬುದ್ಧಿ, ಚಿತ್ತಗಳು ಏಕ ಮಾಡಿದವರು ಅಹಮ್‌ನ್ನು, ಶರೀರದಲ್ಲಿ ಭಾಗವಲ್ಲದಿರುವಂತಹ ಗುಣಗಳಲ್ಲಿ ಸೇರಿಸಿದ್ದಾರೆ. ಅಹಮ್‌ನ್ನು ಗುಣ ಅನ್ನುತ್ತಿದ್ದಾರೆ. ಮನೋ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ನಾಲ್ಕರಲ್ಲಿ ಒಂದು ಅಹಮ್‌ನ್ನು ಗುಣಗಳೊಳಗೆ ನೆಟ್ಟಿ ಹಾಕಿ ಲೆಕ್ಕಕ್ಕಿಲ್ಲದಂತೆ ಮಾಡಿದ್ದಾರೆ. ಉಳಿದ ಮೂರು ಆದ ಮನೋ, ಬುದ್ಧಿ, ಚಿತ್ತಗಳನ್ನು ಒಂದೇ ಮನಸ್ಸಾಗಿ ಮಾಡಿದ್ದಾರೆ. ಆದುದರಿಂದ ನಾಲ್ಕು ಅಂತಃಕರಣಗಳ ಸಂಖ್ಯೆ ಒಂದಾಗಿ ಬದಲಾಗಿಹೋಗಿದೆ. ಜೀವಾತ್ಮ ಆತ್ಮಗಳು ಎರಡಾದರೆ ಅದರಲ್ಲಿ ಆತ್ಮ, ಜೀವಾತ್ಮ ಎರಡೂ ಒಂದೇಯೆಂದು, ಸಂದರ್ಭಾನುಸಾರ ಆತ್ಮ ಎಂದು, ಜೀವಾತ್ಮ ಎಂದು ಕರೆಯುತ್ತಿದ್ದೇವೆಂದು ಹೇಳುತ್ತಿದ್ದಾರೆ. ಹಾಗೆ ಹೇಳುವುದಲ್ಲದೆ ಪುಸ್ತಕಗಳಲ್ಲಿಯು ಸಹ ಹಾಗೆಯೇ ಬರೆದಿಟ್ಟಿದ್ದಾರೆ. ಈ ವಿಧವಾಗಿ ಜೀವಾತ್ಮ, ಆತ್ಮ ಎರಡರ ಸಂಖ್ಯೆಯನ್ನು ಒಂದಾಗಿ ಮಾಡುವುದರಿಂದ ಶರೀರದಲ್ಲಿನ ಭಾಗಗಳ ಸಂಖ್ಯೆ 26 ರಿಂದ 22ಕ್ಕೆ ಬಿದ್ದುಹೋಗಿದೆ.

ಇನ್ನೂ ಕೆಲವರು ವೇದಾಂತಿಗಳು, ಶರೀರದಲ್ಲಿನ ಆತ್ಮವನ್ನು ಬಿಟ್ಟು ಅದನ್ನು ಪೂರ್ತಿ ಮರೆತುಹೋಗಿ, ಅದು ಇಲ್ಲೆನ್ನುವಂತೆ ಅದನ್ನು ತೆಗೆದುಹಾಕಿಕೊಂಡು ಜೀವಾತ್ಮದೊಂದಿಗೆ ಒಟ್ಟು 25 ಭಾಗಗಳಾಗಿ ಹೇಳುತ್ತಿದ್ದಾರೆ. ಆ ವಿಧವಾಗಿ ಹೇಳಿದರೂ ವಾಸ್ತವಕ್ಕೆ ಕಾಣಿಸುವ ಶರೀರದ ಮೇಲ್ಭಾಗಗಳು 10 ಇವೆ. ಶರೀರದೊಳಗೆ ಕಾಣಿಸದಿರುವವು 15 ಭಾಗಗಳಿವೆ. ಕಾಣಿಸುವ 10 ಶರೀರದ ಮೇಲ್ಭಾಗಗಳನ್ನು ಸ್ಥೂಲಶರೀರವೆಂದು, ಕಾಣಿಸದ 15 ಶರೀರ ಒಳಗಿನ ಭಾಗಗಳನ್ನು ಸೂಕ್ಷ್ಮಶರೀರವೆಂದು ಅನ್ನುವುದು ನಡೆಯುತ್ತಿದೆ. ಇಲ್ಲಿ ಹೇಳಿಕೊಳ್ಳುವಂತಹ ವಿಚಿತ್ರವೇನೆಂದರೆ ನಮ್ಮ ವೇದಾಂತಿಗಳಾದ ಬೋಧಕರು

ಅಶಾಸ್ತ್ರೀಯ ಪದ್ಧತಿಯಲ್ಲಿ ಕಾಣಿಸುವ ಕೆಲವು ಅವಯವಗಳನ್ನು ಕಾಣಿಸದ ಸೂಕ್ಷ್ಮಶರೀರವಾಗಿಯೂ, ಕಾಣಿಸದ ಕೆಲವು ಭಾಗಗಳನ್ನು ಕಾಣಿಸುವ ಸ್ಥೂಲಶರೀರವಾಗಿಯೂ ಹೇಳುತ್ತಿದ್ದಾರೆ. ಈ ವಿಷಯ ಅಸತ್ಯವಾಗಿ ಕಾಣಿಸುತ್ತಿದ್ದರೂ ವೇದಗಳ ಅಂತ್ಯದಲ್ಲಿರುವ ಉಪನಿಷತ್ ಹೆಸರನ್ನು ನಿರೂಪಣೆಯಾಗಿ ತೋರಿಸುತ್ತಾ ಹೇಳುವುದು ಎಂತಹ ಅಕ್ರಮಮಾರ್ಗವೋ ನೋಡಿರಿ. **"ಯೋಗ ಚೂಡಾಮಣಿ"** ಎಂದು ಹೆಸರಿರುವ ಒಂದು ಉಪನಿಷತ್ತಿನಲ್ಲಿ ಕಾಣಿಸದ ಸೂಕ್ಷ್ಮಶರೀರವನ್ನು ಕುರಿತು ಅದು 17 ಭಾಗಗಳಾಗಿ ಇದೆಯೆಂದು ಹೇಳುತ್ತಾ "ಜ್ಞಾನ ಕರ್ಮೇಂದ್ರಿಯೈಃ ಪ್ರಾಣಾದಿ ಪಂಚವಾಯು ಮನೋ ಬುದ್ಧಿಶ್ಚ ಸೂಕ್ಷ್ಮಲಿಂಗ ಮಿತ್ಯುಚ್ಯತೇ" ಎಂದು ಹೇಳಿದ್ದಾರೆ. ಈ ಶ್ಲೋಕವನ್ನು ವಿವರಿಸಿ ನೋಡಿದರೆ ಜ್ಞಾನ ಕರ್ಮೇಂದ್ರಿಯೈಃ ಎಂದರೆ ಜ್ಞಾನೇಂದ್ರಿಯಗಳು ಐದು ಮತ್ತು ಕರ್ಮೇಂದ್ರಿಯಗಳು ಐದು ಎಂದು ಅರ್ಥ. ಪ್ರಾಣಾದಿ ಪಂಚವಾಯು ಎಂದರೆ ಪ್ರಾಣವಾಯುವು ಮೊದಲಾದ ಐದು ವಾಯುಗಳೆಂದು ಅರ್ಥ. ಮನೋ ಬುದ್ಧಿಶ್ಚ ಎಂದರೆ ಮನಸ್ಸು, ಬುದ್ಧಿ ಅನ್ನುವವೆಂದು ಎರಡೆಂದು ಅರ್ಥ. ಸೂಕ್ಷ್ಮಲಿಂಗಮಿತ್ಯುಚ್ಯತೇ ಎಂದರೆ ಕಾಣಿಸದ ಸೂಕ್ಷ್ಮಶರೀರವೆಂದು ಹೇಳುತ್ತಿದ್ದೇವೆ ಎಂದು ಅರ್ಥ. ಇದರ ಪೂರ್ತಿ ವಿವರ ಹೇಳಿಕೊಂಡರೆ ಐದು ಜ್ಞಾನೇಂದ್ರಿಯಗಳೂ, ಐದು ಕರ್ಮೇಂದ್ರಿಯಗಳೂ, ಐದು ಪ್ರಾಣವಾಯು ಮೊದಲಾದ ವಾಯುಗಳೂ, ಮನಸ್ಸು ಬುದ್ಧಿ ಎರಡು ಕಾಣಿಸದ ಶರೀರವೆಂದು ಹೇಳುತ್ತಿದ್ದೇವೆ ಎಂದು ಇದೆ. ಇಲ್ಲಿ ಯೋಚಿಸುವ ಪ್ರತಿ ಒಬ್ಬನಿಗೂ ಈ ಮಾತು ಅಸತ್ಯವೆಂದು ತಿಳಿಯುತ್ತಿದೆ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಅನ್ನುವ ಐದು ಜ್ಞಾನೇಂದ್ರಿಯಗಳು ಎಲ್ಲರಿಗೂ ಕಾಣಿಸುತ್ತಿವೆ. ಹಾಗೆಯೇ ಕಾಲು, ಕೈಗಳು, ಬಾಯಿ, ಗುದ, ಲಿಂಗ ಅನ್ನುವ ಕರ್ಮೇಂದ್ರಿಯಗಳು ಐದು ಎಲ್ಲರಿಗೂ ಕಾಣಿಸುತ್ತಲೇ ಇವೆ. ಇವುಗಳನ್ನು ಕಾಣಿಸದವುಗಳಾಗಿ ಹೇಳುವುದು ಘೋರವಾದ ಅಸತ್ಯವಲ್ಲವೆ! ಉಳಿದ ಪ್ರಾಣವಾಯುಗಳು ಮೊದಲಾದ ಐದು ವಾಯುವುಗಳೂ, ಮನಸ್ಸು ಬುದ್ಧಿ ಎರಡು ಸೇರಿ ಒಟ್ಟು ಏಳು ಕಾಣಿಸದ ಭಾಗಗಳೇ ಎಂದು ನಾವು ಸಹ ಒಪ್ಪಿಕೊಳ್ಳುತ್ತಿದ್ದೇವೆ. ಶ್ಲೋಕದಲ್ಲಿನ 17

ಭಾಗಗಳನ್ನೂ ಕಾಣಿಸದ ಸೂಕ್ಷ್ಮ ಶರೀರವಾಗಿ ಲೆಕ್ಕಿಸಿದರೆ ಶರೀರದಲ್ಲಿನ 25ರಲ್ಲಿ ಉಳಿದ 8 ಭಾಗಗಳು ಕಾಣಿಸುವ ಭಾಗಗಳಾಗಿ ಲೆಕ್ಕಿಸಬೇಕಾಗಿರುತ್ತದೆ. ಅಂತಃಕರಣಗಳಲ್ಲಿ ಮನಸ್ಸು ಬುದ್ಧಿ ಹೋಗಿ ಉಳಿದ ಚಿತ್ತ. ಅಹಮ್, ಜೀವಿಯು ಕಣ್ಣಿಗೆ ಕಾಣಿಸುವ ಭಾಗಗಳಾ? ಹಾಗೆಯೇ ದೃಷ್ಠಿ, ಶ್ರವಣ, ಸ್ಪರ್ಶ,ವಾಸನೆ, ರುಚಿ ಕಣ್ಣಿಗೆ ಕಾಣಿಸುವ ಸ್ಥೂಲ ಭಾಗಗಳಾ? ಇಲ್ಲಿಯವರೆಗೂ ಯಾರಿಗೂ ಈ ಎಂಟು ಭಾಗಗಳು ಕಾಣಿಸಲಿಲ್ಲ. ಯಾರೂ ನೋಡದ ಎಂಟು ಭಾಗಗಳನ್ನು ಸ್ಥೂಲವೆನ್ನುವುದು ವಿಚಿತ್ರವಲ್ಲವೆ! ಘೋರವಾದ ಅಸತ್ಯವಲ್ಲವೆ! ಸಂಸ್ಕೃತದಲ್ಲಿ ಏನು ಹೇಳಿದರೂ ಸರಿಹೋಗುತ್ತದೆಂದು, ವೇದಗಳೆಂದು ಹೇಳಿದರೆ ಯಾರೂ ಎದುರು ಮಾತನಾಡುವುದಿಲ್ಲವೆಂದು, ಉಪನಿಷತ್ತುಗಳ ಹೆಸರು ಹೇಳಿದರೆ ಸುಮ್ಮನೆ ಕೇಳುತ್ತಾರೆಂದು ಅಂದುಕೊಳ್ಳುವುದು ತಪ್ಪು. ಸತ್ಯಾನ್ವೇಷಣೆ ಮಾಡುವ ವರಿಗೆ, ಶಾಸ್ತ್ರಬದ್ಧತೆಯನ್ನು ನೋಡುವವರಿಗೆ ವಾಸ್ತವ ಕಾಣಿಸುತ್ತದೆ. ವಾಸ್ತವ ತಿಳಿದ ನಂತರ ವೇದಗಳನ್ನಾದರೂ ಖಂಡಿಸದೆ ತಪ್ಪುವುದಿಲ್ಲ. ವೇದಗಳನ್ನು ಅಶಾಸ್ತ್ರಗಳೆಂದು ಹೇಳದೆ ತಪ್ಪುವುದಿಲ್ಲ.

ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ವಾಸ್ತವ ಜ್ಞಾನವನ್ನನುಸರಿಸಿ ನೋಡಿದರೆ ಶರೀರದಲ್ಲಿ ಆತ್ಮದಜೊತೆ ಒಟ್ಟು 26 ಭಾಗಗಳಿವೆ ಎಂದು ತಿಳಿಯುತ್ತಿದೆ. ಆತ್ಮ ಜೀವಾತ್ಮ ವಿನಹಃ ಪ್ರಕೃತಿಯಿಂದ ತಯಾರಾದ 24 ಭಾಗಗಳಿಗೆ ಆತ್ಮ ಅಧಿಪತಿಯಾಗಿದ್ದು 24 ಭಾಗಗಳಿಂದ ಕೆಲಸ ಮಾಡಿಸುತ್ತಿದೆ. 24 ಭಾಗಗಳು ಮಾಡಿದ ಕೆಲಸದಲ್ಲಿನ ಸುಖದುಃಖಗಳನ್ನು ಮಾತ್ರ ಜೀವಾತ್ಮ ಅನುಭವಿಸುತ್ತಿದ್ದಾನೆ. ಇದನ್ನೇ ಒಂದು ವಿಧವಾಗಿ ಹೇಳಿಕೊಂಡರೆ ಶರೀರವೆಂಬ ಮನೆಯಲ್ಲಿ 24 ಮಂದಿ ಕೆಲಸ ಮಾಡುತ್ತಿರುವಾಗ, ಆತ್ಮ ಮಾಡಿಸುತ್ತಿರುವಾಗ, ಜೀವಾತ್ಮ ಏನು ಮಾಡದೆ ಪಕ್ಕದಲ್ಲಿದ್ದು ಫಲಿತವನ್ನು ಮಾತ್ರ ಅನುಭವಿಸುತ್ತಿದೆ. ಶರೀರ ಗೃಹದಲ್ಲಿ ಮಾಡಿಸುವವರಾಗಲಿ, ಮಾಡುವವರಾಗಲಿ ಯಾರೂ ಯಾವ ಫಲಿತವನ್ನು ಅನುಭವಿಸುತ್ತಿಲ್ಲ. ಆದರೆ ಮಾಡದೆ ಮಾಡಿಸದೆ ಪಕ್ಕದಲ್ಲಿದ್ದು ಕೇವಲ ನೋಡುವವನೇ ಸಾರವನ್ನು ಪಡೆಯುತ್ತಿದ್ದಾನೆ. ಎಷ್ಟೋ ಔನ್ನತ್ಯವಾದ ಆತ್ಮ

ಪ್ರಕೃತಿಯಲ್ಲಿ ತಯಾರಾದ 24 ಜನ ಅವಯವಗಳೆಂಬ ಕೆಲಸದವರಿಂದ ಕರ್ಮ ಎಂಬ ಕೆಲಸವನ್ನು ಮಾಡಿಸಿದಾಗ ಜೀವಿಯ ಹತ್ತಿರವಿರುವ ಕರ್ಮ ಮುಗಿದು ಹೋಗುತ್ತಿದೆ. ಜೀವಿಗೆ ಇರುವ ಕರ್ಮ ಮುಗಿದುಹೋಗುವುದೇ ಒಳ್ಳೆಯ ಫಲಿತ. ಜೀವಿಗೆ ತಲೆಮೇಲಿರುವ ಕರ್ಮ ಇಳಿದುಹೋಗುವುದು ಒಳ್ಳೆಯ ಸಾರವಾಗುತ್ತಿದೆ. ಆದ್ದರಿಂದ ಜೀವಿಗದು ಸಂಸಾರವಾಗುತ್ತಿದೆ. ತನಗಿರುವ ಕರ್ಮವನ್ನು ಯಾರೊ ಪಕ್ಕದವರು ಮಾಡಿದಾಗ, ಇನ್ನೊಬ್ಬರು ಮಾಡಿಸಿದಾಗ, ತನಗೆ ಕರ್ಮ ಹೋಗುತ್ತಾ ಒಳ್ಳೆಯ ಫಲಿತ ದಕ್ಕುತ್ತಿದೆ. ಆದ್ದರಿಂದ ಜೀವಿಗದು ಸಂಸಾರವಾಗುತ್ತದೆ. ಜೀವಿಗದು ಸಂಸಾರವಾಗಿದ್ದು ಜೀವಿಗೆ ತಿಳಿಯದೆಯೇ ಸಂಪಾದನೆ ಸಹ ಇದೆ. ಸಂಸಾರದಲ್ಲಿಯೇ ಕಾಣಿಸದೆ ಅಡಗಿದ್ದು ಬರುವುದೇ ನಾದರೆ ಇದೆಯೋ ಅದು ಸಂಪಾದನೆ ಆಗುತ್ತದೆ. ಇದರಿಂದ ನೋಡಿದರೆ ಸಂಸಾರದಿಂದ ಹುಟ್ಟಿರುವುದೇ ಸಂಪಾದನೆ ಎಂದು ತಿಳಿಯಬೇಕು. ಪ್ರತಿ ಮನುಷ್ಯನಿಗು ಸಂಸಾರವಿದೆ ಎಂದು ತಿಳಿದಿದೆ ಮತ್ತು ಸಂಪಾದನೆ ಸಹ ಇದೆಯೆಂದು ತಿಳಿದಿದೆ. ಆದರೆ ಸಂಸಾರ ಸಂಪಾದನೆ ಎರಡು ಹೊರಗೆ ಇವೆಯೆಂದು ಮನುಷ್ಯ ಅಂದುಕೊಳ್ಳುತ್ತಿದ್ದಾನೆ. ಸಂಸಾರ, ಸಂಪಾದನೆ ಒಳಗೆ ಇವೆಯೆಂಬ ಯಾಥಾರ್ಥ ಬಹಳಜನರಿಗೆ ತಿಳಿದಿಲ್ಲ.

ಯಾರಾದರೂ ಆತ್ಮಜ್ಞಾನವನ್ನು ತಿಳಿದವನಾದರೆ ಯಾವಾಗಲೂ ಸಂಸಾರವನ್ನು ಹೊಂದಿದ್ದರೂ, ಸಂಪಾದನೆ ಹೊಂದಿದ್ದರೂ ಸನ್ಯಾಸವನ್ನು ಸಹ ಹೊಂದಿರುತ್ತಾನೆ. ಶರೀರದೊಂದಿಗೆ ಇದ್ದು ಶರೀರದೊಳಗೆ ಸಂಸಾರವನ್ನು ಮಾಡದವನು, ಸಂಪಾದನೆಯನ್ನು ಹೊಂದದವನು ಎಂದಿಗೂ ಸನ್ಯಾಸಿ ಯಾಗಲಾರನು. ಸಂಸಾರ ಸಂಪಾದನೆ ಇರುವಾಗಲೇ ಯಾರಾದರು ಜ್ಞಾನವನ್ನು ತಿಳಿದಾಗ ಸನ್ಯಾಸವನ್ನು ಹೊಂದಬಲ್ಲನು. ಈ ವಿಷಯವನ್ನೇ ಭಗವದ್ಗೀತೆಯಲ್ಲಿ ಆತ್ಮ ಸಂಯಮ ಯೋಗ 1ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

ಶ್ಲೋ॥ ***ಆನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿಯಃ***
***ಸಸನ್ಯಾಸೀಚ ಯೋಗೀಚ ನನಿರಗ್ನಿ ರ್ನಚಾಕ್ರಿಯಃ***

ಹೊಸದಾಗಿ ಬರುವ ಕರ್ಮ ಫಲವಾದಂತಹ ಸಂಪಾದನೆಮೇಲೆ ಧ್ಯಾಸ ಇಲ್ಲದಂತೆ, ಹಳೆ ಕರ್ಮಪ್ರಕಾರ ಕೆಲಸಗಳು ಮಾಡುತ್ತಿರುವವನು ನಿಜವಾದ ಸನ್ಯಾಸಿಯೆಂದೂ, ಜ್ಞಾನಾಗ್ನಿ ಇಲ್ಲದಂಥವನಾಗಲಿ, ಕೆಲಸಗಳು ಮಾಡದಂತೆ ಬಿಟ್ಟವನಾಗಲಿ, ಸನ್ಯಾಸಿ ಅಲ್ಲವೆಂದು ತಿಳಿಯುತ್ತಿದೆ. ಇದರಪ್ರಕಾರ ಹಳೆಕರ್ಮದ ಪ್ರಕಾರ ಕೆಲಸಗಳು ಮಾಡುವುದು ಸಂಸಾರವೆಂದು, ಸಂಸಾರದಲ್ಲಿ ಬರುವ ಕರ್ಮವನ್ನು ಸಂಪಾದನೆ ಎಂದು, ಸಂಪಾದನೆ ಇಲ್ಲದವನು ಅಂದರೆ ಕೆಲಸಗಳು ಮಾಡದವನು ಜ್ಞಾನವೆಂಬ ಅಗ್ನಿ ಇಲ್ಲದವನು ಸನ್ಯಾಸಿಯಾಗಲಿ ಯೋಗಿಯಾಗಲಿ ಆಗಲಾರನು ಎಂದು ಹೇಳಿದ್ದಾರೆ. ಇದರಿಂದ ಪ್ರತಿ ಮನುಷ್ಯನಿಗೆ ಶರೀರದಲ್ಲಿಯೇ ಜೀವಿಗೆ 25 ಜನ ಸಭ್ಯರಜೊತೆ ಕೂಡಿದ ಸಂಸಾರವಿದೆ ಎಂದು ತಿಳಿಯುತ್ತಿದೆ. ಶರೀರದೊಳಗೇ ಸಂಸಾರವಿದೆ ಎಂದು ತಿಳಿಯದವರು ಬಹಳಜನ ಹೆಸರು ವಾಸಿಯಾದ ವ್ಯಕ್ತಿಗಳಾಗಿದ್ದು ಹೊರಗಿನ ಕುಟುಂಬವನ್ನು ಸಂಸಾರವೆಂದುಕೊಂಡು ಅದನ್ನು ಬಿಡುವುದು ಒಳ್ಳೆಯದೆಂದುಕೊಂಡು, ಹೊರಗಿನ ಸಂಸಾರವನ್ನು ಬಿಡುವುದು ಸನ್ಯಾಸವೆಂದುಕೊಂಡು, ಅಂತಹ ಸನ್ಯಾಸಕ್ಕೋಸ್ಕರ ಕುಟುಂಬವನ್ನು ಬಿಟ್ಟುಹೋಗುವವರು ಎಷ್ಟೋ ಜನ ಇದ್ದಾರೆ. ಅಂಥವರಲ್ಲಿ ಗೌತಮಬುದ್ಧನು ಸಹ ಇದ್ದಾನೆ. ಮೊದಲು ಗೌತಮಬುದ್ಧನಿಗೆ ಜ್ಞಾನ ತಿಳಿದಿಲ್ಲ ಆದ್ದರಿಂದ ಇತರರನ್ನು ಅನುಸರಿಸಿ ತಾನು ಸಹ ಕುಟುಂಬವನ್ನು ಬಿಟ್ಟರೆ ಸನ್ಯಾಸವಾಗುತ್ತದೆಂಬ ಉದ್ದೇಶದಿಂದ ಹಾಗೆ ಹೆಂಡತಿ ಮಕ್ಕಳನ್ನು ಬಿಟ್ಟುಹೋಗಿದ್ದಾನೆ. ಈ ವಿಧವಾಗಿ ಎಷ್ಟೋ ಜನ ತಿಳಿಯದತನದಿಂದ ಹೊರಗಿನ ಕುಟುಂಬವನ್ನು ಸಂಸಾರ ವೆಂದುಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಸಂಸಾರ ಶರೀರದೊಳಗೇ ಇದೆಯೆಂದು, ಅರಣ್ಯಕ್ಕೆ ಹೋದರೂ ಅದು ತಮ್ಮನ್ನು ಬಿಡುವುದಿಲ್ಲವೆಂದು ತಿಳಿಯದಂತಿದ್ದಾರೆ. ಹೊರಗಿನ ಆತಂಕಗಳಿಂದ ಕಷ್ಟವಾಗಿ ಸಾಗುವುದು ಕುಟುಂಬವೆಂದು, ಹೊರಗಿನ ಕುಟುಂಬವನ್ನು ಯಾರಾದರೂ ಬಿಡಬಹುದು. ಆದರೆ ಒಳಗಿರುವ ಸಂಸಾರವನ್ನು

ಯಾರು ಬಿಡಲಾರನೆಂದು ತಿಳಿಯಬೇಕು. ಸಂಸಾರ ಇರುವಾಗಲೇ, ಸಂಸಾರವನ್ನು ಮಾಡುತ್ತಿರುವಾಗಲೇ ಜ್ಞಾನವನ್ನು ಸಂಪಾದಿಸಿಕೊಂಡರೆ, ಸನ್ಯಾಸವನ್ನು ಹೊಂದಬಹುದೆಂದು ತಿಳಿಯಬೇಕು. ಹಾಗಲ್ಲದೆ ಕುಟುಂಬವನ್ನು ಸಂಸಾರವೆಂದು ಭ್ರಮಿಸಿ ಅದನ್ನು ಬಿಡುವುದು ಸಂಸಾರ ಅಲ್ಲವೆಂದು ತಿಳಿಯಬೇಕು. ಇದರಿಂದ ಭಗವದ್ಗೀತೆಯಲ್ಲಿ ಹೇಳಿದಂತೆ ಕೆಲಸಗಳು ಮಾಡುತ್ತಿರುವಾಗಲೇ ಸಂಸಾರ ಸಂಪಾದನೆ ಇರುವಾಗಲೇ ಸನ್ಯಾಸ ಇರುತ್ತದೆಂದು ತಿಳಿಯುತ್ತಿದೆ. ಜ್ಞಾನಿಗಾದರೂ ಅಜ್ಞಾನಿಗಾದರೂ ಒಳಗಿನ ಸಂಸಾರವಿದೆ. ಆದರೆ ಜ್ಞಾನಿ ಆದವನು ಒಳಗೇ ಸನ್ಯಾಸಿ ಆಗಬಲ್ಲನು.

# ನಮ್ಮ ಕೊನೆಯ ಮಾತು

ಪ್ರಸ್ತುತ ಕಾಲದಲ್ಲಿ ವಿಜ್ಞಾನ ಎಷ್ಟೋ ಬೆಳೆದು ಹೋಗಿದೆ. ಪ್ರಪಂಚ ಹುಟ್ಟಿದಾಗಿನಿಂದ 50 ವರ್ಷಗಳ ಕೆಳಗಿನವರೆಗೂ ಶೇ.ಹತ್ತರಷ್ಟು ಮಾತ್ರವೇ ಬೆಳೆದ ವಿಜ್ಞಾನ ಈ 50 ವರ್ಷಗಳಲ್ಲಿ ಶೇ.90 ರಷ್ಟು ಬೆಳೆದುಹೋಗಿದೆ. ವಿಜ್ಞಾನ ಬೆಳೆದುಹೋದಂತೆಲ್ಲಾ ಮನುಷ್ಯರಲ್ಲಿ ದೈವಜ್ಞಾನದ ಮೇಲೆ ಆಸಕ್ತಿ ಇಲ್ಲದಂತೆಹೋಗಿದೆ. ವಿಜ್ಞಾನ ಅಥವಾ ಸೈನ್ಸಿನಿಂದಲೇ ಎಲ್ಲಾ ಕಂಡುಹಿಡಿ ಯುತ್ತಿದ್ದೇವೆ, ಸೈನ್ಸಿನಿಂದಲೇ ಎಲ್ಲಾ ನೆರವೇರುತ್ತಿವೆ, ಮಧ್ಯದಲ್ಲಿ ದೇವರ ಪಾತ್ರವೇನು ಅವನ ಅಡ್ರಸ್ ಏನೆಂದು ಕೆಲವರು ವಿಜ್ಞಾನಿಗಳು ಪ್ರಶ್ನಿಸುತ್ತಿದ್ದಾರೆ. ದೇವರೆಂಬುವ ವನು ಪ್ರಜೆಗಳ ಮೂಢನಂಬಿಕೆಯೇ ಆಗಲಿ ವಾಸ್ತವ ಅಲ್ಲವೆನ್ನುತ್ತಿದ್ದಾರೆ. ಸ್ವಲ್ಪವೂ ಸೈನ್ಸು ತಿಳಿಯದವರೇ ದೇವರಿದ್ದಾನೆಂದು ವಾದಿಸುತ್ತಿದ್ದಾರೆ, ಅದನ್ನು ನಾವು ಒಪ್ಪಿಕೊಳ್ಳುವುದಿಲ್ಲ ಎನ್ನುತ್ತಿದ್ದಾರೆ. ಪ್ರಯೋಗಶಾಲೆಯಲ್ಲಿ ನಿರೂಪಿಸಲ್ಪಡದಿರುವು ದನ್ನು ಮೂಡನಂಬಿಕೆ ಎಂದು, ದೇವರು ಪ್ರಯೋಗಗಳಿಗೆ ನಿರೂಪಣೆಗೆ ಬಾರದವನಾದ್ದರಿಂದ ದೇವರೆಂಬ ಮಾತು ನೀರಿನಮೂಟೆ ಅನ್ನುತ್ತಿದ್ದಾರೆ. ಈ ವಿಧವಾಗಿ ವಿಜ್ಞಾನವೆಂಬುವ ಸೈನ್ಸು ಬೆಳೆದು ಹೋಗುವುದರಿಂದ

ಅಜ್ಞಾನವೆಂಬ ನಾಸ್ತಿಕವಾದ ಬೆಳೆದುಹೋಗಿದೆ. 50 ವರ್ಷಗಳ ಕೆಳಗೆ ಇಲ್ಲದ ಹೊಸವಾದಗಳಿಂದ ಕೆಲವು ಹೇತುವಾದ ಸಂಘಗಳು ಹುಟ್ಟಿಬಂದಿವೆ. ನಮ್ಮ ಪ್ರಶ್ನೆಗೆ ಯಾರಾದರೂ ಉತ್ತರ ಹೇಳಿದರೆ ನಾವು ಸಹ ಆಸ್ತಿಕರಾಗಿ ಬದಲಾಗಿಹೋಗುತ್ತೇವೆಂದು, ಹೇಳಲಾರದೆಹೋದರೆ ನೀವೂ ಸಹ ನಮ್ಮ ಹೇತುವಾದ ಸಂಘದಲ್ಲಿ ಸೇರಿಹೋಗಬೇಕೆಂದು ಪ್ರಕಟಿಸುತ್ತಿದ್ದಾರೆ. ಮೊದಲಿಗೇ ಅವರ ಪ್ರಶ್ನೆಗಳಲ್ಲಿ ಹೇತು ಇರುವುದಿಲ್ಲ. ಹೇತುವಾದವೆಂಬ ಹೆಸರಿನಿಂದ ಇದ್ದರೂ ಅವರು ನಾಸ್ತಿಕಗುಂಪಿಗೆ ಸೇರಿದವರೆ, ಆದ್ದರಿಂದ ಅವರ ಪ್ರಶ್ನೆಗಳಿಗೆ ಉತ್ತರ ಹೇಳಬೇಕೆಂದು ನೋಡಿದರೂ, ಎದರಿಗಿರುವ ವ್ಯಕ್ತಿ ಹೇಳುವುದೆಲ್ಲಾ ಅಸತ್ಯವೇ ಎಂದು ಗೋಡೆಕಟ್ಟಿಕೊಂಡು ಕುಳಿತುಕೊಂಡಂತೆ ಎಂತಹ ಸತ್ಯವನ್ನು ಹೇಳಿದರೂ ಖಂಡಿಸುವುದೇ ನಮ್ಮವೃತ್ತಿ ಅನ್ನುವಂತೆ ಕೇಳದಂತೆ ಎಲ್ಲವನ್ನು ಅಲ್ಲವೆನ್ನುತ್ತಿರುತ್ತಾರೆ. ನಮಗೆ ತಿಳಿದಿರುವುದು ಹೊರತು ಉಳಿದಿರುವುದು ಏನಾದರೂ ಎಲ್ಲಾ ಅಸತ್ಯವೇ ಅನ್ನುವ ನಿರ್ಣಯದಲ್ಲಿ ಇರುತ್ತಾರೆ. ಆದ್ದರಿಂದ ಅಂತಹವರನ್ನು ಹೇತುವಾದಿಗಳು ಎನ್ನಬಾರದು. ಅವರನ್ನು ನಾಸ್ತಿಕವಾದರೆಂದೇ ಅನ್ನಬೇಕು. ಹೀಗೆ ಹೇತುವಾದವೆಂಬ ಮುಸುಗಿನಲ್ಲಿ ನಾಸ್ತಿಕವಾದ ಬೆಳೆದುಹೋಗಿದೆ. ನಾವು ನಾಸ್ತಿಕರು ಅಲ್ಲ ಸತ್ಯಾನ್ವೇಷಿಗಳೆಂದು, ಕಾಣಿಸುವ ಭೌತಿಕವನ್ನು ಒಪ್ಪಿಕೊಳ್ಳುತ್ತೇವೆ, ಕಾಣಿಸದ ಅಭೌತಿಕವನ್ನು ಒಪ್ಪಿಕೊಳ್ಳುವುದಿಲ್ಲ ಎಂದು ಹೇಳುವವರು ಕೆಲವರು ಇದ್ದಾರೆ. ದೇವರು ಕಾಣಿಸದ ಅಭೌತಿಕ ವಾದ್ದರಿಂದ ಅದನ್ನು ಯಾರಾದರೂ ನಿರೂಪಿಸುತ್ತಾರಾ? ಎಂದು ಹಾಗೆ ನಿರೂಪಿಸುತ್ತೇವೆ ಎನ್ನುವವರು ಯಾರಾದರೂ ಇದ್ದರೆ, ನಿರೂಪಿಸಿದರೆ, ನಾವು ಸಹ ನಿಮ್ಮಂತೆ ಆಸ್ತಿಕರಾಗಿ ಬದಲಾಗುತ್ತೇವೆಂದು, ಹಾಗೆ ನೀವು ನಿರೂಪಿ ಸದೆಹೋದರೆ ನೀವು ನಮ್ಮ ಸಂಘದಲ್ಲಿ ಸೇರಿಹೋಗಿ ದೇವರು ಇಲ್ಲವೆಂದು ಪ್ರಚಾರ ಮಾಡಬೇಕೆಂಬ ನಿಯಮವನ್ನು ಒಪ್ಪಿಕೊಂಡಂತೆ ಬರಹರೂಪದಲ್ಲಿ ಬರೆದುಕೊಳ್ಳೋಣ ಎನ್ನುತ್ತಿರುತ್ತಾರೆ. ಅಂತಹವರಜೊತೆ ಯಾರಾದರೂ ಮಾತನಾಡಿ ಸಮಾಧಾನ ಹೇಳಿನೋಡಿದರೆ, ಸೈನ್ಸು ಅನ್ನುವಮಾತನ್ನು ಅಡವಿಟ್ಟು

ಅಸತ್ಯವಾದನೆ ಮಾಡುತ್ತಾ ಏಂತಹ ಸತ್ಯವನ್ನಾದರೂ ಅಸತ್ಯವಾಗಿ ಪ್ರಕಟಿಸುತ್ತಾ ತಾವೇ ನಿಜವಾದ ಸತ್ಯವಾದಿಗಳೆನ್ನುತ್ತಿರುತ್ತಾರೆ. ಈ ವಿಧವಾಗಿ ನಾಗರಿಕತೆ ವಿಜ್ಞಾನ ಎಷ್ಟೊಂದು ಬೆಳೆದರು ಕಳೆದ 50 ವರ್ಷಗಳಲ್ಲಿ ಅಜ್ಞಾನ ವಿಜ್ಞಾನ ರೂಪದಲ್ಲಿ ಬೆಳೆದು, ಅದು ಅನೇಕ ಸಂಘಗಳಾಗಿ ವ್ಯಾಪಿಸಿ ದೇವರಿಗೆ ಅಡ್ರಸ್ಸೇ ಇಲ್ಲವೆನ್ನುತ್ತಿವೆ. ವಿಜ್ಞಾನ ವೇದಿಕೆಗಳೆಂದು, ಸತ್ಯಾನ್ವೇಷಿಗಳೆಂದು ಅನೇಕವಿಧಗಳ ಹೆಸರುಗಳು ಎಷ್ಟು ಇದ್ದರೂ ಅವು ಎಲ್ಲವೂ ವಿವಿಧ ಮುಖವಾಡಗಳು ಹಾಕಿಕೊಂಡ ನಾಸ್ತಿಕತ್ವಗಳೆಂದು ತಿಳಿಯಬೇಕು.

ಇನ್ನು ಆಸ್ತಿಕರ ವಿಷಯಕ್ಕೆ ಬಂದರೆ, 50 ವರ್ಷಗಳ ಕೆಳಗಿದ್ದ ಭಕ್ತಿಯನ್ನು ಈಗಿನ ಭಕ್ತಿಯನ್ನು ಹೋಲಿಸಿಕೊಂಡು ನೋಡಿದರೆ, ಎಷ್ಟೋ ಹಂತಗಳಷ್ಟು ಭಕ್ತಿ ಈಗಿನಕಾಲದಲ್ಲಿ ಬೆಳೆದಿದೆ ಎಂದು ಹೇಳಬಹುದು. 50 ವರ್ಷಗಳ ಕೆಳಗೆ ಇಲ್ಲದ ಹೊಸ ದೇವಾಲಯಗಳು ಎಷ್ಟೋ ಈಗ ತಯಾರಾಗಿವೆ. ಹೊಸ ಭಕ್ತಿ, ಹೊಸ ಆರಾಧನೆಗಳು ತಯಾರಾಗಿವೆ. ಶಿವಮಾಲೆ, ಅಯ್ಯಪ್ಪಮಾಲೆ ಎನ್ನುವ ಹೆಸರಿರುವ ಪೋಟಿಭಕ್ತಿ, ಪೋಟಿ ವೇಷಧಾರಣೆಗಳು ಎಷ್ಟೋ ತಯಾರಾಗಿವೆ. ಹಳೆ ದೇವಾಲಯಗಳು ಹಾಳುಬಿದ್ದುಹೋದರೂ ಎಷ್ಟೋ ಜನ ಹೊಸ ದೇವರುಗಳು, ಎಷ್ಟೋ ಹೊಸ ಆಲಯಗಳು ತಯಾರಾಗಿವೆ. ಪೂರ್ವಕಾಲದ ರಂಗನೂ, ರಾಮನೇ ಅಲ್ಲದೆ ಈ ದಿನ ನವೀನವಾಗಿ ಸಾಯಿಬಾಬಾ, ಅಯ್ಯಪ್ಪನಂತಹ ದೇವರುಗಳು ತಯಾರಾಗಿದ್ದಾರೆ. ಒಂದು ವಿಧವಾಗಿ ಹೇಳಿದರೆ ನಾಸ್ತಿಕತ್ವ ಅನೇಕ ರೂಪಗಳಲ್ಲಿ ಬೆಳೆದಂತೆ ಆಸ್ತಿಕತ್ವ ಸಹ ಅನೇಕರೂಪಗಳಾಗಿ ಪ್ರಜೆಗಳಲ್ಲಿ ಬೆಳೆದಿದೆಯೆಂದೇ ಹೇಳಬಹುದು. ಇನ್ನು ಸ್ವಾಮೀಜಿಗಳ ವಿಷಯಕ್ಕೆ ಬಂದರೆ ಅನೇಕ ವಿಧಗಳ ಭಕ್ತಿಯನ್ನು ಪ್ರಜೆಗಳಲ್ಲಿ ವ್ಯಾಪಿಸುವಂತೆ ಮಾಡಿದ ಸ್ವಾಮೀಜಿಗಳು ಸಹ ಬಹಳಜನ ಇದ್ದಾರೆ. 50 ವರ್ಷಗಳ ಕೆಳಗೆ ಕೇವಲ ಗುರುಗಳೆಂಬ ಹೆಸರುಹೊಂದಿದವರು ಮಾತ್ರ ಸ್ವಲ್ಪಜನ ಅಲ್ಲಲ್ಲಿ ಇರುತ್ತಿದ್ದರು. ಪ್ರಸ್ತುತಕಾಲದಲ್ಲಿ ಗುರುಗಳು, ಸ್ವಾಮೀಜಿಗಳು, ಬಾಬಾಗಳು, ಭಗವಾನ್‌ರು, ಭವಾನಿಗಳು, ಅವ್ವಗಳು,

ತಾತರು ಅನ್ನುವ ಹೆಸರಿರುವವರು ಪ್ರಜೆಗಳಿಂದ ಆಧರಣೆ ಹೊಂದುತ್ತಿದ್ದಾರೆ. ಇವರು ಒಬ್ಬೊಬ್ಬರು ಒಂದೊಂದು ದೇವರನ್ನು ಆರಾಧಿಸುತ್ತಾ, ಪ್ರಜೆಗಳನ್ನು ಆರಾಧಿಸುವಂತೆ ಮಾಡುತ್ತಾ ಪ್ರಜೆಗಳನ್ನು ಆ ದೇವತಾ ಭಕ್ತರನ್ನಾಗಿ ಬದಲಾಯಿಸುತ್ತಿದ್ದಾರೆ. ಪ್ರತ್ಯೇಕ ವೇಷಧಾರಣೆಗಳಿಂದ ಪ್ರತ್ಯೇಕ ಆರಾಧನೆಗಳಿಂದ ಪ್ರತ್ಯೇಕವಾದ ಸ್ವಾಮೀಜಿಯಾಗಿಯೋ, ಬಾಬಾ ನಾಗಿಯೋ, ಭಗವಾನ್‌ನಾಗಿಯೋ ಹೆಸರು ಪಡೆಯುತ್ತಿದ್ದಾರೆ. ಈ ವಿಧವಾಗಿ ಹೊರಗಿನ ಸಮಾಜದಲ್ಲಿ ಎಷ್ಟೋಜನ ಬೋಧಕರು ಅನೇಕ ಗೌರವಗಳು ಹೊಂದಿದ್ದಾರೆ. ಇದೆಲ್ಲವೂ 50 ವರ್ಷಗಳಿಂದ ಸ್ವಾಮೀಜಿಗಳ ಅಭಿವೃದ್ಧಿಯಾಗಿದ್ದು, ಮತ ವಿಷಯಗಳಿಗೆ ಬಂದರೆ 50 ವರ್ಷಗಳ ಕೆಳಗಿಲ್ಲದ ಮತದ್ವೇಷ, ಮತಹಿಂಸೆ, ಮತಪ್ರಚಾರ, ಮತ ಪ್ರಲೋಭೆಗಳು ಎಲ್ಲಾ ಬೆಳೆದು ಹೋಗಿವೆಯೆಂದೇ ಹೇಳಬಹುದು. ಪೂರ್ವದಲ್ಲಿದ್ದ ಮತ ಪ್ರಚಾರಕ್ಕಿಂತ ಈ ಕಾಲದಲ್ಲಯೇ ಮತಗಳ ಪ್ರಚಾರ ಹೆಚ್ಚಾಗಿಹೋಗಿದೆ. ಮತದಲ್ಲಿನ ದೈವತ್ವವನ್ನು ಬಿಟ್ಟು ಕೇವಲ ನಮ್ಮ ಕೆಲಸ ಮತಪ್ರಚಾರವೇ ಅನ್ನುವಂತೆ ಕ್ರೈಸ್ತರು ಬೋಧಿಸುತ್ತಾ ಮತವ್ಯಾಪ್ತಿಯನ್ನು ಮಾಡಬೇಕೆಂದು ನೋಡುತ್ತಿರುವಾಗ, ಕ್ಷೀಣಿಸಿಹೋಗುತ್ತಿರುವ ಹಿಂದೂಮತವನ್ನು ರಕ್ಷಿಸುವುದೇ ನಮ್ಮ ಕೆಲಸವೆಂದು ಕೆಲವು ಹಿಂದೂಸಂಸ್ಥೆಗಳು ತಯಾರಾಗಿವೆ. ಉದ್ದೇಶ ಒಳ್ಳೆಯದೇ ಆದರೂ ಸ್ವಮತ ರಕ್ಷಣೆಯಲ್ಲಿ ಬಿದ್ದುಹೋದ ಹಿಂದೂ ಸಂಸ್ಥೆಗಳು ಹಿಂದೂಮತದಲ್ಲಿನ ಜ್ಞಾನಯಾವುದು, ಹಿಂದುಗಳ ಧರ್ಮಗಳಾವುವು ಅನ್ನುವ ವಿಷಯ ತಿಳಿಯದ ಸ್ಥಿತಿಯಲ್ಲಿ ಇವೆ. **ದೈವ ಜ್ಞಾನವನ್ನು ಸ್ವಲ್ಪವೂ ತಿಳಿಯದಿರುವುದರಿಂದ ಭಗವದ್ಗೀತೆ ತಮ್ಮ ಜಾತಿ ಗ್ರಂಥವೆಂದು ಗುರುತಿಸಲಾರದ ಸ್ಥಿತಿಯಲ್ಲಿ ಇವೆ.** ದೈವಜ್ಞಾನವನ್ನು ಅರ್ಥ ಮಾಡಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಸೃಷ್ಟಿಕರ್ತ ಅನ್ನುವ ಪದವನ್ನು ಕ್ರೈಸ್ತವರಿಗೆ ಲೀಜಿಗೆಕೊಟ್ಟಂತೆ, **ಸೃಷ್ಟಿಕರ್ತ ಅನ್ನುವ ಪದ ಸನಾತನವಾಗಿದೆ ಎಂದು ಅದು ಭಗವದ್ಗೀತೆಯಲ್ಲಿದೆ ಎಂದು ತಿಳಿಯದೆ ಆ ಪದ ಕ್ರೈಸ್ತವರದೇ ಅನ್ನುತ್ತಿದ್ದಾರೆ.** ನಾವು ಈ ನಡುವೆ ಭಗವದ್ಗೀತೆಯಲ್ಲಿನ ಮೂರು ಶ್ಲೋಕಗಳಿಗೆ ಅರ್ಥ ಹೇಳಿದರೆ ಹೇಳಿರುವುದು

ಭಗವದ್ಗೀತೆ ಎಂದು, ಹೇಳಿದವನು ಅದ್ವೈತ ಸಿದ್ಧಾಂತವನ್ನು ತಿಳಿಸಿದ ಆದಿ ಶಂಕರಾಚಾರ್ಯನಂತೆ, ತ್ರೈತ ಸಿದ್ಧಾಂತವನ್ನು ತಿಳಿಸಿದ ಒಬ್ಬ ಆಚಾರ್ಯನೆಂದು ಯೋಚಿಸದೆ, ನಮ್ಮನ್ನು ಸಹ ಕ್ರೈಸ್ತರ ಕೆಳಗೆ ಜಮಕಟ್ಟಿ, ನಾನು ಹೇಳುವ ಧರ್ಮಬೋಧನೆ ಪರಮತ ಬೋಧನೆ ಅಂದಿದ್ದಾರೆಂದರೆ ಹಿಂದುಗಳ ರಕ್ಷಣೆ ಸಂಸ್ಥೆಗಳು ಎಷ್ಟು ಅಜ್ಞಾನ ಕುರುಡುತನದಲ್ಲಿವೆಯೋ ಹೇಳದೆಯೇ ತಿಳಿಯುತ್ತಿದೆ. ಸ್ವಧರ್ಮಯಾವುದೊ ಪರಧರ್ಮಯಾವುದೊ ತಿಳಿಯದ ಸ್ಥಿತಿಯಲ್ಲಿ ಕೆಲವರು ಹಿಂದೂಗಳಿದ್ದಾರೆ. ಮತದ್ವೇಷ, ಮತಹಿಂಸೆ ಪ್ರತಿಮತದಲ್ಲಿಯೂ ಅಂಟುವ್ಯಾಧಿಯಂತೆ ವ್ಯಾಪಿಸಿವೆ. ಪ್ರತಿ ಮತದಲ್ಲಿಯೂ ಅಜ್ಞಾನ ಜಾಗಮಾಡಿ ಕೊಂಡಿದೆ. ಆದ್ದರಿಂದ ಮನುಷ್ಯನಾದ ಪ್ರತಿಯೊಬ್ಬನು ದೇವರನ್ನು ತಿಳಿಯಲಾರದೆ ಹೋಗುತ್ತಿದ್ದಾನೆ. ಅಜ್ಞಾನ ಪ್ರತಿ ಮನುಷ್ಯನಲ್ಲಿಯೂ ವ್ಯಾಪಿಸಿದ ಜಾಡ್ಯವಾಗಿ ಹೋಗಿದೆ. ಇದೆಲ್ಲವೂ ಕಳೆದ 50 ವರ್ಷಗಳಿಂದ ಬೆಳೆದುಹೋಗಿದೆ. ಇಂತಹ ಅಪಾಯಕರವಾದ ಕಾಲದಲ್ಲಿ, ಪರಮತಗಳಿಗಿಂತ ಸ್ವಮತವಾದ ಹಿಂದೂಮತ ದಲ್ಲಿರುವವರೇ ನಾವು ಹೇಳುವ ಜ್ಞಾನವನ್ನು ಅರ್ಥ ಮಾಡಿಕೊಳ್ಳದೆ ನಮ್ಮನ್ನು ಶತ್ರುವಾಗಿ ನೋಡುವ ಈ ಕಾಲದಲ್ಲಿ, ನಮಗೆ ಬೇಸರಬಂದು ಹೊರಗೆ ಜ್ಞಾನವನ್ನೇ ಹೇಳಬಾರದೆಂಬ ನಿರುತ್ಸಾಹದಿಂದ ಇರುವಾಗ, 400 ವರ್ಷಗಳ ಕೆಳಗೇ ಒಂದು ತಾಳೆ ಎಲೆಗಳ ಗ್ರಂಥದಲ್ಲಿ ನಮ್ಮ ಆಶ್ರಮದ ಹೆಸರು ಇರುವಂತೆ, ನಮ್ಮ ಬೋಧನೆಗಳು ಉತ್ತಮ ವಾದವುಗಳೆಂದು ಬರೆದಂತೆ ತಿಳಿದಿದೆ. ಆ ಗ್ರಂಥಗಳನ್ನು ಸ್ವತಃ ನೋಡಿದವರು ನಮ್ಮ ಅಡ್ರಸ್‌ಗೋಸ್ಕರ ಹುಡುಕಿ ಕೊನೆಗೆ ನಮಗೆ ಆ ವಿಷಯವನ್ನು ತಿಳಿಸಿದ್ದಾರೆ. ನಾಲ್ಕುನೂರು ವರ್ಷಗಳ ಪೂರ್ವದಲ್ಲೇ ನಮ್ಮ ಬೋಧನೆ ಉತ್ತಮವಾದುದೆಂದು ಬರೆದವರಿದ್ದಾರೆಂದರೆ ಈಗ ನಮ್ಮ ಬೋಧನೆ ಯನ್ನು ಗುರುತಿಸದವರಿದ್ದರೂ ಲೋಪವೇನು ಇಲ್ಲವೆಂದುಕೊಂಡಿದ್ದೇವೆ. ಇಲ್ಲಿಗೆ ಎಷ್ಟೋ ಆಧ್ಯಾತ್ಮಿಕ ರಹಸ್ಯಗಳನ್ನು ತಿಳಿಸಿದ ನಾವು ಇನ್ನೂ ಕೆಲವು ರಹಸ್ಯಗಳನ್ನು ತಿಳಿಸಬೇಕೆಂಬ ಉದ್ದೇಶದಿಂದ ಇನ್ನೂ ಕೆಲವು ಗ್ರಂಥಗಳನ್ನು ಬರೆಯಬೇ

ಕೆಂದುಕೊಂಡಿದ್ದೇವೆ. ಇಲ್ಲಿಗೇ ನಾವು ಪುರಾಣ ರಹಿತವಾಗಿ, ಶಾಸ್ತ್ರಸಹಿತವಾಗಿ ಹೆಚ್ಚಿನ ಪುಸ್ತಕಗಳು ಬರೆದವರಾಗಿದ್ದೇವೆ. ಯಾರೆಷ್ಟು ಆಧ್ಯಾತ್ಮಿಕ ಪುಸ್ತಕಗಳು ಬರೆದರೂ ಅದರಲ್ಲಿ ಪುರಾಣ ತಪ್ಪದೆ ಇರುತ್ತದೆ. ಪುರಾಣ ಸಾಂಬಾರುಗಳಲ್ಲಿನ ಉಪ್ಪಿನಂತಹದ್ದು. ಅದು ಇಲ್ಲದೆ ಯಾವ ಪುಸ್ತಕ ರುಚಿಸುವುದಿಲ್ಲ. ಆದರೆ ನಮ್ಮ ರಚನೆಗಳು ಪುರಾಣರಹಿತವಾಗಿದ್ದು ಸಪ್ಪೆಯಾಗಿ ರುಚಿಯಿಲ್ಲದವಾಗಿ ಕಾಣಿಸಿದರೂ, ಪೋಷಕಗಳಿರುವ ಬಲವಾದ ಆಹಾರವಾಗಿ ಎಷ್ಟೋ ಜನ ಗುರುತಿಸಿದ್ದಾರೆ. ಇಲ್ಲಿಗೇ 40 ಪುಸ್ತಕಗಳಿಗೆ ಮೇಲೆ ನಾವು ಬರೆದಿದ್ದೇವೆ. ಸ್ವಲ್ಪ ಕಾಲದಲ್ಲಿಯೇ 50 ಪುಸ್ತಕಗಳು ತಯಾರಾ ಗುತ್ತವೆಂದು ಅಂದುಕೊಳ್ಳುತ್ತಿದ್ದೇವೆ. ಇಲ್ಲಿಗೇ ನಮ್ಮ ಪುಸ್ತಕಗಳು **ಸಂಚಲನಾತ್ಮಕ** ರಚನೆಗಳಾಗಿ ಹೆಸರುವಾಸಿಯಾಗಿವೆ. ನಂತರವೂ ಸಹ ಇಲ್ಲಿಯವರೆಗೂ ಭೂಮಿಮೇಲೆ ಯಾರೂ ಹೇಳದ, ಯಾರೂ ಬರೆಯದ, ಯಾರಿಗೂ ತಿಳಿಯದ ರಹಸ್ಯಗಳನ್ನೆ ನಿಮಗೆ ತಿಳಿಸುತ್ತೇವೆಂದು, ನಮ್ಮ ಪ್ರತಿ ಪುಸ್ತಕ ನಿಮಗೆ ಒಂದು ಹೊಸತನವನ್ನು ಕೈಗೂಡಿಸುತ್ತದೆಂದು ತಿಳಿಸುತ್ತಿದ್ದೇವೆ. ನಮ್ಮ ರಚನೆಗಳು ಕುಲ, ಮತಗಳಿಗೆ ಅತೀತವಾಗಿ ದೇವರ ಭಾವವನ್ನು ತಿಳಿಸುವವಾಗಿರಬೇಕೆಂದು ದೇವರನ್ನು ಕೋರಿಕೊಳ್ಳುತ್ತಾ ಮುಗಿ ಸುತ್ತಿದ್ದೇನೆ.

ಇಂತಿ

ತ್ರಿಮತ ಐಕ್ಯಕ ಗುರುವು, ತ್ರೈತಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**

**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

